# ಪ್ರಸ್ತಾವನೆ

ಜಗತ್ತಿನೊಳಗಿನ ದೇಶಗಳನ್ನೂ, ಆ ದೇಶದೊಳಗಿನ ಪರ್ವತ, ನದಿ, ಸರೋವರ, ಪಟ್ಟಣಗಳ ಹೆಸರುಗಳನ್ನೂ, ಅದರಂತೆ ಸಮುದ್ರ, ಭೂಶಿರ, ಆಖಾತ ಮುಂತಾದವುಗಳ ಹೆಸರುಗಳನ್ನೂ ಕೇವಲ ಮುಖೋದ್ಗತ ಮಾಡಿದರೆ ಭೂಗೋಲದ ಅಭ್ಯಾಸವಾಯಿತೆಂದು ಪೂರ್ವದಲ್ಲಿ ತಿಳಿಯುತ್ತಿದ್ದರು. ಆದರೆ ಈಗ ಈ ಪದ್ಧತಿಯು ತೀರ ಬದಲಾಗಿರುತ್ತದೆ. ಅದರಂತೆ ಬೇರೆ ಬೇರೆ ವಿಷಯಗಳನ್ನು ಅಭ್ಯಾಸಿಸುವ ರೀತಿಗಳಾದರೂ ಬದಲಾಗಿರುತ್ತವೆ. ಭೂಗೋಲ ವಿಷಯದಲ್ಲಂತೂ ಎಷ್ಟೋ ಹೊಸ ಹೊಸ ಸಂಗತಿಗಳು ಶೋಧಿಸಲ್ಪಟ್ಟದ್ದರಿಂದಲೂ, ಅದರೊಳಗೆ ಶಾಸ್ತ್ರೀಯ ಜ್ಞಾನದ ಬೆಳವಣಿಗೆಯಾಗಿದ್ದರಿಂದಲೂ, ಭೂಗೋಲವನ್ನು ಕಲಿಯುವ ಮತ್ತು ಕಲಿಸುವ ಹಳೇ ರೀತಿಗಳು ಈಗ ಉಪಯೋಗವಾಗುವದಿಲ್ಲ. ಪೃಥ್ವಿಯ ಮೇಲೆ ಬೇರೆ ಬೇರೆ ತರದ ಹವಾಮಾನಗಳು, ವನಸ್ಪತಿಗಳು, ಪ್ರಾಣಿಗಳು, ಬೆಳೆಗಳು, ಅದರಂತೆ ಮನುಷ್ಯನ ಜೀವನ ಮುಂತಾದವುಗಳ ಪರಸ್ಪರ ಸಂಬಂಧವು ಹೇಗೆ ಇರುತ್ತದೆ; ಮನುಷ್ಯನ ಜೀವನ ಕ್ರಮದ ಮೇಲೆ ಅವುಗಳ ಪರಿಣಾಮವೇನಾಗಿರುತ್ತದೆ; ಸುತ್ತಮುತ್ತಲಿನ ಪ್ರತಿಕೂಲವಾಗಿರುವ ನೈಸರ್ಗಿಕ ಸ್ಥಿತಿಗಳ ಕೂಡ ಹೋರಾಡಿ, ಪ್ರಸಂಗ ಬಿದ್ದರೆ ಅವುಗಳನ್ನು ಬದಿಗೊತ್ತಿ ಇಲ್ಲವೆ ಅವುಗಳ ಉಪಯೋಗವನ್ನು ಮಾಡಿಕೊಂಡು ತನ್ನ ಜೀವನವನ್ನು ಕಡಿಮೆ ಕಷ್ಟದಾಯಕವಾಗಿಯೂ, ಹೆಚ್ಚು ಸುಖಕರವಾಗಿಯೂ ಮಾಡುವದಕ್ಕಾಗಿ ಮನುಷ್ಯನ ಪ್ರಯತ್ನವು ಹೇಗೆ ಅವಿರತವಾಗಿ ಸಾಗಿರುತ್ತದೆ; ಮುಂತಾದ ಸಂಗತಿಗಳ ಅಭ್ಯಾಸವೇ ನಿಜವಾದ ಭೂಗೋಲದ ಅಭ್ಯಾಸವೆಂದು ಈಗ ದೃಢವಾಗಿ ನಂಬಲ್ಪಡಹತ್ತಿದೆ. ಆದ್ದರಿಂದ

ಆಧುನಿಕ ಶಿಕ್ಷಣ ಪದ್ಧತಿಯನ್ನನುಸರಿಸಿ ಈ ಪುಸ್ತಕವನ್ನು ಬರೆದಿರು
ತ್ತೇವೆ. ಈ ಪುಸ್ತಕವಲ್ಲಿಯ ವಿಷಯಗಳನ್ನು ಮಾಧ್ಯಮಿಕ ಶಾಲೆಯ
೮ ಮತ್ತು ೯ ನೇ ಇಯತ್ತೆಗಳ ಅಭ್ಯಾಸಕ್ರಮಕ್ಕನುಸರಿಸಿ ಬರೆಯಲ್ಪಟ್ಟಿರು
ವದು. ಈ ಅಭ್ಯಾಸಕ್ರಮದಲ್ಲಿ 'ಬ್ರಿಟಿಶ್ ಸಾಮ್ರಾಜ್ಯ' ವೆಂಬ ವಿವರಣೆ
ಯನ್ನು ಸೇರ್ಪಡಿಸಿದ್ದಾರೆ. ಆದರೆ ಆ ವಿವರಣೆಯು ಈಗ ಇಲ್ಲದಂತಾಗಿ
ಈ ಆವೃತ್ತಿಯಲ್ಲಿ ಆ ಹೆಸರನ್ನು ತೆಗೆದು ಅದರ ಬದಲಾಗಿ "ಬ್ರಿಟಿಶ್
ರಾಷ್ಟ್ರಕುಲ" ಎಂಬ ಹೆಸರಿನಿಂದ ರಾಷ್ಟ್ರಕುಲದಲ್ಲಿ ಸಮಾವೇಶಗೊಂಡ
ದೇಶಗಳ ಮಾಹಿತಿಯನ್ನು ಕೊಡಲಾಗಿರುವದು. ಮೊದಲಿನ ಆವೃತ್ತಿ
ಯಲ್ಲಿ ಯಾವ ವಿಷಯವು ಹಳೆಯದಾಗಿದ್ದಿತೋ ಅಂಥ ವಿಷಯವನ್ನು
ಪೂರ್ಣವಾಗಿ ಸುಧಾರಿಸಿ ಈ ಆವೃತ್ತಿಯಲ್ಲಿ ಸೇರ್ಪಡಿಸಿರುವದು.

ಮುಂಬಯಿ,<br>ಫೆಬ್ರುವರಿ, ೧೯೫೨. }

**ಲೇಖಕರು.**

# ಅ ನು ಕ್ರ ಮ ಣಿ ಕೆ

೧ನೇ ಪ್ರಕರಣ

# ಬ್ರಿಟಿಶ ನಡುಗಡ್ಡೆಗಳು

**ಬ್ರಿಟಿಶ ನಡುಗಡ್ಡೆಗಳು** ಯುರೋಪ ಖಂಡದ ವಾಯವ್ಯದಲ್ಲಿ ರುತ್ತವೆ. ಅವುಗಳಲ್ಲಿಯ ದೊಡ್ಡ ನಡುಗಡ್ಡೆಗೆ ಗ್ರೇಟ ಬ್ರಿಟನ್ ಎಂದು ಕರೆಯುತ್ತಾರೆ. ಅದರಲ್ಲಿಯ ಬೇರೆ ಬೇರೆ ಭಾಗಕ್ಕೆ ಇಂಗ್ಲಂಡ, ಸ್ಕಾಟಲಂಡ ಮತ್ತು ವೇಲ್ಸ ಎಂದು ಕರೆಯುತ್ತಾರೆ. ಪಶ್ಚಿಮ ದಿಕ್ಕಿನ ನಡುಗಡ್ಡೆಗೆ ಐರ್ಲಂಡ ಎಂದೆನ್ನುವರು. ಈಗ ಐರ್ಲಂಡದ ದಕ್ಷಿಣ ಕಡೆಯ ಬಹು ದೊಡ್ಡ ಭಾಗವು "ಐರಿಶ್ ರಿಪಬ್ಲಿಕ್" (ಪ್ರಜಾಸತ್ತಾಕ) ಎಂಬ ಹೆಸರಿನಲ್ಲಿ ರೂಢವಾಗಿದೆ. ಅದು ಸ್ವತಂತ್ರ ರಾಷ್ಟ್ರವಾಗಿದೆ. ಈಗ ಬ್ರಿಟನ್ ದೊಂದಿಗೆ ಅದರ ರಾಜಕೀಯ ಸಂಬಂಧವು ಉಳಿದಿರುವದಿಲ್ಲ. ಉತ್ತರ ದಿಕ್ಕಿನಲ್ಲಿಯ ತುಸು ಭಾಗವಾದ "ಉತ್ತರ ಐರ್ಲಂಡ" ಪ್ರದೇಶವು ಬ್ರಿಟಿಶ ಸರಕಾರದ ಅಧೀನದಲ್ಲಿದೆ. ಇದಲ್ಲದೆ "ಐಲ್ ಆಫ್ ಮ್ಯಾನ" ಮತ್ತು 'ಚ್ಯಾನಲ್' ಈ ನಡುಗಡ್ಡೆಗಳು ಬ್ರಿಟಿಶ್ ನಡುಗಡ್ಡೆಗಳಲ್ಲಿ ಸಮಾವೇಶವಾಗಿವೆ.

ಗ್ರೇಟ್ ಬ್ರಿಟನ್ ಮತ್ತು ಉತ್ತರ ಐರ್ಲಂಡ ಪ್ರದೇಶಗಳಿಗೆ 'ಯುನೈಟೆಡ್ ಕಿಂಗಡಮ್' (ಯು. ಕೆ.) ಎಂದು ಕರೆಯುತ್ತಾರೆ. ಈ ಯುನೈಟೆಡ್ ಕಿಂಗಡಮ್ ಪ್ರದೇಶದ ಕ್ಷೇತ್ರವು ೮೦,೦೦೦ ಚೌ. ಮೈಲು ಅಂದರೆ ಭಾರತದ ೧/೧೩ಕ್ಕೆ ದಷ್ಟು ಇದ್ದು ಅದರ ಜನ ಸಂಖ್ಯೆಯು ೫॥ ಕೋಟಿ ಅಂದರೆ ಭಾರತದ ಜನಸಂಖ್ಯೆಯ ೯ ದಷ್ಟು ಇರುತ್ತದೆ.

ಪ್ರಾಚೀನ ಕಾಲದಲ್ಲಿ ಯುರೋಪ ಖಂಡವು ಈ ನಡುಗಡ್ಡೆಗಳಾಚೆಯ ವರೆಗೆ ಹಬ್ಬಿತ್ತು. ಆದರೆ ಕಾಲಾಂತರದಿಂದ ಖಂಡದ ವಾಯುವ್ಯದ ಕಡೆಗಿರುವ ಪ್ರದೇಶವು ಸಮುದ್ರದ ಕೆಳಗೆ ಕುಸಿಬಿದ್ದು, ಅದರೊಳಗಿನ ಉನ್ನತವಾದ ಭಾಗಗಳಷ್ಟೇ ಮುಳುಗದೆ ಮೇಲೆ ಉಳಿದವು. ಅವೇ ಈಗಿನ ಬ್ರಿಟಿಶ ನಡುಗಡ್ಡೆಗಳಾದವು. ಇವುಗಳ ಸುತ್ತಮುತ್ತಲಿನ ಸಮುದ್ರ ಕಿರಿಯಾಳ

ವಾದದ್ದಿರುತ್ತದೆ. ಅದರಲ್ಲಿ ಮೀನುಗಳು ಬಹು ವಿಪುಲವಾಗಿ ಸಿಗುತ್ತವೆ. ಮೀನುಗಳು ಇಲ್ಲಿಯ ಜನರ ಮುಖ್ಯವಾದ ಆಹಾರವಾಗಿರುತ್ತವೆ. ಸಮುದ್ರವು ಕಿರಿಯಾಳವಾಗಿರುವದರಿಂದ ಏರಿಕೆಯ ನೀರು ಹೊಳೆಗಳ ಮುಖಗಳೊಳಗಿಂದ ಬಹು ದೂರದವರೆಗೆ ಹೋಗುವದಲ್ಲದೆ, ಅದು ಬಹಳ ಏರುತ್ತದೆ. ಇದರಿಂದ ಹೊಳೆಗಳ ದಂಡೆಯ ಮೇಲಿರುವ ಲಂಡನ, ಲಿವ್ಹರ್ಪೂಲಗಳಂಥ ಬಂದರಗಳೊಳಗೆ ಏರಿಕೆಯ ವೇಳೆಯಲ್ಲಿ ಬಹು ದೊಡ್ಡ ಹಡಗುಗಳಿಗೂ ಹೋಗಲು ಅನುಕೂಲವಾಗುತ್ತದೆ.

ಸುತ್ತಮುತ್ತಲೂ ಸಮುದ್ರವಿರುವದರಿಂದ ಈ ದ್ವೀಪಗಳಿಗೆ ಪರಕೀಯರ ದಾಳಿಗಳ ಅಂಜಿಕೆ ತೀರ ಕಡಿಮೆಯಾಗಿರುತ್ತದೆ. ಈ ನಡುಗಡ್ಡೆಗಳೊಳಗಿನ ಯಾವದೇ ಸ್ಥಳದಿಂದ ಸಮುದ್ರವು ೭೫ ಮೈಲಿಗಿಂತ ಹೆಚ್ಚು ದೂರವಿರುವದಿಲ್ಲ. ಆದ್ದರಿಂದ ಜನರಿಗೆ ಸಮುದ್ರದ ಪರಿಚಯವು ಹೆಚ್ಚಾಗಿ ಅವರು ಹುಟ್ಟಾ ನಿಪುಣರಾದ ನಾವಿಕರಾಗಿರುವರು. ಅದರಂತೆ ಈ ದ್ವೀಪಗಳು ಪೃಥ್ವಿಯ ಪೃಷ್ಠಭಾಗದ ಮಧ್ಯದಲ್ಲಿ ಇರುವದರಿಂದ ವ್ಯಾಪಾರದ ದೃಷ್ಟಿಯಿಂದಲೂ ಬಹಳ ಅನುಕೂಲವಾಗಿರುತ್ತವೆ. ಸಮುದ್ರದ ಸಾಮಿಪ್ಯದಿಂದಲೂ ಅಟಲಾಂಟಿಕ ಮಹಾಸಾಗರದ ಮೇಲಿಂದ ಹಾಯ್ದು ಬರುವ ಬೆಚ್ಚಗಾದ ಗಾಳಿಯಿಂದಲೂ ಅಲ್ಲಿಯ ಹವೆಯು ಸೌಮ್ಯವಾದದ್ದೂ, ಉತ್ಸಾಹವನ್ನುಂಟುಮಾಡುವಂಥಾದ್ದೂ ಆಗಿರುತ್ತದೆ. ಅದರಂತೆ ಕಬ್ಬಿಣ ಕಲ್ಲಿದ್ದಲಿಗಳ ಖಣಿಗಳು ಒಂದರಬದಿಗೊಂದು ಇರುವದರಿಂದ ಕಾರಖಾನೆಗಳು ಬಹು ತೀವ್ರವಾಗಿ ಬೆಳೆದ ಕಾರಣ ಈ ದ್ವೀಪಗಳು ಬಹಳ ಊರ್ಜಿತಾವಸ್ಥೆಯನ್ನು ಹೊಂದಿದವು.

**ಜನರು:**—ಕ್ರಿ. ಶ. ಪೂರ್ವದಲ್ಲಿ ೫೫ನೇ ವರುಷ ರೋಮನ್ ಕಲಿಯಾದ ಜೂಲಿಯಸ್ ಸೀಝರನು ಬ್ರಿಟನ್ ದೇಶದ ಮೇಲೆ ದಂಡೆತ್ತಿ ಬಂದಾಗ, ಅಲ್ಲಿಯ ಜನರು ಕೀಳು ಸ್ಥಿತಿಯಲ್ಲಿದ್ದರು. ರೋಮನ್ ಜನರು ಅಲ್ಲಿ ನಾಲ್ಕು ನೂರು ವರುಷಗಳ ವರೆಗೆ ರಾಜ್ಯವಾಳಿದರು; ಮತ್ತು ಈ ಅವಧಿಯಲ್ಲಿ ಅವರು ಲೈನುದಾರಿಗಳನ್ನು ಕಟ್ಟಿದರು; ಜನರಿಗೆ ಒಕ್ಕಲತನವನ್ನೂ ತೋಟಪಟ್ಟಿಗಳನ್ನು ಮಾಡುವದನ್ನೂ ಕಲಿಸಿದರು; ಉತ್ತರದ ಕಡೆಯ ಜನರಿಂದ ಸಂರಕ್ಷಿಸಲಿಕ್ಕೆ ಕೊತ್ತಳಗಳನ್ನು ಕಟ್ಟಿಸಿದರು; ಕ್ರಿಸ್ತೀ ಧರ್ಮದ ಪ್ರಸಾರವನ್ನು ಮಾಡಿ ಅನೇಕ ರೀತಿಯಿಂದ ಜನರ ಸುಧಾರಣೆಯನ್ನು ಮಾಡಿದರು.

ಮುಂದೆ ರೋಮನ್ ಜನರ ರಾಜ್ಯವು ನಷ್ಟವಾದನಂತರ ಅಂಗ್ಲ, ಸೆಕ್ಸನ, ನಾರ್ಥಮೇನ, ಡೇನ್ಸ ಮುಂತಾದ ಎಷ್ಟೋ ಜನರು ಸುಲಿಯಲಿಕ್ಕೂ, ಒಕ್ಕಲಾಗಲಿಕ್ಕೂ ಈ ದೇಶದೊಳಗೆ ಬಂದರು. ೧೦೬೬ ರಲ್ಲಿ ಫ್ರಾನ್ಸದ ಉತ್ತರಕ್ಕಿರುವ ನಾರ್ಮನ್ನರ ಅರಸನು ಈ ದೇಶವನ್ನು ಗೆದ್ದುಕೊಂಡನು. ಅಂದಿನಿಂದ ನಾರ್ಮನ್ ಜನರಾದರೂ ಅಲ್ಲಿ ಬಂದು ಇರಹತ್ತಿದರು.

**ತಗ್ಗು ದಿನ್ನೆಗಳು:**—ಈ ನಡುಗಡ್ಡೆಗಳ ಪೃಷ್ಠಭಾಗವು ಬಹಳ ತಗ್ಗು ದಿನ್ನೆಗಳುಳ್ಳದ್ದಾಗಿರುತ್ತದೆ. ಇಂಗ್ಲಂಡದ ಆಗ್ನೇಯದ ಪ್ರದೇಶವೂ, ಮಧ್ಯ ಭಾಗದ ಮತ್ತು ಪೂರ್ವದಿಕ್ಕಿನ ಪ್ರದೇಶವೂ ತಗ್ಗಾದದ್ದಿರುತ್ತದೆ. ಅದು ಉತ್ತರ ಸಮುದ್ರದ ಕಡೆಗೆ ಇಳಿಜಾರಾಗಿರುವದರಿಂದ, ಅಲ್ಲಿಯ ಹೊಳೆಗಳು ಪೂರ್ವವಾಹಿನಿಯಾಗಿರುತ್ತವೆ, ಮತ್ತು ಅವುಗಳ ಪ್ರವಾಹವು ಶಾಂತವಾಗಿರುವದರಿಂದ ಅವುಗಳ ದಂಡೆಗಳ ಮೇಲಿನ ನೆಲವು ರೇವೆಯಿಂದುಂಟಾಗಿದ್ದು ಬಹಳ ಫಲವತ್ತಾಗಿರುತ್ತದೆ. ಈ ಪ್ರದೇಶದೊಳಗೆ ದಟ್ಟಾದ ಜನ ವಸತಿಯು ಕಂಡುಬರುತ್ತದೆ. ನೈಋತ್ಯದ ಕಡೆಗಿರುವ ಗುಡ್ಡವನ್ನು ಕಾರ್ನವಾಲದ ಗುಡ್ಡವೆಂದು ಕರೆಯುತ್ತಾರೆ. ವೇಲ್ಸಪ್ರಾಂತವೆಲ್ಲ ಗುಡ್ಡಗಾಡು ಇರುತ್ತದೆ. ಇಂಗ್ಲಂಡದ ಉತ್ತರದ ಭಾಗದಲ್ಲಿರುವ ಪೆನಾಇನ್ ಗುಡ್ಡದ ಮಗ್ಗಲಿಗೆ ಕಂಬರ್ಲಂಡದ ಗುಡ್ಡಗಳಿರುತ್ತವೆ. ಅವುಗಳ ದರಿಕಂದರಗಳಲ್ಲಿ ರಮಣೀಯವಾದ ಸರೋವರಗಳುಂಟು.

ಇವೇ ಗುಡ್ಡಗಳು ಮುಂದೆ ಸ್ಕಾಟಲಂಡದ ದಕ್ಷಿಣ ಭಾಗದಲ್ಲಿಯೂ ಹಬ್ಬಿರುತ್ತವೆ. ಅವುಗಳ ಉತ್ತರದಲ್ಲಿ ವಿಸ್ತಾರವಾದದೊಂದು ತಗ್ಗು ಪ್ರದೇಶವಿರುತ್ತದೆ. ಅದರಲ್ಲಿ ದಟ್ಟಾದ ಜನವಸತಿಯು ಇರುತ್ತದೆ. ಸ್ಕಾಟಲಂಡ್ಡದ ಉತ್ತರ ಭಾಗದೊಳಗಿನ ವಿಸ್ತಾರವಾದ ಗುಡ್ಡಗಾಡು ಪ್ರದೇಶಕ್ಕೆ 'ಹಾಯಲಂಡ್ಸ' ಎಂದೆನ್ನುತ್ತಾರೆ. ಇದರಲ್ಲಿಯೇ ಬ್ರಿಟಿಶ ನಡುಗಡ್ಡೆಗಳೊಳಗಿನ ಎಲ್ಲಕ್ಕೂ ಉನ್ನತವಾದ ಬೆನನೆವಿಸ್ (೪೦೦೦ ಫೂ.) ಎಂಬ ಹೆಸರಿನ ಶಿಖರವಿರುತ್ತದೆ. ಐರ್ಲಂಡದ ಮಧ್ಯಭಾಗದಲ್ಲಿ ತಗ್ಗು ಪ್ರದೇಶವಿದ್ದು ಅದರ ಸುತ್ತಮುತ್ತಲೂ ಅಲ್ಲಲ್ಲಿ ಕಡಿದ ಗುಡ್ಡದ ಸಾಲುಗಳು ಇರುತ್ತವೆ.

**ಹವೆಯು:**—ಈ ದ್ವೀಪಗಳು ಸಮಶೀತೋಷ್ಣ ಕಟಿಬಂಧದೊಳಗೆ ಇದ್ದು ಅವುಗಳ ಸುತ್ತಲೂ ಸಮುದ್ರವಿರುತ್ತದೆ. ಆದ್ದರಿಂದ ಅಲ್ಲಿಯ ಹವೆಯು

ಸಮವಾಗಿರುತ್ತದೆ. ಅದು ಬೇಸಿಗೆಯಲ್ಲಿ ಅಷ್ಟು ಉಷ್ಣವಾಗಿರುವದಿಲ್ಲ ಮತ್ತು ಚಳಿಗಾಲದಲ್ಲಿ ಅಷ್ಟೊಂದು ತಂಪಾಗಿರುವದಿಲ್ಲ. ಚಳಿಗಾಲದಲ್ಲಿ ಪಶ್ಚಿಮದಿಂದ ಪೂರ್ವಕ್ಕೆ ಹೋದ ಹಾಗೆ ಉಷ್ಣತಾಮಾನವು ಕಡಿಮೆಯಾದದ್ದು ಕಂಡು ಬರುತ್ತದೆ. ಪಶ್ಚಿಮ ಕರಾವಳಿಗಿಂತ ಪೂರ್ವ ಕರಾವಳಿಯ ಮೇಲೆ ಹೆಚ್ಚು ಚಳಿ ಇರುತ್ತದೆ. ಬೇಸಿಗೆಯಲ್ಲಿ ದಕ್ಷಿಣದಿಂದ ಉತ್ತರದ ಕಡೆಗೆ ಹೋದ ಹಾಗೆ ಉಷ್ಣತಾಮಾನವು ಕಡಿಮೆಯಾಗುತ್ತ ಹೋಗುತ್ತದೆ. ಇಂಗ್ಲಂಡದ ಆಗ್ನೇಯ ಭಾಗದಲ್ಲಿಯ ಹವೆಯು ಹೆಚ್ಚು ಬೆಚ್ಚಗಾಗಿರುತ್ತದೆ. ಯಾಕಂದರೆ ಈ ದ್ವೀಪಗಳ ದಕ್ಷಿಣ ಭಾಗವು ವಿಷುವವೃತ್ತಕ್ಕೆ ಉತ್ತರ ಭಾಗಕ್ಕಿಂತ ಹೆಚ್ಚು ಸಮೀಪವಾಗಿರುತ್ತದೆ. ಐರ್ಲಂಡದ ಪಶ್ಚಿಮಭಾಗದಲ್ಲಿ ಮತ್ತು ಇಂಗ್ಲಂಡದ ನೈಋತ್ಯದ ಭಾಗದಲ್ಲಿ ಹವೆಯು ಸಮವಾಗಿರುತ್ತದೆ. ಒಟ್ಟಿನ ಮೇಲೆ ಯುರೋಪದ ಮಧ್ಯಭಾಗದಲ್ಲಿ ಕಂಡು ಬರುವಂಥ ವಿಷಮ ಹವೆಯು ಈ ದ್ವೀಪಗಳಲ್ಲಿ ಎಲ್ಲಿಯೂ ಕಂಡು ಬರುವದಿಲ್ಲ.

ಈ ದ್ವೀಪಗಳ ಪಶ್ಚಿಮ ದಂಡೆಯ ಹತ್ತರ ಆಟಲಂಟಿಕ ಮಹಾ ಸಾಗರದೊಳಗಿಂದ ಉಷ್ಣಪ್ರವಾಹವು ಹರಿಯುತ್ತಿರುತ್ತದೆ. ಆದ್ದರಿಂದ ಆ ದಂಡೆಯ ಮೇಲಿನ ಬಂದರಗಳು ಎಂದೂ ಹೆಪ್ಪುಗಟ್ಟುವದಿಲ್ಲ. ಮತ್ತು ಅವು ಯಾವಾಗಲೂ ವ್ಯಾಪಾರದ ಓಡಾಟಕ್ಕೆ ಅನುಕೂಲವಾಗಿರುತ್ತವೆ. ಪಶ್ಚಿಮದ ಕಡೆಯಿಂದ ಸಮುದ್ರದ ಮೇಲಿಂದ ಬೀಸುವ ಆರ್ದ್ರವಾದ ಗಾಳಿಗಳು ಮಳೆಯನ್ನು ತರುತ್ತವೆ. ಇದರಿಂದ ಪಶ್ಚಿಮದ ಕಡೆಗಿರುವ ಗುಡ್ಡಗಾಡು ಪ್ರದೇಶದೊಳಗೆ ಹೆಚ್ಚಾಗಿ ಮಳೆಯಾಗುತ್ತದೆ. ಆದ್ದರಿಂದ ಅಲ್ಲಿಯ ಹವೆಯು ತೇವು ಉಳ್ಳದ್ದಾಗಿರುತ್ತದೆ. ಈ ಗಾಳಿಗಳು ಪೂರ್ವದ ಕಡೆಗೆ ಹೋದ ಹಾಗೆ ಒಣದಾಗುತ್ತವೆ. ಮತ್ತು ಆ ಭಾಗದಲ್ಲಿ ಮಳೆಯ ಪ್ರಮಾಣವು ಕಡಿಮೆಯಾಗುತ್ತದೆ.

**ವನಸ್ಪತಿಗಳೂ ಮತ್ತು ಪ್ರಾಣಿಗಳು :**—ಬ್ರಿಟಿಶ ನಡುಗಡ್ಡೆಗಳು ಪ್ರಾಚೀನ ಕಾಲದಲ್ಲಿ ಹಳವುಗಳಿಂದ ತುಂಬಿ ಹೋಗಿದ್ದವು. ಅವು ಹೆಚ್ಚಾದ ಜನವಸತಿಯಿಂದಲೂ ವಿಶೇಷತ ಕಾರಖಾನೆ ಮತ್ತು ಪಟ್ಟಣಗಳ ಬೆಳವಣಿಗೆಯಿಂದಲೂ ಕಡಿಯಲ್ಪಟ್ಟವು. ಅವುಗಳ ಬದಲು ಈಗ ಅಲ್ಲಿ ಸಾಗುವಳಿಯಾದ ಭೂಮಿಯೂ ಹುಲ್ಲುಗಾವಲುಗಳು ಕಂಡುಬರುತ್ತವೆ. ಬ್ರಿಟಿಶ ನಡುಗಡ್ಡೆಯ ಪ್ರದೇಶದಲ್ಲಿ ಹನ್ನೆರಡೂ ತಿಂಗಳು ಮಳೆಯಾಗುವದರಿಂದಲೂ

ಉಷ್ಣತಾಮಾನವೂ ಕಡಿಮೆಯಾಗುವದರಿಂದಲೂ ಅಲ್ಲಿ ಹಸರು ಹೆಚ್ಚಗಿನ ಹುಲ್ಲು ಯಾವಾಗಲೂ ಸಿಗುತ್ತದೆ. ಅದರ ಮೇಲೆ ಆಕಳುಗಳೂ, ಕುರಿಗಳೂ, ಹಂದಿಗಳೂ ಚೆನ್ನಾಗಿ ಪೋಷಿಸಲ್ಪಡುತ್ತವೆ. ಪೂರ್ವದ ಕಡೆಗಿರುವ ಒಣ ಪ್ರದೇಶದೊಳಗೆ ಕುರಿಗಳು ಚೆನ್ನಾಗಿ ಪೋಷಿಸಲ್ಪಡುತ್ತವೆ.

ತಗ್ಗು ಪ್ರದೇಶದೊಳಗೆ ಧಾನ್ಯಗಳು ಚೆನ್ನಾಗಿ ಬೆಳೆಯುತ್ತವೆ. ಆದರೆ ಅವು ಅಲ್ಲಿಯ ಜನರಿಗೆ ಸಾಕಾಗುವಷ್ಟು ಇಲ್ಲದ್ದರಿಂದ ಕಾಳು, ಮಾಂಸ, ಹೈನು ಮುಂತಾದ ಪದಾರ್ಥಗಳನ್ನು ಪರದೇಶಗಳಿಂದ ಬಹಳವಾಗಿ ತರಿಸಿ ಕೊಳ್ಳಬೇಕಾಗುತ್ತದೆ. ಗೋದಿ, ಓಟ, ಜವೆಗೋದಿ, ಬಟಾಟೆ ಮತ್ತು ಗಜ್ಜರಿ ಇವೇ ಇಲ್ಲಿಯ ಮುಖ್ಯವಾದ ಹುಟ್ಟುವಳಿಗಳು. ಹಂದಿಗಳನ್ನು ಕೊಬ್ಬಿಸಲಿಕ್ಕೆ ಅವುಗಳಿಗೆ ಓಟ, ಜವೆಗೋದಿ, ಗಜ್ಜರಿ ಮುಂತಾದವುಗಳನ್ನು ತಿನ್ನಲಿಕ್ಕೆ ಹಾಕುತ್ತಾರೆ. ಇಂಗ್ಲಂಡದ ಆಗ್ನೇಯ ಭಾಗದಲ್ಲಿ ಗೋದಿ ಮತ್ತು ಹಣ್ಣುಗಳು ಬೆಳೆಯುತ್ತವೆ. ಐರ್ಲಂಡದಲ್ಲಿ ಮತ್ತು ಸ್ಕಾಟ ಲಂಡದ ಪೂರ್ವಭಾಗದಲ್ಲಿ ಬಟಾಟೆಗಳು ಚೆನ್ನಾಗಿ ಬೆಳೆಯುತ್ತವೆ. ಅವುಗ ಳನ್ನು ವಿಶೇಷವಾಗಿ ಐರಿಶ್ ಜನರು ಅನ್ನದಂತೆ ಉಪಯೋಗಮಾಡಿ ಕೊಳ್ಳುತ್ತಾರೆ. ಐರ್ಲಂಡದ ಉತ್ತರ ಭಾಗದಲ್ಲಿ ಪುಂಡಿಯು ಚೆನ್ನಾಗಿ ಬೆಳೆಯುತ್ತದೆ. ಆದರೆ ಅದು ನಾರು ಬಟ್ಟೆಗಳನ್ನು ಮಾಡುವ ಕಾರಖಾನೆ ಗಳಿಗೆ ಕಡಿಮೆ ಬೀಳುವದರಿಂದ, ಪರದೇಶಗಳಿಂದ ಪುಂಡಿಯನ್ನು ಬಹಳವಾಗಿ ಆಮದು ಮಾಡಬೇಕಾಗುತ್ತದೆ.

**ಖನಿಜ ಸಂಪತ್ತು:**—ಗ್ರೇಟ ಬ್ರಿಟನ್‌ದೊಳಗೆ ಮೇಲಾದ ಕಲ್ಲಿದ್ದ ಲಿಯು ಸಿಗುತ್ತದೆ; ಮತ್ತು ಅದು ಸಮುದ್ರದ ದಂಡೆಯ ಹತ್ತರ ಸಿಗುವದ ರಿಂದ ಬಹಳ ಅನುಕೂಲವಾಗಿರುತ್ತದೆ. ಅದರಂತೆ ಕಲ್ಲಿದ್ದಲಿಯ ಖಣಿಗಳ ಹತ್ತರವಲ್ಲಿಯೇ ಕಬ್ಬಿಣದ ಖಣಿಗಳು ಸಿಕ್ಕಿರುವದರಿಂದ ಅಲ್ಲಿಯ ಕಾರಖಾನೆ ಗಳು ಊರ್ಜಿತಾವಸ್ಥೆಯನ್ನು ಹೊಂದಿದವು. ಆದರೆ ಇತ್ತಲಾಗಿ ಕಲ್ಲಿದ್ದ ಲಿಯ ಪೂರೈಕೆಯು ಕಡಿಮೆಯಾಗುತ್ತ ನಡೆದಿರುತ್ತದೆ. ಅದರಂತೆ ಈಗ ಸಿಗುವ ಕಬ್ಬಿಣವಾದರೂ ಅಷ್ಟು ಮೇಲ್ತರದ್ದಾಗಿರುವದಿಲ್ಲ. ಈ ದೇಶದಲ್ಲಿ ಕಲ್ಲೆಣ್ಣೆಯ ಖಣಿಗಳಿರುವದಿಲ್ಲ. ಚೆಶಾಯರದ ಮೈದಾನಿನಲ್ಲಿ ಉಪ್ಪು ಸಿಗು ತ್ತದೆ. ಮತ್ತು ಇಂಗ್ಲಂಡದ ಆಗ್ನೇಯ ಕಡೆಯ ಭಾಗದಲ್ಲಿ ಚೀನೀ ಮಣ್ಣಿನ ಪಾತ್ರೆಗಳನ್ನು ಮಾಡಲಿಕ್ಕೆ ಉಪಯೋಗಿಸಲ್ಪಡುವ 'ಕೆವೋಲಿನ್'

ಎಂಬ ಜಾತಿಯ ಮಣ್ಣು ಸಿಗುತ್ತದೆ. ಕಟ್ಟಡಗಳನ್ನು ಕಟ್ಟಲಿಕ್ಕೆ ಉಪಯೋಗವುಳ್ಳ ಕಲ್ಲುಗಳು ಎಲ್ಲ ಕಡೆಗಳಲ್ಲಿಯೂ ಸಿಗುತ್ತವೆ. ಖನಿಜ ಸಂಪತ್ತಿನ ಬಗ್ಗೆ ನಿಸರ್ಗದೇವತೆಯ ಕೃಪೆಯು ಈ ದೇಶದ ಮೇಲೆ ಅಷ್ಟೊಂದು ಇರುತ್ತದೆಂದು ಹೇಳಲಾಗುವದಿಲ್ಲವಾದರೂ ಉದ್ಯೋಗ ವ್ಯವಸಾಯವನ್ನೂ ಕಾರಖಾನೆಗಳನ್ನೂ ಯಶಸ್ವಿಯನ್ನಾಗಿ ಮಾಡಲಿಕ್ಕೆ ಬೇಕಾಗುವ ಸಾಹಸ, ಉತ್ಸಾಹ, ಕಸಬು ಮುಂತಾದ ಗುಣಗಳು ಮಾತ್ರ ಈ ಜನರಲ್ಲಿ ಸಮೃದ್ಧಿಯಾಗಿರುವವು.

ಬ್ರಿಟಿಶ ಜನರ ಉಪಜೀವಿಕೆಯ ಮುಖ್ಯ ಸಾಧನೆಗಳು ಕೆಳಗಿನಂತೆ ಅವೆ. ಸಪಾಟಾದ ಪ್ರದೇಶಗಳೊಳಗೆ ಜೀವಿಸುವ ಜನರು ಒಕ್ಕಲುತನವನ್ನೂ ತೋಟಪಟ್ಟಿಗಳನ್ನೂ ಮಾಡುವರು. ಗುಡ್ಡಗಳ ಇಳುಕಲಿನ ಮೇಲೆ ಜೀವಿಸುವ ಜನರು ಕುರಿಗಳನ್ನೂ ದನಗಳನ್ನೂ ಸಾಕುವರು. ಸಮುದ್ರದ ದಂಡೆಯ ಮೇಲೆ ವಾಸಿಸುವ ಜನರು ಮೀನು ಹಿಡಿಯುವದರಲ್ಲಿ ತೊಡಗಿರುತ್ತಾರೆ. ಖಣಿಗಳ ಪ್ರದೇಶದಲ್ಲಿರುವ ಜನರು ಖಣಿಗಳಲ್ಲಿಯೂ ಕಾರಖಾನೆಗಳಲ್ಲಿಯೂ ದುಡಿಯುತ್ತಾರೆ. ಹೊಳೆಗಳ ಮುಖಗಳ ಮೇಲಿನ ಬಂದರಗಳೊಳಗೆ ಅನೇಕ ಜನರು ಹಡಗು ಕಟ್ಟುವ ಕೆಲಸದೊಳಗೆ ತೊಡಗಿರುತ್ತಾರೆ. ಇವಲ್ಲದೆ ಎಷ್ಟೋ ಜನರು ವ್ಯಾಪಾರದಲ್ಲಿ ಮತ್ತು ವ್ಯಾಪಾರದ ಮೇಲೆ ಅವಲಂಬಿಸಿರುವ ಬೇರೆ ಬೇರೆ ಉದ್ಯೋಗ ವ್ಯವಸಾಯಗಳಲ್ಲಿ ದುಡಿದು ಉಪಜೀವಿಕೆಯನ್ನು ಸಾಗಿಸುತ್ತಾರೆ.

## ೨ನೇ ಪ್ರಕರಣ

# ಇಂಗ್ಲಂಡ ಮತ್ತು ವೇಲ್ಸ

### ಇಂಗ್ಲಂಡ

ಅಭ್ಯಾಸವನ್ನು ಮಾಡಲಿಕ್ಕೆ ಸುಲಭವಾಗಬೇಕೆಂದು ಇಂಗ್ಲಂಡದೊಳಗೆ ಕೆಳಗಿನ ಸ್ವಾಭಾವಿಕ ವಿಭಾಗಗಳನ್ನು ಮಾಡಬಹುದು. (೧) ಆಗ್ನೇಯ ಇಂಗ್ಲಂಡ, (೨) ಹಂಪಶಾಯರದ ಬೈಲು, (೩) ನೈಋತ್ಯ ಇಂಗ್ಲಂಡ, (೪) ಪೂರ್ವ ಇಂಗ್ಲಂಡ, (೫) ಮಧ್ಯ ಇಂಗ್ಲಂಡ ಮತ್ತು (೬) ಉತ್ತರ ಇಂಗ್ಲಂಡ.

**(೧) ಆಗ್ನೇಯ ಇಂಗ್ಲಂಡ:**—ಫ್ರಾನ್ಸ ದೇಶದ ಉತ್ತರ ಭಾಗವೂ ಇಂಗ್ಲಂಡದ ಆಗ್ನೇಯ ಭಾಗವೂ ಕೂಡಿ ಒಂದೇ ಬಯಲಾಗಿತ್ತು. ಅವು ಡೋವ್ಹರದ ಆಖಾತದಿಂದ ವಿಂಗಡಿಸಲ್ಪಟ್ಟವು. ಆಗ್ನೇಯ ಇಂಗ್ಲಂಡದ ಭಾಗವು ಸರ್ವಸಾಧಾರಣವಾಗಿ ಸಪಾಟಾಗಿದ್ದು ಅದರೊಳಗೆ ಅಲ್ಲಲ್ಲಿ ಸುಣಬುರಲಿಯ ಮತ್ತು ಖಡುವಿನ ದಿನ್ನೆಗಳಿರುತ್ತವೆ. ಈ ಭಾಗ ದೊಳಗಿನ ದಿನ್ನೆಗಳ ಮೇಲೆ ಕುರಿಗಳನ್ನು ಸಾಕುತ್ತಾರೆ ಮತ್ತು ತಗ್ಗು ಪ್ರದೇಶದಲ್ಲಿ ಗೋದಿಯನ್ನು ಬೆಳೆಯುತ್ತಾರೆ. ಗೋದಿಯು ವಿಶೇಷವಾಗಿ ಕೊಳ್ಳಗಳೊಳಗಿನ ರೇವೆಯ ಭೂಮಿಯಲ್ಲಿ ಚೆನ್ನಾಗಿ ಬೆಳೆಯುತ್ತದೆ. ಸಫರಚಂದ, ಪಿಅರ್, ಪೀಚ, ಮುಂತಾದ ಹಣ್ಣುಗಳಾದರೂ ಇದೇ ಭಾಗದಲ್ಲಿ ಬೆಳೆಯುತ್ತವೆ. ಇಲ್ಲಿ ಹಾಪ ಎಂಬ ಬಳ್ಳಿಗಳು ಬೆಳೆಯುತ್ತವೆ. ಇವುಗಳ ಒಣಗಿದ ಹೂಗಳ ತುರಾಯಿಗಳನ್ನು 'ಬೀರ' ಎಂಬ ಜಾತಿಯ ಸರಾಯಿಯನ್ನು ತಯಾರಿಸುವಾಗ ಉಪಯೋಗಿಸುತ್ತಾರೆ. ಪ್ರತಿಯೊಬ್ಬ ಒಕ್ಕಲಿಗನು ಹೈನಿನ ದನಗಳನ್ನೂ, ಹಂದಿಗಳನ್ನೂ ಸಾಕುತ್ತಾನೆ. ಇಂಗ್ಲಂಡದ ಈ ಭಾಗವು ಕಾರಖಾನೆಗಳಿಗಿಂತ ಒಕ್ಕಲತನದ ಸಲುವಾಗಿ ಹೆಚ್ಚು ಪ್ರಸಿದ್ಧವಾಗಿದೆ.

**ಡೋವ್ಹರ:**—ಫೊಕ್ಸ್ಟನ, ಮತ್ತು ಹವ್ಹನ ಎಂಬ ಬಂದರಗಳಿಂದ ಫ್ರಾನ್ಸ ದೇಶದ ಉತ್ತರ ಕರಾವಳಿಯ ಮೇಲಿನ ಬಂದರಗಳಿಗೆ ಹಡಗಗಳು




ಇಂಗ್ಲಂಡ ಮತ್ತು ವೇಲ್ಸದ ನಕಾಶೆ.

ಯಾವಾಗಲೂ ಹೋಗುಬರುತ್ತಿರುತ್ತವೆ. ಸಮುದ್ರ ದಂಡೆಯ ಮೇಲೆ ಹೇಸ್ಟಿಂಗ್ಸ, ರಮ್ಸಗೇಟ, ಫೊಕ್ಸ್ಟನ ಮುಂತಾದ ಅನೇಕ ಆರೋಗ್ಯ ಸ್ಥಳ

ಗಳೆಂದು ಗಣಿಸಲ್ಪಟ್ಟಿರುವವು. ವಿಶ್ವವಿದ್ಯಾಲಯದ ಸಲುವಾಗಿ ವಿಖ್ಯಾತ ವಾದ **ಆಕ್ಸಫರ್ಡ** ಎಂಬ ಪಟ್ಟಣವು ಇದೇ ಭಾಗದಲ್ಲಿರುತ್ತದೆ. ಆದರೆ ಇದರೊಳಗಿನ ಅತಿ ಮಹತ್ವವಾದದ್ದೂ ಜಗತ್ತಿನೊಳಗೆ ಎಲ್ಲಕ್ಕೂ ದೊಡ್ಡದೂ ಆದ ಪಟ್ಟಣವೆಂದರೆ ಲಂಡನ್ನವು.

**ಲಂಡನ್ :**—ರಾಜಧಾನಿಯ ಸ್ಥಳವಾದ ಈ ಪಟ್ಟಣವು ಬಹು ಪುರಾತನಕಾಲದ್ದಿದ್ದು ಅದು ಟೇಮ್ಸ್ ಎಂಬ ಹೊಳೆಯು ಎರಡೂ ದಂಡೆಗಳ ಮೇಲೆ ಹಬ್ಬಿರುತ್ತದೆ. ಮೊಟ್ಟಮೊದಲು ಇದೊಂದು ಸಣ್ಣ ಹಳ್ಳಿಯಾಗಿತ್ತು.



ಲಂಡನ್—ಟೇಮ್ಸನದಿಯ ಮೇಲಿನ ಪೂಲು.

ಆದರೆ ಅದು ಕ್ರಮೇಣ ಬೆಳೆಯುತ್ತ ಹೋಗಿ ಇಂದಿಗೆ ಅದರ ಜನಸಂಖ್ಯೆಯು ಸುಮಾರು ೮೫ ಲಕ್ಷದಷ್ಟು ಇರುತ್ತದೆ. ಈ ಪಟ್ಟಣದಿಂದ ಎಷ್ಟೋ ಲೋಹಮಾರ್ಗಗಳೂ ಲೈನುದಾರಿಗಳೂ ಜಲಮಾರ್ಗಗಳೂ ಆಕಾಶ ಮಾರ್ಗಗಳೂ ಹೊರಟಿರುತ್ತವೆ. ಹೊಳೆಯ ಮುಖದೊಳಗಿಂದ ಏರಿಕೆಯ ವೇಳೆಯಲ್ಲಿ ಮಹಾಸಾಗರದೊಳಗಿನ ಹಡಗಗಳು ಇಲ್ಲಿಯ ಧಕ್ಕೆಗೆ ಹೋಗಹತ್ತು

ತ್ತವೆ. ಪಟ್ಟಣಕ್ಕೆ ಬೇಕಾಗುವ ಪದಾರ್ಥಗಳನ್ನು ಪೂರೈಸುವದಕ್ಕಾಗಿ ಎಷ್ಟೋ ದೇಶಗಳಿಂದ ಇಲ್ಲಿ ಸರಕುಗಳು ಬರುತ್ತವೆ, ಮತ್ತು ಇಲ್ಲಿಂದ ಪರದೇಶಗಳಿಗೂ ದೊಡ್ಡ ಪ್ರಮಾಣದಲ್ಲಿ ರಫ್ತಾಗುತ್ತವೆ. ಇಲ್ಲಿ ಇಳಿಯುವ ಸರಕುಗಳಲ್ಲಿ ಸಂಯುಕ್ತ ಸಂಸ್ಥಾನ ಮತ್ತು ಅರ್ಜೆಂಟಿನಾಗಳಿಂದ ಗೋದಿಯೂ, ಭಾರತ, ಪಾಕಿಸ್ತಾನ, ಸಿಲೋನ, ಚೀನ ಮತ್ತು ಜಪಾನ ದೇಶಗಳಿಂದ ಚಹವೂ, ಸ್ವೀಡನ್, ಡೆನ್ಮಾರ್ಕ, ಮತ್ತು ಹಾಲಂಡ ದೇಶಗಳಿಂದ ಹೈನಿನ ಪದಾರ್ಥ ಗಳೂ, ಆಸ್ಟ್ರೇಲಿಯಾ ಮತ್ತು ನ್ಯೂಝಿಲಂಡಗಳಿಂದ ಕುರಿ ಮಾಂಸವೂ, ಮಲಾಯಾದಿಂದ ರಬ್ಬರವೂ, ಕಾಂಗೋದಿಂದ ಹಸ್ತಿದಂತವೂ, ಚೀನ ಜಪಾನಗಳಿಂದ ರೇಶಿಮೆಯೂ ಮುಖ್ಯವಾಗಿರುತ್ತವೆ. ಈ ಪಟ್ಟಣದೊಳಗೆ ಬಹು ದೊಡ್ಡ ವ್ಯಾಪಾರವು ಸಾಗುತ್ತದೆ. ಹತ್ತರದಲ್ಲಿ ಕಲ್ಲಿದ್ದಲಿಯ ಖಣಿ ಗಳು ಇಲ್ಲದ್ದರಿಂದ ಇಲ್ಲಿ ದೊಡ್ಡ ದೊಡ್ಡ ಕಾರಖಾನೆಗಳಿರುವದಿಲ್ಲ. ಆದರೂ ಇಲ್ಲಿಯ ಕಾರಖಾನೆಗಳಲ್ಲಿ ಸಣ್ಣ ಪುಟ್ಟ ಸರಕುಗಳು ತಯಾರಾಗುತ್ತವೆ. ಸುತ್ತುಮುತ್ತಲಿನ ಭಾಗಗಳಿಂದ ಸಾವಿರಾರು ಜನರು ಕೆಲಸದ ಸಲುವಾಗಿ ಈ ಪಟ್ಟಣಕ್ಕೆ ಬರುತ್ತಾರೆ. ಪಟ್ಟಣದೊಳಗೆ ಭೂಮಿಯ ಮೇಲಿನಿಂದಲೂ, ಕೆಳಗಿಂದಲೂ ನಡೆಯುವ ಉಗಿಬಂಡಿಗಳಿರುತ್ತವೆ. ಇದಲ್ಲದೇ ಟ್ರಾಮ-ಗಾಡಿ, ಮೋಟಾರ, ಬಸಿಸ್ ಮುಂತಾದ ವಾಹನಗಳೊಳಗಿಂದ ಜನರ ಓಡಾ ಟವು ಒಂದೇ ಸವನೆ ನಡದೇಯಿರುತ್ತದೆ.

**(೨) ಹಂಪಶಾಯುರದ ಬೈಲು:**—ಆಗ್ನೇಯ ಭಾಗದಂತೆಯೇ ಈ ಭಾಗವಾದರೂ ತಗ್ಗಾದ ಬೈಲು ಪ್ರದೇಶವಾಗಿರುತ್ತದೆ. ಆದರೆ ಇಲ್ಲಿಯ ಭೂಮಿಯು ಅಷ್ಟು ಕಸುವುಳ್ಳದ್ದಿರುವದಿಲ್ಲ. ಆದ್ದರಿಂದ ಇಲ್ಲಿ ಒಕ್ಕಲತನವು ನಡೆಯುವದಿಲ್ಲ. ಆದರೂ ಹುಲ್ಲುಗಾವಲುಗಳ ಮೇಲೆ ಕುರಿಗಳನ್ನು ಸಾಕು ತ್ತಾರೆ. ಈ ಭಾಗದೊಳಗೆ 'ನ್ಯೂ ಫಾರೆಸ್ಟ' ಎಂಬ ಹೆಸರಿನ ಕಾದಿಟ್ಟ ಅಡವಿಯುಂಟು. ಅದರೊಳಗೆ ಜನರು ತಿರುಗಾಡಲಿಕ್ಕೂ ಬೇಟೆಯಾಡುವ ದಕ್ಕೂ ಹೋಗುತ್ತಾರೆ. ಈ ಬೈಲಿನ ಕರಾವಳಿಯ ಮೇಲೆ '**ಸೌದಮ್ಟನ್**' ಎಂಬ ವಿಸ್ತೀರ್ಣವಾದ ಸುರಕ್ಷಿತ ಬಂದರವಿರುತ್ತದೆ. ಇದಕ್ಕೆ ಇತ್ತಲಾಗಿ ಲಂಡನ್ನಕ್ಕಿಂತಲೂ ಹೆಚ್ಚು ಮಹತ್ವವು ಬಂದಿರುತ್ತದೆ. ಆಫ್ರಿಕಾ, ಆಸ್ಟ್ರೇ ಲಿಯಾ ಮತ್ತು ಭಾರತ ದೇಶಗಳಿಂದ ಬರುವ ಸರಕುಗಳು ಇದೇ ಬಂದರದಲ್ಲಿ



ಬಕಿಂಗ್ಹಮ ಅರಮನೆಯು—ಲಂಡನ್.

ಇಳಿಯುತ್ತವೆ. ಪೋರ್ಟ್ಸ್‌ಮಥ ಎಂಬುದು ಯುದ್ಧದ ಹಡಗು ಪಡೆಯ ಬಂದರ
ವಿರುತ್ತದೆ. ಇಲ್ಲಿ ಹಡಗುಗಳನ್ನು ಕಟ್ಟುವರಲ್ಲದೆ ಅವುಗಳನ್ನು ನೆಟ್ಟಗೆ
ಮಾಡುತ್ತಾರೆ.

ಈ ಕರಾವಳಿಯ ಹತ್ತರಿರುವ ಆಯಿಲ್ ಆಫ್ ವಾಯಿಟ್ ಎಂಬ ನಡು
ಗಡ್ಡೆಗೆ ಎಷ್ಟೋ ಜನರು ಅಲ್ಲಿಯ ಸೃಷ್ಟಿಸೌಂದರ್ಯವನ್ನು ನೋಡಲಿಕ್ಕೂ
ಹವೆಯ ಸಲುವಾಗಿಯೂ ಬರುತ್ತಾರೆ. ಫ್ರಾನ್ಸ ದೇಶದ ದಂಡೆಯ ಹತ್ತರಿ




ಸೌದಮ್ಟನ ಬಂದರ.

ರುವ ಜರ್ಸಿ ಮತ್ತು ಗರ್ನಸೀ (ಚೆನೆಲ್) ಎಂಬ ಗುಡ್ಡಗಾಡು ದ್ವೀಪಗಳು
ಇಂಗ್ಲಂಡದ ವಶದಲ್ಲಿರುತ್ತವೆ. ಅಲ್ಲಿ ಕಾಯಿಪಲ್ಯ ಮತ್ತು ಹೂಗಳು ವಿಪುಲ
ವಾಗಿ ಬೆಳೆಯುತ್ತವೆ. ಅವೆಲ್ಲವು ಲಂಡನ ಪಟ್ಟಣಕ್ಕೆ ಹೋಗುತ್ತವೆ. ಅಲ್ಲಿಯ

ಆಕಳುಗಳು ಬಹಳ ಹಿಂಡುವವು. ಈ ದ್ವೀಪಗಳ ದಂಡೆಯ ಮೇಲೆ ಮೀನು ಹಿಡಿಯುವ ಉದ್ಯೋಗವಾದರೂ ಚೆನ್ನಾಗಿ ಸಾಗುತ್ತದೆ.

**(೩) ನೈಋತ್ಯ ಇಂಗ್ಲಂಡವು :**—ಈ ಭಾಗವು ದ್ವೀಪಕಲ್ಪವಾಗಿದ್ದು ಈ ಭಾಗದೊಳಗಿನ ಉತ್ತರದ ಕಡೆಯಲ್ಲಿ ತುಸು ಸಪಾಟಾದ ಭೂಮಿಯು ಇರುತ್ತದೆ. ಉಳಿದ ಭಾಗವೆಲ್ಲ ಗುಡ್ಡಗಾಡು ಇರುತ್ತದೆ. ಸಪಾಟಾದ ಭೂಮಿಯಲ್ಲಿ ಒಕ್ಕಲತನವು ಸಾಗುವದಲ್ಲದೆ ಹಣ್ಣುದೋಟಗಳಾದರೂ ಇರುತ್ತವೆ. ಗುಡ್ಡಗಾಡು ಪ್ರದೇಶದಲ್ಲಿ ಕುರಿಗಳನ್ನೂ ಕುದುರೆಗಳನ್ನೂ ಸಾಕುತ್ತಾರೆ. ಭೂಮಿಯು ತೀರ ನಿಕೃಷ್ಟವಿರುತ್ತದೆ. ಈ ಪ್ರದೇಶದೊಳಗೆ ಪೂರ್ವಕಾಲದಲ್ಲಿ ತವರು ಸಿಗುತ್ತಿತ್ತು; ಆದರೆ ಈಗ ಅದರ ಸಂಗ್ರಹವೆಲ್ಲ ಸರಿದು ಹೋಗಿರುತ್ತದೆ. ಇಲ್ಲಿ ಸಂಗಮರವರೀ ಕಲ್ಲಿನ ಖಣಿಗಳೂ, ಪಾಟಿಯ ಕಲ್ಲಿನ ಖಣಿಗಳೂ ಇರುತ್ತವೆ. ಇವಲ್ಲದೆ ಎರೆಮಣ್ಣು ಸಿಗುತ್ತದೆ. ಅದನ್ನು ಮರ್ಸಿ ನದಿಯ ದಂಡೆಯಮೇಲೆ ಚೀನೀ ಮಣ್ಣಿನ ಪಾತ್ರೆಗಳನ್ನು ತಯಾರಿಸುವ ಕಾರಖಾನೆಗಳಲ್ಲಿ ಒಯ್ಯುತ್ತಾರೆ.

ಈ ಭಾಗದೊಳಗಿರುವ '**ಎಕ್ಷಿಟರ**' ಎಂಬ ಪಟ್ಟಣವನ್ನು ರೋಮನ್ ಜನರು ಕಟ್ಟಿದರು. **ಪ್ಲೀಮಥ** ಮತ್ತು **ಪೊರ್ಟ್ಸಮಥ** ಎಂಬಲ್ಲಿ ಹಡಗುಪಡೆಗಳ ಠಾಣ್ಯಗಳುಂಟು. ಫಾಲಮಥ ಎಂಬಲ್ಲಿ ಮೀನು ಹಿಡಿಯುವ ಉದ್ಯೋಗವು ಚೆನ್ನಾಗಿ ಸಾಗುತ್ತದೆ.

**(೪) ಪೂರ್ವ ಇಂಗ್ಲಂಡವು :**—ಟೇಮ್ಸ ಮತ್ತು ಹಂಬರ ಎಂಬ ಹೊಳೆಗಳ ನಡುವಿನ ಪ್ರದೇಶವು ಹರಳು ಮಣ್ಣುಗಳಿಂದ ತುಂಬಿರುತ್ತದೆ. ವಾಶ ಆಖಾತವು ಕಿರಿಯಾಳವಾಗಿದ್ದು ಅದು ನದಿಗಳಿಂದ ತರಲ್ಪಟ್ಟ ರೇವೆಯಿಂದ ಹೆಚ್ಚೆಚ್ಚು ಕಿರಿಯಾಳಾಗುತ್ತ ನಡೆದಿರುತ್ತದೆ. ಈ ಯಾವತ್ತೂ ಭಾಗವು ಒಟ್ಟಿನ ಮೇಲೆ ತೇವುಳ್ಳ ಜೊಳ್ಳುಭೂಮಿಯಾಗಿರುತ್ತದೆ. ಅಲ್ಲಿ ಮೀನು ಮತ್ತು ಪಕ್ಷಿಗಳ ಬೇಟೆಯನ್ನಾಡಲಿಕ್ಕೆ ಎಷ್ಟೋ ಜನರು ಬರುತ್ತಾರೆ. ರೇವೆಯ ಒಣನೆಲದಲ್ಲಿ ಗೋದಿ, ಗಡ್ಡೆಗೆಣಸುಗಳು ಬೆಳೆಯುತ್ತವೆ. ಹಲಕೆಲವು ಕಡೆಯಲ್ಲಿ ದನಗಳನ್ನೂ ಕುರಿಗಳನ್ನೂ ಸಾಕುತ್ತಾರೆ. ಅವುಗಳ ತೊಗಲಿನಿಂದ ಬೂಟುಗಳನ್ನು ಮಾಡುವ ಕಾರಖಾನೆಗಳು **ನಾರ್ದಮ್ಟನ್** ಮತ್ತು **ನಾರಿಚ** ಎಂಬಲ್ಲಿ ಇರುತ್ತವೆ. ಇಲ್ಲಿ ಕಲ್ಲಿದ್ದಲಿಯ ಖಣಿಗಳು ಇಲ್ಲದ್ದ

ರಿಂದ ಈ ಭಾಗದಲ್ಲಿ ಕಾರಖಾನೆಗಳು ಬೆಳೆದಿರುವದಿಲ್ಲ; ಆದರೂ ಹಲವು ಕಡೆಯಲ್ಲಿ ಒಕ್ಕಲತನಕ್ಕೆ ಬೇಕಾಗುವ ರಂಟೆಗಳನ್ನು ಮಾಡುವ ಕಾರಖಾನೆಗಳಿರುತ್ತವೆ.

ಹಾರ್ವಿಚ ಬಂದರದಿಂದ ಜರ್ಮನಿ, ಬೆಲ್ಜಮ ಮತ್ತು ಹಾಲಂಡ ದೇಶಗಳಿಗೆ ನಿಯಮಿತವಾಗಿ ಹಡಗುಗಳು ಹೋಗಿ ಬರುತ್ತವೆ. ಆಕ್ಸಫರ್ಡದಂತೆ **ಕೇಂಬ್ರಿಜ**ದಲ್ಲಿಯಾದರೂ ಪ್ರಸಿದ್ಧವಾದ ವಿಶ್ವವಿದ್ಯಾಲಯವಿರುತ್ತದೆ. ಗೋದಿಯ ಹುಲ್ಲಿನಿಂದ ಬೆಡಫರ್ಡ ಎಂಬಲ್ಲಿ ಟೊಪ್ಪಿಗೆಗಳನ್ನು ತಯಾರಿಸುತ್ತಾರೆ.

**ಡಾಗರ ಬಂಕ:**—ಇಂಗ್ಲಂಡದ ಪೂರ್ವ ದಂಡೆಗೂ ಯುರೋಪದ ಪಶ್ಚಿಮ ದಂಡೆಗೂ ನಡುವಿರುವ ಉತ್ತರ ಸಮುದ್ರದೊಳಗಿನ ಕಿರಿಯಾಳವಾದ ನೀರಿನ ಸಂಚಯಕ್ಕೆ 'ಡಾಗರ ಬಂಕ' ಎಂಬ ಹೆಸರನ್ನು ಕೊಟ್ಟಿರುತ್ತಾರೆ. ಅದರ ಆಳವು ಸರಾಸರಿ ೬೦೦ ಫೂಟು ಇರುವದರಿಂದ ಸೂರ್ಯನ



ಉತ್ತರ ಸಮುದ್ರದೊಳಗಿನ ಮೀನು ಹಿಡಿಯುವ ಕೆಲಸವು.

ಪ್ರಕಾಶವು ತಳದವರೆಗೆ ಹೋಗುತ್ತದೆ. ಇದರಿಂದ ತಳದಲ್ಲಿ ಹಾವಸೆಯು ವಿಪುಲವಾಗಿ ಬೆಳೆದು ಮೀನುಗಳಿಗೆ ಅದು ಸಾಕಷ್ಟು ಆಹಾರವನ್ನು ಪೂರೈಸುತ್ತದೆ, ಮತ್ತು ಅವುಗಳಿಗೆ ತತ್ತಿಗಳನ್ನಿಡಲಿಕ್ಕೆ ಅನುಕೂಲವಾದ ಸ್ಥಳ

ಗಳೂ ಸಿಗುತ್ತವೆ. ಈ ಕಾರಣಗಳಿಂದ ಈ ಭಾಗದಲ್ಲಿ ಎಷ್ಟೋ ತರದ ಮೀನುಗಳು ಸಿಗುತ್ತವೆ. ಮತ್ತು ಮೀನು ಹಿಡಿಯುವ ಉದ್ಯೋಗಕ್ಕೆ ಅನುವಾಗುತ್ತದೆ. ಜಗತ್ತಿನೊಳಗಿನ ಅತಿ ಪ್ರಸಿದ್ಧವಾದ ಮೀನು ಹಿಡಿಯುವ ಉದ್ಯೋಗದ ಕೇಂದ್ರಗಳಲ್ಲಿ ಡಾಗರ ಬಂಕವು ಒಂದಾಗಿರುತ್ತದೆ. ಆಳವಿಲ್ಲದ ನೀರಿನಲ್ಲಿ ಜೀವಿಸುವ ಕಾಡ, ಹಡಾಕ, ಹೆರಿಂಗ, ಪ್ಲೇಸ ಮುಂತಾದ ಜಾತಿಯ ಮೀನುಗಳು ಇಲ್ಲಿ ಸಿಗುತ್ತವೆ. ಸಮುದ್ರ ದಂಡೆಯ ಮೇಲಿರುವ **ಗ್ರೀಮ್ಸಬೀ**, ಯಾರಮಥ, ಲೊವೆಸ್ಟಾಫ್ಟ ಎಂಬ ಬಂದರಗಳು ಈ ಉದ್ಯೋಗದಿಂದಲೇ ಪ್ರಸಿದ್ಧಿಯನ್ನು ಪಡೆದಿರುತ್ತವೆ. ಈ ಬಂದರಗಳೊಳಗೆ ಮೀನು ಹಿಡಿಯುವವರ ವಸತಿಯು ಹೆಚ್ಚಾಗಿರುತ್ತದೆ.

ನಾವು ಮುಂಜಾವಿನಲ್ಲಿ ಗ್ರೀಮ್ಸಬೀ ಬಂದರದೊಳಗೆ ಹೋದರೆ, ಅಲ್ಲಿ ಸಣ್ಣ ಸಣ್ಣ ದೋಣಿಗಳಲ್ಲಿ ಜಾಳಿಗೆಗಳನ್ನೂ, ಹಗ್ಗಗಳನ್ನೂ ತುಂಬಿಕೊಂಡು ಎಷ್ಟೋ ಜಾಲಗಾರರು ಮೀನು ಹಿಡಿಯುವದರ ಸಲುವಾಗಿ ಸಮುದ್ರದೊಳಗೆ ಹೋಗುವ ಸಿದ್ಧತೆಯಲ್ಲಿರುವದು ನಮಗೆ ಕಂಡು ಬರುವದು. ಅವರ ಉಡುಪುಗಳು ಎಣ್ಣೆಗಮಟವಾಗಿದ್ದು, ಅವರು ಮೊಳಕಾಲುಗಳವರೆಗೆ ರಬ್ಬರಿನ ಬೂಟುಗಳನ್ನು ಹಾಕಿಕೊಳ್ಳುತ್ತಾರೆ. ಯಾಕಂದರೆ ಅವರಿಗೆ ನೀರಿನಲ್ಲಿ ಕೆಲಸಮಾಡಬೇಕಾಗುತ್ತದೆ. ಉಗಿಹಡಗವು ಡಾಗರ ಬಂಕದೊಳಗೆ ಹೋದ ಕೂಡಲೆ ಅದರ ಎರಡೂ ಮಗ್ಗಲಿಗೆ ಜಾಳಿಗೆಯ ಪ್ರಚಂಡವಾದ ಚೀಲಗಳನ್ನು ನೀರಿನೊಳಗೆ ಬಿಡುತ್ತಾರೆ. ಅವುಗಳಿಗೆ ಭಾರಗಳನ್ನು ಕಟ್ಟಿರುವದರಿಂದ ಅವು ಸಮುದ್ರದ ತಳಕ್ಕೆ ಹೋಗುತ್ತವೆ; ಮತ್ತು ಹಡಗವು ಮುಂದೆ ಹೋದಂತೆ ಈ ಚೀಲಗಳು ತಳದಗುಂಟ ಸರಿಯುತ್ತ ಬರುತ್ತವೆ. ಇಂಥ ಉಗಿ ಹಡಗುಗಳಿಗೆ 'ಟ್ರಾಲರ' (ಟ್ರಾಲ = ಎಳೆ) ಎಂದು ಅನ್ನುತ್ತಾರೆ. ಪ್ಲೇಸ್, ಸೋಲಗಳಂಥ ಅಗಲವಾದ ಮೀನುಗಳು ತಳದಲ್ಲಿರುವ ಕೆಸರಿನಲ್ಲಿ ಜೀವಿಸುತ್ತವೆ. ಈ ಜಾತಿಯ ಮೀನುಗಳನ್ನು ಹಿಡಿಯುವದಕ್ಕೆ ಟ್ರಾಲರ ಹಡಗುಗಳಲ್ಲಿಯೇ ಹೋಗಬೇಕಾಗುತ್ತದೆ. ಸಾಕಷ್ಟು ಮೀನುಗಳು ಜಾಳಿಗೆಯಲ್ಲಿ ಸಿಕ್ಕಿರುತ್ತವೆಂದು ಕಂಡು ಬಂದ ಕೂಡಲೆ ಹಗ್ಗಗಳ ಸಹಾಯದಿಂದ ಜಾಳಿಗೆಗಳನ್ನು ಮೇಲಕ್ಕೆ ಎಳೆದು ಕೊಳ್ಳುತ್ತಾರೆ. ಮತ್ತು ಅವುಗಳೊಳಗಿನ ಮೀನುಗಳನ್ನು ಹಡಗದಲ್ಲಿ ಒಗೆಯುತ್ತಾರೆ. ಕೂಡಲೇ ಹಡಗದೊಳಗಿನ ಬೇರೆ ಜನರು ಅವುಗಳನ್ನು ವಿಂಗಡಿಸಿ ಬೇರೆ ಬೇರೆ ವರ್ಗಗಳಲ್ಲಿ ಕೂಡಹಾಕುತ್ತಾರೆ.

ಮತ್ತು ಅವುಗಳನ್ನು ಹಸನುಮಾಡಿ ಕೊಳೆಯುಬಾರದೆಂದು ಬರ್ಫದ ದೊಡ್ಡ ದೊಡ್ಡ ಪೆಟ್ಟಿಗೆಗಳೊಳಗೆ ತುಂಬಿ ಇಡುತ್ತಾರೆ. ಹಡಗವು ಬಂದರದೊಳಗೆ ಬರುವದೇ ತಡ, ಅದರ ಮೇಲಿನ ಈ ಪೆಟ್ಟಿಗೆಗಳನ್ನು ಸಂಗಡಲೇ ಕೆಳಗೆ ಇಳಿಸಿಕೊಳ್ಳುತ್ತಾರೆ. ಈ ಎಲ್ಲ ಕೆಲಸಗಳನ್ನು ಬಹು ತೀವ್ರವಾಗಿ ಮಾಡ ಬೇಕಾಗುತ್ತದೆ. ಇಲ್ಲದಿದ್ದರೆ ಸರಕು ನಾಶವಾಗುವ ಸಂಭವವಿರುತ್ತದೆ. ಬಂದರದಲ್ಲಿ ಲಂಡನದ ವ್ಯಾಪಾರಸ್ಥರು ಸಿದ್ಧರಾಗಿರುತ್ತಾರೆ. ಅವರು ಈ ಮೀನುಗಳನ್ನು ಕೊಂಡು ಉಗಿಬಂಡಿಗಳಿಂದ ಲಂಡನದೊಳಗಿನ ಬಿಲ್ಡಿಂಗ್ಸ ಗೇಟ ಎಂಬ ಪೇಟೆಗೆ ಕಳಿಸಿಕೊಡುತ್ತಾರೆ. ಇದಲ್ಲದೆ ಇಂಗ್ಲಂಡದೊಳಗಿನ ಬೇರೆ ಪಟ್ಟಣಗಳಿಗೂ ಸಹ ಈ ಮೀನುಗಳನ್ನು ಕಳಿಸುತ್ತಾರೆ. ಹೆರಿಂಗ, ಮಾಕರೇಲದಂಥ ಮೀನುಗಳು ಚಪ್ಪಟೆಯಾಗಿರುವದಿಲ್ಲವಾದ್ದರಿಂದ ಅವುಗಳಿಗೆ ಚನ್ನಾಗಿ ಈಸಲಿಕ್ಕೆ ಬರುತ್ತದೆ. ಆದ್ದರಿಂದ ಅವು ಸಮುದ್ರದ ತಳದಲ್ಲಿರು ವದಿಲ್ಲ. ಅವು ಮೇಲೆಯೇ ಸಿಗುತ್ತವೆ. ಅವುಗಳನ್ನು ಹಿಡಿಯಲಿಕ್ಕೆ ಬೇರೆ ತರದ ಜಾಳಿಗೆಗಳನ್ನು ಉಪಯೋಗಿಸಬೇಕಾಗುತ್ತದೆ. ಈ ಜಾಳಿಗೆಗಳು ಮೂರು ನಾಲ್ಕು ಮೈಲು ಉದ್ದವಾಗಿದ್ದು ಅವುಗಳ ಮೇಲೆ ಅಂಚಿಗೆ ಬೆಂಡಿನ ಗುಂಡುಗಳನ್ನೂ ಕೆಳಗೆ ಅಂಚಿಗೆ ಸೀಸದ ಗುಂಡುಗಳನ್ನೂ ಕಟ್ಟಿರುವದರಿಂದ ಅವು ನೀರಿನೊಳಗೆ ಗೋಡೆಗಳಂತೆ ಎತ್ತರವಾಗಿ ತೇಲಾಡುತ್ತ ನಿಲ್ಲುತ್ತವೆ. ಈ ಜಾಳಿಗೆಗಳಿಗೆ 'ಡ್ರಿಫ್ಟನೆಟ್ಸ' (ತೇಲಾಡುವ ಜಾಳಿಗೆಗಳು) ಎಂದೆನ್ನು ತ್ತಾರೆ, ಮತ್ತು ಹಡಗಗಳಿಗೆ ಡ್ರಿಫ್ಟರ್ಸ ಎಂದು ಅನ್ನುತ್ತಾರೆ. ಹೆರಿಂಗ ಮತ್ತು ಮಾಕರೇಲ ಜಾತಿಯ ಮೀನುಗಳು ಕೇವಲ ಸುಗ್ಗಿಯಲ್ಲಿ ಸಿಗುತ್ತವೆ. ಅವು ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ಯಾವಾಗಲೂ ಓಡಾಡುತ್ತಿ ರುತ್ತವೆ. ಸ್ಕಾಟ್ಲಂಡದ ಪೂರ್ವ ದಂಡೆಯ ಹತ್ತರ ಈ ಮೀನುಗಳು ಮಾರ್ಚ ಏಪ್ರಿಲ್ ತಿಂಗಳುಗಳಲ್ಲಿ ಸಿಗುತ್ತವೆ. ಆದರೆ ಆಗಷ್ಟ ಸಪ್ಟೆಂಬರಗ ಳಲ್ಲಿ ಅವು ದಕ್ಷಿಣದ ಕಡೆಯ ಡಾಗರ ಬಂದರದಲ್ಲಿ ಬಂದು ಇಳಿಯುತ್ತವೆ. ಅವುಗಳ ಸುಗ್ಗಿಯು ಬಂದಾಗ ಲಕ್ಷಾವದೀ ಮೀನುಗಳ ಸಮೂಹಗಳು ನೀರಿ ನೊಳಗೆ ಅತ್ತಿತ್ತ ಆಡ್ಡಾಡುತ್ತಿರುತ್ತವೆ. ಅವು ಈ ಜಾಳಿಗೆಗಳೊಳಗೆ ಸಿಗು ತ್ತವೆ. ಮತ್ತು ಅವುಗಳ ಭಾರದಿಂದ ಜಾಳಿಗೆಗಳು ಜಡವಾಗಲಾರಂಭಿಸಿದ ವೆಂದರೆ, ಅವುಗಳನ್ನು ಮೇಲಕ್ಕೆ ತೆಗೆದು ಅವುಗಳೊಳಗಿನ ಮೀನುಗಳನ್ನು ಹಡಗದಲ್ಲಿ ಚಲ್ಲಿಕೊಂಡು ಬಂದರದೊಳಗೆ ಬರುತ್ತಾರೆ. ಹೆರಿಂಗ ಜಾತಿಯ

ಮೀನುಗಳನ್ನು ಬಹಳ ದಿವಸಗಳವರೆಗೆ ಕಾದಿಡಲಿಕ್ಕೆ ಬರುತ್ತದೆ. ಅವುಗಳನ್ನು ಕೊಯ್ದು ಸ್ವಚ್ಛ ಮಾಡಿದ ಮೇಲೆ ಕಟ್ಟಿಗೆಯ ಹೊಗೆಯ ಮೇಲೆ ಹಿಡಿದರೆ ಅವು ಕೆಡುವದಿಲ್ಲ. ಎಷ್ಟೋ ಜಾತಿಯ ಮೀನುಗಳು ಉಪ್ಪಿನಲ್ಲಿಟ್ಟರೆ ಕೆಡುವದಿಲ್ಲ. ಹೇರಿಂಗ ಜಾತಿಯ ಮೀನಿನ ಸುಗ್ಗಿಯು ಬಂದಿತೆಂದರೆ ಸಾವಿರಾರು ಜನ ಸ್ತ್ರೀ ಪುರುಷರಿಗೆ ಮೀನುಗಳಿಗೆ ಹೊಗೆ ಕೊಡುವ ಕೆಲಸವೂ ಅವುಗಳನ್ನು ಉಪ್ಪಿನಲ್ಲಿಟ್ಟು ಕಾದಿಡುವ ಕೆಲಸವೂ ಸಿಗುತ್ತವೆ. ಸ್ಕಾಟಲಂಡದೊಳಗಿನ ಜಾಲಗಾರರ ಹೆಂಗಸರು ಈ ಉದ್ಯೋಗದಲ್ಲಿ ಬಹಳ ನಿಪುಣರಾಗಿದ್ದು, ಅವರು ಈ ಸುಗ್ಗಿಯಲ್ಲಿ ಇಂಗ್ಲಂಡದ ಪೂರ್ವ ದಂಡೆಯ ಮೇಲಿರುವ ಯಾವತ್ತು ಬಂದರುಗಳಲ್ಲಿ ಈ ಉದ್ಯೋಗವನ್ನು ಮಾಡಲಿಕ್ಕೆ ತಿರುಗಾಡುತ್ತಿರುತ್ತಾರೆ. ಸುಗ್ಗಿಯು ಮುಗಿದ ಕೂಡಲೇ ಅವರು ತಮ್ಮ ತಮ್ಮ ದೇಶಕ್ಕೆ ಹೋಗುತ್ತಾರೆ. ಇಲ್ಲಿ ಮೀನು ಹಿಡಿಯುವ ಉದ್ಯೋಗವು ಬಹು ಲಾಭದಾಯಕವಿರುವದರಿಂದ ಅದರೊಳಗೆ ಜನರು ಕೋಟಿಗಟ್ಲೆ ಪೌಂಡುಗಳನ್ನು ತೊಡಗಿಸಿದ್ದಾರೆ.

**(೫) ಮಧ್ಯ ಇಂಗ್ಲಂಡವು :—** (ಅ) **ಸೆವ್ಹರ್ನ ನದಿಯ ಕೊಳ್ಳವು :—**ಸೆವ್ಹರ್ನ ಹೊಳೆಯು ಬ್ರಿಸ್ಟಲ್ಲದ ಆಖಾತಕ್ಕೆ ಕೂಡುತ್ತದೆ. ಅದರ ದಂಡೆಯ ಮೇಲಿರುವ ಫಲವತ್ತಾದ ರೇವೆಯ ಭೂಮಿಯಲ್ಲಿ ಕಾಳು, ಗಜ್ಜರಿ, ಕಾಯಿಪಲ್ಯ ಮತ್ತು ಹಣ್ಣುಗಳು ಚೆನ್ನಾಗಿ ಬೆಳೆಯುತ್ತವೆ. ಇಳುಕಲಿನ ಮೇಲಿರುವ ಹುಲ್ಲುಗದ್ದೆಗಳ ಮೇಲೆ ಹೈನಿನ ದನಗಳನ್ನು ಸಾಕುತ್ತಾರೆ. ಚೆಶಾಯರದೊಳಗಿನ ಗಿಣ್ಣವು ಪ್ರಸಿದ್ಧವಾಗಿರುತ್ತದೆ. ಈ ಭಾಗದೊಳಗೆ ತೊಗಲಿನ ಸರಕುಗಳನ್ನು ಮಾಡುವ ಕಾರಖಾನೆಗಳಾದರೂ ಇರುತ್ತವೆ.

ಸೆವ್ಹರ್ನ ಹೊಳೆಯ ಪಾತ್ರವು ಬ್ರಿಸ್ಟಲ್ಲದ ಆಖಾತಕ್ಕೆ ಕೂಡುವ ಸ್ಥಳದಲ್ಲಿ ತೀರ ಕಿರಿಯದಾಗಿರುತ್ತದೆ. ಸಮುದ್ರದ ಏರಿಕೆಯು ಆರಂಭವಾದ ಕೂಡಲೆ, ಹೊಳೆಯ ಅಗಲವು ಕಡಿಮೆಯಾಗಿರುವದರಿಂದ ನೀರು ಏರಲಾರಂಭಿಸುತ್ತದೆ; ಮತ್ತು ಆಗ ನೀರಿನ ಗೋಡೆಯೇ ಮುಂದಕ್ಕೆ ಹೋಗುವಂತೆ ಕಾಣುತ್ತದೆ. ಇದರಿಂದ ಹಡಗುಗಳಿಗೆ ಅಪಾಯ ತಟ್ಟುವ ಸಂಭವವಿರುತ್ತದೆ.

**ಬ್ರಿಸ್ಟಲ್** ಎಂಬ ಬಂದರವು ಪ್ರಾಚೀನ ಕಾಲದಿಂದ ಪ್ರಸಿದ್ಧವಾಗಿರುತ್ತದೆ. ಅಮೇರಿಕೆಯಿಂದ ತಂಬಾಕು, ಸಕ್ಕರೆ, ಕೋಕೋ, ಬಾಳೇಹಣ್ಣು

ಮುಂತಾದ ಪದಾರ್ಥಗಳು ಇಲ್ಲಿ ಬಂದು ಇಳಿಯುತ್ತವೆ. ಇಲ್ಲಿ ಸಕ್ಕರೆ, ಚಾಕೋಲೇಟ, ಮಿಠಾಯಿ, ಸಿಗಾರೇಟ ಮತ್ತು ಕಾಗದಗಳನ್ನು ತಯಾರಿಸುವ ಕಾರಖಾನೆಗಳಿರುತ್ತವೆ. **ಬಾಥ** ಎಂಬ ಪಟ್ಟಣದೊಳಗೆ ಬಿಸಿ ನೀರಿನ ಸೆಲೆಗಳುಂಟು. ಈ ನೀರಿನಿಂದ ಹಲಕೆಲವು ರೋಗಗಳು ವಾಸಿಯಾಗುವವೆಂದು ಹೇಳುತ್ತಾರೆ. ರೋಮನ್ ಜನರು ಅಲ್ಲಿ ಕಟ್ಟಿದ ಸ್ನಾನಗೃಹಗಳು ಇಂದಿಗೂ ಕಂಡುಬರುತ್ತವೆ.

(ಬ) **ಕಪ್ಪು ಪ್ರದೇಶವು:**—ಪೆನಾಯಿನ್ ಗುಡ್ಡಗಳ ದಕ್ಷಿಣಕ್ಕಿರುವ ಈ ಪ್ರದೇಶವು ಒಂದು ಕಾಲಕ್ಕೆ ಅತಿ ರಮಣೀಯವಾಗಿತ್ತು. ಆದರೆ ಕಲ್ಲಿದ್ದಲಿಯು ಸಿಗಹತ್ತಿದಂದಿನಿಂದ ಅಲ್ಲಿ ಎಷ್ಟೋ ಕಾರಖಾನೆಗಳಾದವು ಮತ್ತು ಆ ಕಾರಖಾನೆಗಳ ಹೊಗೆಯಿಂದ ಈ ಪ್ರದೇಶಕ್ಕೆ ಕಪ್ಪು ಪ್ರದೇಶವೆಂಬ ಅನ್ವರ್ಥಕ ಹೆಸರು ಬಂತು. ಇಲ್ಲಿ ಕಬ್ಬಿಣ-ಉಕ್ಕುಗಳ ಸಾಮಾನಿನ ಕಾರಖಾನೆಗಳಿರುತ್ತವೆ. ಸುತ್ತಮುತ್ತಲೂ ಕಲ್ಲಿದ್ದಲಿಯು ಸಿಗುತ್ತದೆ; ಆದರೆ ಮೇಲ್ತರದ ಕಬ್ಬಿಣವನ್ನು ಪರದೇಶಗಳಿಂದ ತರಬೇಕಾಗುತ್ತದೆ.

**ಬರ್ಮಿಂಗಹಮ:**—ಈ ಪಟ್ಟಣದೊಳಗೆ ಟಾಚಣಿಯು ಮೊದಲುಗೊಂಡು ಉಗಿಬಂಡಿಯ ಎಂಜಿನದ ವರೆಗಿನ ಯಾವತ್ತೂ ಸಣ್ಣ ಪುಟ್ಟ ಕಬ್ಬಿಣ-ಉಕ್ಕುಗಳ ಸರಕುಗಳು ತಯಾರಾಗುತ್ತವೆ. ಮೋಟಾರು, ಶಾಸ್ತ್ರೀಯ ಉಪಕರಣಗಳು, ಯುದ್ಧದ ಸಾಮಾನುಗಳು ಸಹ ಇಲ್ಲಿ ತಯಾರಾಗುತ್ತವೆ. **ಕಾವ್ಹೆಂಟ್ರೀ** ಎಂಬಲ್ಲಿ ಮೋಟಾರು, ಸಾಯಕಲ್ಲುಗಳನ್ನು ಮಾಡುವ ದೊಡ್ಡ ಕಾರಖಾನೆಗಳಿರುತ್ತವೆ. ರಗ್ಬೀ ಎಂಬಲ್ಲಿ ವಿದ್ಯುತ್ತಕ್ಕೆ ಸಂಬಂಧಿಸಿದ ಯಾವತ್ತೂ ತರದ ಸರಕುಗಳನ್ನು ಮಾಡುತ್ತಾರೆ. ಲಿಸ್ಟರ ಎಂಬಲ್ಲಿ ಹೆಣಿಕೆಯ ವಸ್ತುಗಳೂ ತೊಗಲಿನ ಸಾಮಾನುಗಳೂ ತಯಾರಾಗುತ್ತವೆ.

(ಕ) **ಟ್ರೆಂಟ ಹೊಳೆಯ ಕೊಳ್ಳವು:**—ಇದರೊಳಗಿನ **ಸ್ಟೋಕ** ಎಂಬ ಪಟ್ಟಣದೊಳಗೂ ಅದರ ಸುತ್ತಮುತ್ತಲಿನ ಪಟ್ಟಣಗಳಲ್ಲಿಯೂ ನೈಋತ್ಯದ ಭಾಗದಿಂದ ತಂದ ಎರೆಮಣ್ಣಿನಿಂದ ಪಾತ್ರೆಗಳನ್ನು ಮಾಡುವ ಅನೇಕ ಕಾರಖಾನೆಗಳಿರುತ್ತವೆ. **ಹ್ರೂ** ಎಂಬಲ್ಲಿ ರೇಲ್ವೆ ಎಂಜಿನಗಳನ್ನೂ ಮತ್ತು ಬೇರೆ ಸರಕುಗಳನ್ನೂ ತಯಾರಿಸುತ್ತಾರೆ. **ಡರ್ಬೀ** ಎಂಬ ಪಟ್ಟಣದಲ್ಲಿ ರೇಶಿಮೆಯ ಅರಿವೆಯನ್ನೂ, ರೇಲ್ವೆಗೆ ಬೇಕಾಗುವ ಸರಕುಗಳನ್ನೂ ಚೀನೀಮಣ್ಣಿನ ಪಾತ್ರೆ



ಮ್ಯಾಂಚೆಸ್ಟರ. Photo by Valentine, Dundee.

ಗಳನ್ನೂ ಮಾಡುತ್ತಾರೆ. **ನಾಟಿಂಗಹನ್** ಎಂಬಲ್ಲಿ ಗಂಜೀಫ್ರಾಕ್, ಸ್ಟಾಕಿಂಗ ಮುಂತಾದ ಹೆಣಿಕೆಯ ವಸ್ತ್ರಗಳು ತಯಾರಾಗುತ್ತವೆ.

**(೬) ಉತ್ತರ ಇಂಗ್ಲಂಡವು:**—ಇದರೊಳಗೆ ಪೆನಾಯಿನದ ಗುಡ್ಡವು ಮತ್ತು ಅದರ ಮಗ್ಗುಲಿಗಿರುವ ಪ್ರದೇಶಗಳು ಸಮಾವೇಶವಾಗುತ್ತವೆ. ದಕ್ಷಿಣೋತ್ತರವಾಗಿ ಹಬ್ಬಿದ ಈ ಗುಡ್ಡದೊಳಗೆ ಇದ್ದಲಿಯೂ ಸುಣಬುರಲಿಯೂ ಸಿಗುತ್ತವೆ. ಇದ್ದಲಿಯ ಖಣಿಗಳ ಹತ್ತರದಲ್ಲಿಯೇ ಕಬ್ಬಿಣ ಖಣಿಗಳಾದರೂ ಇರುತ್ತವೆ. ಈ ಗುಡ್ಡದ ಪೂರ್ವಕ್ಕೂ ಪಶ್ಚಿಮಕ್ಕೂ ಸಪಾಟಾದ. ಬೈಲುಗಳಿರುತ್ತವೆ. ಅಲ್ಲಿ ಒಕ್ಕಲತನವೂ, ಹೈನಿನ ದನಗಳನ್ನು ಸಾಕುವ ಉದ್ಯೋಗವೂ ಮುಖ್ಯವಾಗಿ ಸಾಗುತ್ತವೆ. ಹೊಲಗಳಲ್ಲಿ ಗೋದಿ, ಗಜ್ಜರಿ, ಬೀಟ ಮುಂತಾದ ಪದಾರ್ಥಗಳು ಬೆಳೆಯುತ್ತವೆ. ಒಕ್ಕಲಿಗರು ಹೈನಿನ ಉದ್ಯೋಗವನ್ನು ಮಾಡುತ್ತಾರೆ. ಗುಡ್ಡದ ಇಳುಕಲಿನ ಮೇಲೆ ಕುರಿಗಳನ್ನು ಸಾಕುತ್ತಾರೆ.

ಪೆನಾಯಿನ್ ಗುಡ್ಡದೊಳಗಿನ ಖನಿಜ ಸಂಪತ್ತಿಯಿಂದ ಉತ್ತರ ಇಂಗ್ಲಂಡವು ಉದ್ಯೋಗ ವ್ಯವಸಾಯಗಳಲ್ಲಿ ಬಹು ಮಹತ್ವವನ್ನು ಪಡೆದಿರುತ್ತದೆ. ಪಶ್ಚಿಮದ ಬದಿಗಿರುವ ಲಂಕೆಶಾಯರದೊಳಗೆ ಅರಿವೆಯ ದೊಡ್ಡ ದೊಡ್ಡ ಗಿರಣಿಗಳಿರುತ್ತವೆ. **ಲಿವ್ಹರಪೂಲ** ಬಂದರದೊಳಗೆ ಸಂಯುಕ್ತ ಸಂಸ್ಥಾನ, ಇಜಿಪ್ತ, ಭಾರತ ಮುಂತಾದ ದೇಶಗಳಿಂದ ಹತ್ತಿಯು ಬರುತ್ತದೆ. ಮತ್ತು ಅದು ಅಲ್ಲಿಂದ ಮ್ಯಂಚೆಸ್ಟರ ಪಟ್ಟಣಕ್ಕೂ ಹತ್ತರದಲ್ಲಿದ್ದ **ಬ್ಲೆಕ್‌ಬರ್ನ, ಓಲ್ಡಹಮು, ಬೋಲ್ಟನ್** ಮುಂತಾದ ಪಟ್ಟಣಗಳಿಗೂ ನೂಲುವದಕ್ಕೂ ನೇಯುವದಕ್ಕೂ ಕಳಿಸಲ್ಪಡುತ್ತದೆ. ಪಶ್ಚಿಮ ಭಾಗದೊಳಗೆ ಬರುವ ಆರ್ದ್ರವಾದ ಗಾಳಿಗಳಿಂದ ಅತಿ ಜಿನುಗಾದ ನೂಲನ್ನು ತೆಗೆದು ನೇಯುವಾಗ ಹರಿಯುವದಿಲ್ಲ. ಒಣದಾದ ಹವೆಯಲ್ಲಿ ಅದು ಮೇಲಿಂದ ಮೇಲೆ ಹರಿಯುವದು. ಕಲ್ಲಿದ್ದಲಿ, ಕಬ್ಬಿಣಗಳು ಹತ್ತರದಲ್ಲಿಯೇ ಸಿಗುವದರಿಂದ, ಯಂತ್ರ ಸಾಮಗ್ರಿಗಳ ಕೊರತೆಯಾಗಲಿ ಶಕ್ತಿಯ ಕೊರತೆಯಾಗಲಿ ಎಂದೂ ಬೀಳುವದಿಲ್ಲ.

**ಲಿವ್ಹರಪೂಲ**ವು ಬಹು ದೊಡ್ಡ ಬಂದರವಾಗಿರುತ್ತದೆ. ಅಲ್ಲಿ ಉತ್ತರ

ಅಮೇರಿಕೆಯಿಂದ ಗೋದಿ, ಮಾಂಸ, ಹತ್ತಿ ಮತ್ತು ಕಟ್ಟಿಗೆಗಳೂ, ವೆಸ್ಟ ಇಂಡೀಜ ದ್ವೀಪಗಳಿಂದ ಸಕ್ಕರೆ ಮತ್ತು ತಂಬಾಕುಗಳೂ, ಆಫ್ರಿಕೆಯಿಂದ ಆನೆಯ ಹಲ್ಲು, ರಬ್ಬರು ಮತ್ತು ಎಣ್ಣೆಗಳೂ ಬರುತ್ತವೆ. ಅದರಂತೆ ಬೇರೆ ದೇಶಗಳಿಂದಾದರೂ ಎಷ್ಟೋ ಕಚ್ಚಾ ಸರಕುಗಳು ಬರುತ್ತವೆ. ಮತ್ತು ಅರಿವೆ, ಧಾತುಗಳ ಒಡವೆಗಳು ಇಲ್ಲಿಂದ ಪರದೇಶಗಳಿಗೆ ಹೋಗುತ್ತವೆ. **ಬರ್ಕನ್ ಹೆಡ್** ಎಂಬಲ್ಲಿ ಹಡಗಗಳನ್ನು ಕಟ್ಟುತ್ತಾರೆ.

ಪೆನಾಯಿನದ ಪೂರ್ವಕ್ಕಿರುವ ಬೈಲಿನೊಳಗೆ **ಲೀಡ್ಸ**, **ಬ್ರೆಡಫೊರ್ಡ**, **ಹೆಲಿಫಕ್ಸ** ಮುಂತಾದ ಪಟ್ಟಣಗಳಲ್ಲಿ ಉಣ್ಣೆಯ ಅರಿವೆಗಳೂ, ಗಾಲೀಜ-




ಉತ್ತರ ಇಂಗ್ಲಂಡದಲ್ಲಿಯ ಹತ್ತಿಯ ಬಟ್ಟೆಯ ಕಾರಖಾನೆಗಳ ಪ್ರದೇಶ.

ಬ್ಲಂಕೆಟ ಮುಂತಾದ ಸರಕುಗಳೂ ತಯಾರಾಗುತ್ತವೆ. ಯಾರ್ಕ ಪರ ಗಣೆಯೊಳಗಿನ ಗುಡ್ಡದ ಓರೆಯ ಮೇಲಿನ ಕುರಿಗಳ ಉಣ್ಣೆಯು ಈ ಕಾರ ಖಾನೆಗಳಿಗೆ ಸಾಕಷ್ಟು ಸಿಗುವದಿಲ್ಲ; ಆದ್ದರಿಂದ ಆಸ್ಟ್ರೇಲಿಯಾ, ನ್ಯೂಝೀ ಲಂಡ, ದಕ್ಷಿಣ ಆಫ್ರಿಕಾ, ಆರ್ಜೆಂಟಿನಾ ಮುಂತಾದ ದೇಶಗಳಿಂದ ಉಣ್ಣೆಯು ಇಲ್ಲಿ ಬರುತ್ತದೆ. **ಶೇಫೀಲ್ಡ** ಎಂಬಲ್ಲಿ ಚಾಕು, ಕತ್ತರಿ ಮುಂತಾದ ಉಕ್ಕಿನ ಸಾಮಾನುಗಳು ತಯಾರಾಗುತ್ತವೆ.

ಈ ಪ್ರದೇಶದ ಉತ್ತರ ಭಾಗದೊಳಗೆ ಡರಹಮ ಮತ್ತು ನಾರ್ದಂಬ ರ್ಲಂಡ ಎಂಬ ಪರಗಣೆಗಳಲ್ಲಿ ಕಲ್ಲಿದ್ದಲಿಯ ದೊಡ್ಡ ದೊಡ್ಡ ಖಣಿಗಳಿರುತ್ತವೆ. ಆದ್ದರಿಂದ ಟಾಯಿನ್ ಎಂಬ ಹೊಳೆಯ ದಂಡೆಯ ಮೇಲಿರುವ **ನ್ಯೂ ಕಸಲ್** ಎಂಬಲ್ಲಿ ಹಡಗುಗಳನ್ನು ಕಟ್ಟುವ ಕೆಲಸವು ನಡೆಯುತ್ತದೆ. ಅದರಂತೆ ಆ ಹೊಳೆಯ ದಡದಲ್ಲಿ ರಸಾಯನಿಕ ದ್ರವ್ಯಗಳನ್ನೂ ಕಾಜಿನ ಒಡವೆಗಳನ್ನೂ ಮಾಡುವ ಕಾರಖಾನೆಗಳಿರುತ್ತವೆ. **ಹಲ್ಲ** ಎಂಬ ಬಂದರವು ಹಂಬರ ನದಿಯ ಮುಖದ ಹತ್ತರ ಇರುತ್ತದೆ. ಅಲ್ಲಿ ನಾರು, ಉಣ್ಣೆ, ಕಟ್ಟಿಗೆ ಮುಂತಾದ ಸರ ಕುಗಳು ಬರುತ್ತವೆ. ನಮ್ಮ ದೇಶದಿಂದ ಎಳ್ಳು, ನೆಲಗಡಲೆ ಮುಂತಾದ ಪದಾರ್ಥಗಳು ಎಣ್ಣೆಯ ಸಲುವಾಗಿ ಹೋಗುತ್ತವೆ. ಪಶ್ಚಿಮ ಭಾಗದೊಳಗೆ ಮಂಚೆಸ್ಟರ ಪಟ್ಟಣವು ನೂಲಿನ ಕಾರಖಾನೆಗಳ ಕೇಂದ್ರವಿದ್ದಂತೆ, ಪೂರ್ವ ಭಾಗದೊಳಗೆ **ಲೀಡ್ಸ** ಎಂಬ ಪಟ್ಟಣವು ಉಣ್ಣೆಯ ಬಟ್ಟೆಗಳ ಕಾರಖಾನೆಗಳ ಕೇಂದ್ರವಾಗಿರುತ್ತದೆ. **ಯಾರ್ಕ** ಎಂಬ ಪಟ್ಟಣವು ವ್ಯಾಪಾರದ ಸ್ಥಳವಿದ್ದು ಎಷ್ಟೋ ಮಾರ್ಗಗಳು ಇಲ್ಲಿ ಬಂದು ಕೂಡುತ್ತವೆ.

ಪೆನಾಯಿನ್ ಗುಡ್ಡದ ವಾಯವ್ಯದ ಕಡೆಯ ಪ್ರದೇಶಕ್ಕೆ **ಸರೋವರ ಗಳ ಪ್ರದೇಶ**ವೆಂದೆನ್ನುತ್ತಾರೆ. ಇಲ್ಲಿ ಸಾಕಷ್ಟು ಮಳೆಯಾಗುತ್ತದೆ. ಇಲ್ಲಿಯ ಸರೋವರಗಳು ಬಹು ರಮಣೀಯವಾಗಿರುತ್ತವೆ. ಅವುಗಳನ್ನು ನೋಡಲಿಕ್ಕೆ ಎಷ್ಟೋ ಜನರು ಬರುತ್ತಾರೆ. ಈ ಭಾಗದೊಳಗೆ ಒಕ್ಕಲತನವು ಅಲ್ಪಪ್ರಮಾಣದಲ್ಲಿದೆ ಮತ್ತು ಅಲ್ಲಿಯ ಜನರು ಮುಖ್ಯವಾಗಿ ಕುರಿಗಳನ್ನು ಸಾಕುತ್ತಾರೆ. **ಕೆಸಿಕ್** ಎಂಬಲ್ಲಿ ಸೀಸಪೇನುಗಳನ್ನು ಮಾಡುತ್ತಾರೆ. ಅವು ಗಳಿಗೆ ಬೇಕಾಗುವ ಗ್ರಾಫಾಯಿಟ ಎಂಬ ಪದಾರ್ಥವು ಸಿಲೋನದಿಂದ ಬರು ತ್ತದೆ. **ಕಾರ್ಲಾಯಿಲ್** ಎಂಬಲ್ಲಿ ಎಷ್ಟೋ ಉಗಿ ಬಂಡಿಯ ದಾರಿಗಳು ಬಂದು ಕೂಡುತ್ತವೆ.

# ವೇಲ್ಸ

ಇಂಗ್ಲಂಡದ ಆಗ್ನೇಯದ ಕಡೆಗಿರುವ ಫಲವತ್ತಾದ ಬೈಲಿನೊಳಗೆ ಕೆಲ್ಟಿಕ್ ವಂಶಜರು ವಾಸಿಸುತ್ತಿದ್ದರು. ಅವರ ಮೇಲೆ ಸಕ್ಸನ್, ರೋಮನ್, ನಾರ್ಮನ್ ಮುಂತಾದ ಅನೇಕ ಪರಕೀಯರು ದಾಳೀ ಮಾಡಿದ್ದರಿಂದ ಈ ಜನರು ಪಶ್ಚಿಮದ ಕಡೆಗಿರುವ ಈ ಗುಡ್ಡಗಾಡು ಪ್ರದೇಶವನ್ನು ಸೇರಿ ಅಲ್ಲಿಯೇ ನೆಲಸಿದರು. ಇಂದಿನ ವೇಲ್ಸ ಜನರು ಅವರ ವಂಶಜರೇ ಆಗಿರುತ್ತಾರೆ. ಅವರು ಪುರಾತನ ಕಾಲದ ರೀತಿನಡತೆಗಳನ್ನು ಅನುಸರಿಸುತ್ತಾರೆ. ಮತ್ತು ಹಬ್ಬ ಹುಣ್ಣಿಮೆಗಳ ದಿವಸ ಹಳೇ ತರದ ಉಡುಪುಗಳನ್ನು ಧರಿಸುತ್ತಾರೆ. ಗುಡ್ಡಗಾಡಿನೊಳಗೆ ಜೀವಿಸುವ ಈ ಜನರು ಮೇಲಾದ ಸಿಪಾಯರೂ, ಸ್ವಾತಂತ್ರ್ಯಪ್ರಿಯರೂ, ದೇಶಾಭಿಮಾನಿಗಳೂ ಆಗಿರುತ್ತಾರೆ. ಅವರು ವೇಲ್ಸ ಮತ್ತು ಇಂಗ್ಲಿಷ ಭಾಷೆಗಳನ್ನಾಡುತ್ತಾರೆ.

ಸಮುದ್ರದ ದಂಡೆಗುಂಟ ಇರುವ ಕಿರಿಯಗಲಾದ ತಗ್ಗು ಪ್ರದೇಶವನ್ನು ಬಿಟ್ಟು ಉಳಿದ ಯಾವತ್ತೂ ವೇಲ್ಸ ಪ್ರಾಂತವು ತೀರ ಗುಡ್ಡಗಾಡು ಇರುತ್ತದೆ. **ಸ್ನೋಡನ್** ಎಂಬದು ಅದರೊಳಗಿನ ಅತಿ ಉನ್ನತವಾದ ಪರ್ವತಶಿಖರವಿದ್ದು, ಅದು ೩೫೦೦ ಫೂಟು ಎತ್ತರವಾಗಿರುತ್ತದೆ. ಮಹಾ ಸಾಗರದ ಮೇಲಿಂದ ಬರುವ ಗಾಳಿಗಳು ಇಲ್ಲಿ ಹನ್ನೆರಡೂ ತಿಂಗಳು ಮಳೆಯನ್ನು ತರುತ್ತವೆ. ಆದ್ದರಿಂದ ದರಿಕಂದರುಗಳಲ್ಲಿ ಯಾವಾಗಲೂ ಹಸರು ಹುಲ್ಲು ಸಿಗುತ್ತದೆ. ಇಂಥ ಸ್ಥಳಗಳಲ್ಲಿ ದನಗಳೂ ಕುರಿಗಳೂ ಸಾಕಲ್ಪಡುತ್ತವೆ. ಮಾಂಸವನ್ನೂ ಹೈನಿನ ಪದಾರ್ಥಗಳನ್ನೂ ಇಲ್ಲಿಂದ ಇಂಗ್ಲಂಡಕ್ಕೆ ಕಳಿಸುತ್ತಾರೆ. ಉಣ್ಣೆಯಿಂದ ಫ್ಲನೆಲ್ಲದ ಅರಿವೆಗಳನ್ನು ನೇಯುತ್ತಾರೆ. ಒಕ್ಕಲತನವು ಮಾತ್ರ ತೀರ ತುಸು ಸಾಗುತ್ತದೆ. ಆದರೆ ಕರಾವಳಿಯ ಮೇಲೆ ಮೀನು ಹಿಡಿಯುವ ಉದ್ಯೋಗವು ಚೆನ್ನಾಗಿ ಸಾಗುತ್ತದೆ.

ವೇಲ್ಸದ ದಕ್ಷಿಣ ಭಾಗವು ಬಹು ಮಹತ್ವದ್ದಾಗಿರುತ್ತದೆ. ಯಾಕಂದರೆ ಅಲ್ಲಿ ಕಲ್ಲಿದ್ದಲಿಯ ಬಹು ದೊಡ್ಡ ಖಣಿಗಳಿರುತ್ತವೆ. ಅವೆಲ್ಲವೂ ಸಮುದ್ರದ ಹತ್ತರ ಇರುವದರಿಂದ ಇದ್ದಲಿಯನ್ನು ಕಳಿಸಲಿಕ್ಕೆ ಬಹಳ ಸೌಕರ್ಯವಾಗಿದೆ. ಇದಲ್ಲದೆ ಇಲ್ಲಿ ಸಿಗುವ ಇದ್ದಲಿಗೆ ತೀರ ತುಸು ಹೊಗೆಯೂ ಬಹಳ

ವಾದ ಉಷ್ಣತೆಯೂ ಇರುವದರಿಂದ ಅದನ್ನು ಯುದ್ಧದ ಹಡಗುಪಡೆಗಳಲ್ಲಿ ವಿಶೇಷವಾಗಿ ಉಪಯೋಗಿಸುತ್ತಾರೆ. ಇಲ್ಲಿಯ ಸ್ಥಾನಿಕ ಕಾರಖಾನೆಗಳಿಗೆ ಸಾಕಾಗಿ ಉಳಿಯುವ ಇದ್ದಲಿಯನ್ನು ಪರದೇಶಗಳಿಗೆ ಕಳಿಸುತ್ತಾರೆ. ಕಬ್ಬಿಣದ ಖಣಿಗಳಾದರೂ ಹತ್ತರದಲ್ಲಿಯೇ ಇರುತ್ತವೆ. ಆದ್ದರಿಂದ **ಕಾರ್ಡಿಫ್,**



Fox Photos Ltd.

ಕಾರ್ಡಿಫ್‌ನ ಕಾರಖಾನೆ.

**ಸ್ವಾನ್ಸೀ** ಮುಂತಾದ ಬಂದರದ ಪಟ್ಟಣಗಳಲ್ಲಿ ಧಾತುಗಳ ದೊಡ್ಡ ದೊಡ್ಡ ಕಾರಖಾನೆಗಳು ಸ್ಥಾಪಿಸಲ್ಪಟ್ಟಿವೆ. ಅವುಗಳಿಗೆ ಬೇಕಾಗುವ ಮೇಲ್ತರದ ಕಬ್ಬಿಣ, ತಾಮ್ರ, ತವರು, ನಿಕೆಲ್ ಮುಂತಾದ ಧಾತುಗಳನ್ನು ಪರದೇಶಗಳಿಂದ ತರಿಸಿಕೊಳ್ಳುತ್ತಾರೆ. ತವರಿನ ಗಿಲೀಟು ಮಾಡಿದ ಕಬ್ಬಿಣದ ತಗಡುಗಳನ್ನು ಬಹಳವಾಗಿ ತಯಾರು ಮಾಡುವರು.

ಆದರೆ ವೇಲ್ಸದ ಉತ್ತರಭಾಗವು ಉದ್ಯೋಗ-ವ್ಯವಸಾಯಗಳ ದೃಷ್ಟಿಯಿಂದ ಅಷ್ಟೊಂದು ಮಹತ್ವದ್ದಾಗಿರುವದಿಲ್ಲ. ಕಲ್ಲಿದ್ದಲಿಯು ಇಲ್ಲಿ ಸಿಗುವದಿಲ್ಲ. ಆದರೆ ಭರದಿಂದ ಹರಿಯುವ ಹಳ್ಳಗಳ ಪ್ರವಾಹಗಳಿಂದ ವಿದ್ಯುಚ್ಛಕ್ತಿಯನ್ನು ಹುಟ್ಟಿಸಿ, ಅದನ್ನು ಅಲ್ಯುಮಿನಿಯಮ್‌ದ ಕಾರಖಾನೆಗಳಲ್ಲಿ

ಉಪಯೋಗಿಸುತ್ತಾರೆ. ಈ ಭಾಗದಲ್ಲಿ ಪಾಟಿಯ ಕಲ್ಲು ಸಿಗುತ್ತದೆ. ಅದನ್ನು **ಕೆರ್ನಾರ್ವ್ಹನ್** ಬಂದರದಿಂದ ಪರದೇಶಗಳಿಗೆ ಕಳಿಸುತ್ತಾರೆ. ಈ ಪ್ರಾಂತದೊಳಗಿನ ಮಾರ್ಗಗಳು ಕೇವಲ ದರಿಕಂದರಗಳಲ್ಲಿರುತ್ತವೆ. ಅವುಗಳನ್ನು ಸಂರಕ್ಷಿಸುವ ಸಲುವಾಗಿ ಪ್ರಾಚೀನಕಾಲದಲ್ಲಿ ದಿನ್ನೆಗಳ ಮೇಲೆ ಕಟ್ಟಿದ ಕೋಟೆಗಳನ್ನು ಇಂದಿಗೂ ನೋಡಬಹುದು. ಈ ಪ್ರಾಂತದೊಳಗಿನ ಮುಖ್ಯ ಪಟ್ಟಣವಾದ **ಎಬ್ರಿಸ್ವಿಥ್** ಎಂಬಲ್ಲಿ ವಿಶ್ವವಿದ್ಯಾಲಯವಿರುತ್ತದೆ.

**ಐಲ್ ಆಫ್ ಮ್ಯಾನ್ :**—ಇಂಗ್ಲಂಡದ ಹತ್ತರದಲ್ಲಿಯೇ ಇರುವ ಈ ನಡುಗಡ್ಡೆಯೊಳಗಿನ ಅಲ್ಹಾದಕರವಾದ ಹವೆಯ ಸಲುವಾಗಿಯೂ, ಅಲ್ಲಿಯ ಸೃಷ್ಟಿ ಸೌಂದರ್ಯದ ಸಲುವಾಗಿಯೂ ಬಿಡುವಿನ ದಿವಸಗಳಲ್ಲಿ ಎಷ್ಟೋ ಜನರು ಇಲ್ಲಿ ಬರುತ್ತಾರೆ. ಇಲ್ಲಿಯ ಜನರ ಮುಖ್ಯ ಉದ್ಯೋಗಗಳು ದನಕಾಯುವದೂ ಮೀನು ಹಿಡಿಯುವದೂ ಆಗಿರುತ್ತವೆ. ಈ ನಡುಗಡ್ಡೆಯೊಳಗೆ ಸೀಸ ಮತ್ತು ಸತುವುಗಳು ತುಸುಮಟ್ಟಿಗೆ ಸಿಗುತ್ತವೆ.

೩ನೇ ಪ್ರಕರಣ

# ಸ್ಕಾಟಲಂಡ ಮತ್ತು ಐರ್ಲಂಡ

## ಸ್ಕಾಟಲಂಡ

ಇಂಗ್ಲಂಡದಲ್ಲಿ ರೋಮನ್ ಜನರು ರಾಜ್ಯವಾಳುವಾಗ ಈ ದೇಶ ದೊಳಗೆ ಪಿಕ್ಟ ಎಂಬ ಜನರು ವಾಸಿಸುತ್ತಿದ್ದರು. ಆ ಮೇಲೆ ಐರ್ಲಂಡ ದಿಂದ ಸ್ಕಾಟ ಜನರು ಅಲ್ಲಿ ಹೋಗಿ ನೆಲಿಸಿದರು. ಮತ್ತು ಆ ಜನರಿಂದಲೇ ಈ ದೇಶಕ್ಕೆ ಸ್ಕಾಟಲಂಡ ಎಂಬ ಹೆಸರು ಪ್ರಾಪ್ತವಾಯಿತು. ಗೇಲಿಕ್ ಮತ್ತು ಇಂಗ್ಲಿಷ ಭಾಷೆಗಳನ್ನು ಸ್ಕಾಚ್ ಜನರು ಮಾತಾಡುತ್ತಾರೆ. ಸ್ಕಾಚ್ ಜನರು ಶೌರ್ಯ, ಕಷ್ಟಸಹಿಷ್ಣುತೆ ಮತ್ತು ಆದರಾತಿಥ್ಯಗಳ ಬಗ್ಗೆ ಹೆಸರಾ ಗಿದ್ದಾರೆ. ಅದರಲ್ಲಿಯೂ ಉತ್ತರದ ಕಡೆಗಿರುವ ಗುಡ್ಡಗಾಡಿನಲ್ಲಿರುವ ಹಾಯಲೆಂಡರ್ಸ ಎಂಬ ಜನರು ಜಗತ್ತಿನೊಳಗಿನ ಶೂರ ಜನರೊಳಗೆ ಎಣಿ ಸಲ್ಪಡುತ್ತಾರೆ. ಸ್ಕಾಚ್ ಜನರಿಗೆ ತಮ್ಮ ದೇಶ, ತಮ್ಮ ಕವಿಗಳು ಮತ್ತು ವೀರರು, ತಮ್ಮ ನಡೆನುಡಿ, ಉಡಿಗೆ ತೊಡಿಗೆಗಳ ಬಗ್ಗೆ ಬಹಳ ಅಭಿ ಮಾನವೆನಿಸುತ್ತದೆ.

ಈ ದೇಶದೊಳಗೆ (೧) ದಕ್ಷಿಣ ಕಡೆಯ ಎತ್ತರ ಪ್ರದೇಶ, (೨) ಮಧ್ಯ ಭಾಗದ ತಗ್ಗು ಪ್ರದೇಶ ಮತ್ತು (೩) ಉತ್ತರ ಕಡೆಯ ಗುಡ್ಡ ಗಾಡು ಪ್ರದೇಶ ಎಂಬ ಮೂರು ಸ್ವಾಭಾವಿಕ ವಿಭಾಗಗಳನ್ನು ಮಾಡ ಬಹುದು.

**(೧) ದಕ್ಷಿಣ ಕಡೆಯ ಪ್ರದೇಶವು :**—ಈ ಎತ್ತರವಾದ ಪ್ರದೇ ಶವು ಪೆನಾಯಿನ್ ಗುಡ್ಡಕ್ಕೆ ಹೊಂದಿಕೊಂಡಿರುತ್ತದೆ. ಪ್ರಾಚೀನ ಕಾಲದಲ್ಲಿ ಇದು ಉತ್ತರದ ಕಡೆಯ ಗುಡ್ಡಗಾಡು ಪ್ರದೇಶದಷ್ಟೇ ಎತ್ತರವಾಗಿತ್ತು; ಆದರೆ ಇದರ ಪೃಷ್ಠಭಾಗವು ಮೃದುವಾಗಿ ಕಲ್ಲಿನಿಂದುಂಟಾಗಿರುವದರಿಂದ

ಅದು ಕ್ರಮೇಣ ಸವೆಯುತ್ತ ಹೋಗಿ ಈಗಿನ ತಗ್ಗು ಪ್ರದೇಶವಾಯಿತು. ಈ ಭಾಗದೊಳಗೆ ಉದ್ಯೋಗ-ವ್ಯವಸಾಯಗಳಾಗಲಿ ಒಕ್ಕಲತನವಾಗಲಿ ಇಲ್ಲದ್ದರಿಂದ ಜನಸಂಖ್ಯೆಯು ತೀರ ತುಸು ಇರುತ್ತದೆ. ಹಳ್ಳಿಗಳು ಕೊಳ್ಳಗಳಲ್ಲಿ ನೆಲೆಸಿರುವವು. ಅಲ್ಲಿ ಒಕ್ಕಲತನವು ಕೆಲಮಟ್ಟಿಗೆ ಸಾಗುತ್ತದೆ. ಅಡವಿಯಲ್ಲಿ ಕುರಿಗಳನ್ನು ಮೇಯಿಸುತ್ತಾರೆ. ಪೂರ್ವಕಾಲದಲ್ಲಿ ಉಣ್ಣೆಯ ವಸ್ತ್ರಗಳನ್ನು ಕೈಮಗ್ಗದ ಮೇಲೆ ನೇಯುತ್ತಿದ್ದರು; ಆದರೆ ಈಗ ಅವುಗಳನ್ನು ಗಿರಣಿಯಲ್ಲಿ ನೇಯುತ್ತಾರೆ.

ಸ್ಕಾಟಲಂಡ ಮತ್ತು ಇಂಗ್ಲಂಡ ಇವುಗಳ ಸೀಮೆಯ ಮೇಲಿರುವ ಗುಡ್ಡಗಾಡು ಪ್ರದೇಶವು ಇತಿಹಾಸ ಪ್ರಸಿದ್ಧವಾಗಿದೆ. ಅಲ್ಲಿ ಬಿದ್ದ ಹಳೇ ಕೋಟೆಗಳೂ ಕೊತ್ತಳಗಳೂ ಇಂದಿಗೂ ದೃಷ್ಟಿಗೆ ಬೀಳುತ್ತವೆ. ರಾಬರ್ಟ ಬ್ರೂಸ್ ಮತ್ತು ವಾಲೆಸ್‌ರಂಥ ಸ್ಕಾಚ್ ವೀರರ ಹೆಸರುಗಳು ಈ ಭಾಗದಲ್ಲಿ ಪ್ರಸಿದ್ಧವಾಗಿರುತ್ತವೆ.

**(೨) ಮಧ್ಯಭಾಗದ ತಗ್ಗು ಪ್ರದೇಶ :**—ಇಡೀ ಸ್ಕಾಟಲಂಡ ದೇಶವು ಪ್ರಾಚೀನ ಕಾಲದಲ್ಲಿ ಒಂದೇ ಸವನೆ ಎತ್ತರವಾಗಿತ್ತು; ಆದರೆ ಅದರೊಳಗಿನ ನಡುವಿನ ಭಾಗವು ಕುಸಿಬಿದ್ದು ಈ ತಗ್ಗು ಪ್ರದೇಶವು ನಿರ್ಮಾಣವಾಯಿತು. ಈ ಭಾಗದೊಳಗೆ ಒಕ್ಕಲತನವು ಚೆನ್ನಾಗಿ ಸಾಗುತ್ತದೆ. ಖನಿಜ ದ್ರವ್ಯಗಳು ವಿಪುಲವಾಗಿ ಸಿಗುತ್ತವೆ. ಆದ್ದರಿಂದ ಎಷ್ಟೋ ಕಾರಖಾನೆಗಳು ಸಹ ಇಲ್ಲಿ ಇರುತ್ತವೆ. ಆದ್ದರಿಂದ ಈ ಭಾಗಕ್ಕೆ ಹೆಚ್ಚಾದ ಮಹತ್ವ ಬಂದಿರುತ್ತದೆ. ಇದರೊಳಗಿನ ಪೂರ್ವದ ಬದಿಗೆ ಹವೆಯು ಒಣದಾಗಿಯೂ ಬೆಚ್ಚಗಾಗಿಯೂ ಇರುತ್ತದೆ. ಮತ್ತು ಪಶ್ಚಿಮದ ಬದಿಗೆ ಮಳೆಯು ಹೆಚ್ಚಾಗುತ್ತದೆ. ಇದರಿಂದ ಪೂರ್ವದ ಕಡೆಗೆ ಗೋದಿ, ಜವೆಗೋದಿಗಳು ಚೆನ್ನಾಗಿ ಬೆಳೆಯುತ್ತವೆ. ಮತ್ತು ಪಶ್ಚಿಮದ ಕಡೆಗೆ ಜವೆಗೋದಿ, ಓಟ ಎಂಬ ಧಾನ್ಯಗಳು ಬೆಳೆಯುತ್ತವೆ. ಹುಲ್ಲುಗಾವಲುಗಳಲ್ಲಿ ದನಗಳನ್ನೂ ಕುರಿಗಳನ್ನೂ ಸಾಕುತ್ತಾರೆ. ಇದಲ್ಲದೆ ಎಷ್ಟೋ ಜನರು ಖಣಿಗಳಲ್ಲಿಯೂ, ಗಿರಣಿ-ಕಾರಖಾನೆಗಳಲ್ಲಿಯೂ ದುಡಿದು ತಮ್ಮ ಉದರ ನಿರ್ವಾಹವನ್ನು ಸಾಗಿಸುತ್ತಾರೆ. ಈ ಭಾಗದೊಳಗೆ ಕಲ್ಲಿದ್ದಲಿಯು ವಿಪುಲವಾಗಿ ಸಿಗುತ್ತದೆ.

**ಎಡಿನ್‌ಬರೊ :**—ಈ ಮುಖ್ಯವಾದ ಪಟ್ಟಣವು ಫೋರ್ಥ ಹೊಳೆಯ ಅಗಲವಾದ ಮುಖದ ಮೇಲೆ ನೆಲಿಸಿರುತ್ತದೆ. ಇಲ್ಲಿ ಪ್ರಾಚೀನ ಕಾಲದಲ್ಲಿ ಸ್ಕಾಟಲಂಡದ ಅರಸರು ರಾಜ್ಯವಾಳುತ್ತಿದ್ದರು. ಪಟ್ಟಣದ ಹತ್ತರದಲ್ಲಿರುವ ದಿಬ್ಬದ ಮೇಲೆ ಭದ್ರವಾದ ಕೋಟೆಯನ್ನು ಕಟ್ಟಿದ್ದಾರೆ, ಈ ಪಟ್ಟಣದೊಳಗೆ ಕಾಗದದ ಕಾರಖಾನೆಗಳೂ, ಪುಸ್ತಕಗಳನ್ನು ಛಾಪಿಸುವ ಮತ್ತು ಸರಾಯಿ, ಸಾಬಣ, ಮೇಣಬತ್ತಿಗಳನ್ನು ತಯಾರಿಸುವ ಕಾರಖಾನೆಗಳೂ ಇರುತ್ತವೆ. ಈ ಪಟ್ಟಣದಿಂದ ರೈಲುಮಾರ್ಗದಿಂದ ಸ್ಕಾಟಲಂಡದ ಯಾವತ್ತೂ ಭಾಗಗಳಿಗೆ ಹೋಗಲಿಕ್ಕೆ ಬರುತ್ತದೆ. **ಪರ್ಥ** ಎಂಬುದು ಸ್ಕಾಟಲಂಡದ ಹಳೇ ರಾಜಧಾನಿಯಾಗಿದ್ದಿತು. **ದಂಡೀ** ಎಂಬಲ್ಲಿ ಹಡಗುಗಳನ್ನು ಕಟ್ಟುತ್ತಾರೆ; ಗೋಣಿಯ ಮತ್ತು ನಾರಿನ ವಸ್ತ್ರಗಳನ್ನು ಮಾಡುತ್ತಾರೆ. ಮತ್ತು ಮುರಬ್ಬೆಯನ್ನು ತಯಾರಿಸುತ್ತಾರೆ. ಗಿರಣಿಗಳಲ್ಲಿ ಉಪಯೋಗಿಸಲ್ಪಡುವ ಗೋಣಿಯು ಭಾರತ ಮತ್ತು ಪಾಕಿಸ್ತಾನದಿಂದ ಬರುತ್ತದೆ. **ಗ್ಲಾಸಗೊ** ಎಂಬ ಪಟ್ಟಣವು ಕ್ಲಾಯಿಡ ಹೊಳೆಯ ದಂಡೆಯ ಮೇಲೆ ಇರುತ್ತದೆ. ಈ ಹೊಳೆಯ ಕೊಳ್ಳದೊಳಗೆ ಕಲ್ಲಿದ್ದಲಿಯು ಸಿಗುತ್ತದೆ. ಆದ್ದರಿಂದ ಈ ಪಟ್ಟಣದೊಳಗೆ ಹಡಗುಗಳನ್ನು ಕಟ್ಟುವ ಕಾರಖಾನೆಗಳೂ, ಅರಿವೆಯ ಗಿರಣಿಗಳೂ, ರಸಾಯನಿಕ ದ್ರವ್ಯಗಳನ್ನು ತಯಾರಿಸುವ ಕಾರಖಾನೆಗಳೂ ಆದರಂತೆ ಕಬ್ಬಿಣ-ಉಕ್ಕುಗಳ ಸರಕುಗಳನ್ನು ಮಾಡುವ ಕಾರಖಾನೆಗಳೂ ಇರುತ್ತವೆ.

**(೩) ಉತ್ತರದ ಕಡೆಯ ಗುಡ್ಡಗಾಡು ಪ್ರದೇಶ :**— 'ಹಾಯಲಂಡ್ಸ' ಎಂಬ ಹೆಸರಿನಿಂದ ಪ್ರಸಿದ್ಧವಾದ ಈ ಪ್ರದೇಶದೊಳಗೆ ಸ್ಕಾಟಲಂಡದ ಅರ್ಧಕ್ಕಿಂತ ಹೆಚ್ಚು ಭಾಗವು ಒಳಗೊಂಡಿರುತ್ತದೆ. ಇದರಲ್ಲಿ ಜನವಸತಿಯು ತೀರ ವಿರಲವಾಗಿರುತ್ತದೆ. ಆದರೆ ಇಲ್ಲಿಯ ರಮಣೀಯವಾದ ಸರೋವರಗಳನ್ನೂ ಇನ್ನಿತರ ಸೃಷ್ಟಿ ಸೌಂದರ್ಯವನ್ನೂ ನೋಡಲಿಕ್ಕೆ ಈ ಭಾಗಕ್ಕೆ ಎಷ್ಟೋ ಜನರು ಬರುತ್ತಾರೆ. ಹಲವರು ಚಿಗರಿಯ ಬೇಟೆಯ ಸಲುವಾಗಿಯೂ ಬರುವರು. ಮರಡಿಯ ಭೂಮಿ ಇರುವದರಿಂದಲೂ, ಹವೆಯು ಶೀತವೂ ತೇವು ಉಳ್ಳದ್ದಾಗಿಯೂ ಇರುವದರಿಂದಲೂ ಈ ಭಾಗದೊಳಗೆ ಜವೆಗೋದಿ, ಓಟಗಳ ಹೊರತಾಗಿ ಬೇರೆ ಬೆಳೆಗಳು ಬರುವದಿಲ್ಲ. ಈ ಬೆಳೆಗಳು ಸಹ ದರಿಕಂದರುಗಳಲ್ಲಿ ಮಾತ್ರ ಬರುತ್ತವೆ. ಕಲ್ಲಿದ್ದಲಿಯ ಖನಿಗಳಿಲ್ಲದ್ದರಿಂದ ಕಾರಖಾನೆಗಳು ನಡೆಯುವಂತೆ ಇಲ್ಲ. ಅಲ್ಲಲ್ಲಿ ಕಂಡು ಬರುವ

ಹುಲ್ಲುಗಾವಲುಗಳ ಮೇಲೆ ಕುರಿಗಳನ್ನು ಸಾಕುತ್ತಾರೆ, ಮತ್ತು ಕರಾವಳಿಯ ಮೇಲೆ ಮೀನು ಹಿಡಿಯುವ ಉದ್ಯೋಗವು ನಡೆಯುತ್ತದೆ. ಕ್ಯಾಲಿಡೋನಿಯನ್ ಕಾಲುವೆಯಿಂದ ಈ ಗುಡ್ಡಗಾಡು ಪ್ರದೇಶದಲ್ಲಿ ಎರಡು ಭಾಗಗಳಾಗಿರುತ್ತವೆ. ಹೋಗುಬರುವದಕ್ಕೆ ಈ ಕಾಲುವೆಯ ಉಪಯೋಗವು ಹೇಳಿಕೊಳ್ಳುವಷ್ಟು ಆಗುವದಿಲ್ಲ. **ಅಬರ್ಡೀನ** ಎಂಬ ಪಟ್ಟಣವು ಈ ಭಾಗದೊಳಗೆ ಮುಖ್ಯವಾಗಿರುತ್ತದೆ. ಇದರ ಹತ್ತರ ಸಂಗಮರವರೀ ಕಲ್ಲು ವಿಪುಲವಾಗಿ ಸಿಗುತ್ತದೆ. ಪಟ್ಟಣದೊಳಗಿನ ಕಟ್ಟಡಗಳ ಸಲುವಾಗಿ ಬಹಳವಾಗಿ ಈ ಕಲ್ಲನ್ನು ಉಪಯೋಗಿಸುತ್ತಾರೆ. ಮಾರಾಟದ ಸಲುವಾಗಿ ಸಹ ಅದು ತಕ್ಕ ಮಟ್ಟಿಗೆ ಪರದೇಶಗಳಿಗೆ ಹೋಗುತ್ತದೆ. ಮೀನುಗಳನ್ನು ಹಿಡಿದು ಒಣಗಿಸಿ ಅವುಗಳನ್ನು ಪರದೇಶಗಳಿಗೆ ಕಳಿಸುವದು ಇಲ್ಲಿಯ ಮುಖ್ಯವಾದ ಉದ್ಯೋಗವಾಗಿರುತ್ತದೆ.

ಸ್ಕಾಟಲಂಡದ ಉತ್ತರಕ್ಕೆ ಒಂದು ನೂರು ಮೈಲಿನ ಮೇಲೆ ಶೆಟ್‌ಲಂಡದ ನಡುಗಡ್ಡೆಗಳಿರುತ್ತವೆ. ಅಲ್ಲಿಯ ಹುಲ್ಲುಗಾವಲುಗಳ ಮೇಲೆ ತಟ್ಟು ಕುದುರೆಗಳು ಜೀವಿಸುತ್ತವೆ. ಅವು ಗಿಡ್ಡಾಗಿದ್ದರೂ ಕಷ್ಟಸಹಿಸುವ ಗುಣವುಳ್ಳವುಗಳಾಗಿರುತ್ತವೆ. ಓರ್ಕನೀ ಎಂಬ ನಡುಗಡ್ಡೆಯೊಳಗೆ ತಕ್ಕ ಮಟ್ಟಿಗೆ ಧಾನ್ಯವು ಬೆಳೆಯುತ್ತದೆ. ಮತ್ತು ಅಲ್ಲಿ ಮೀನು ಹಿಡಿಯುವ ಉದ್ಯೋಗವು ಸಹ ಸಾಗುತ್ತದೆ. ಸ್ಕಾಟಲಂಡದ ವಾಯುವ್ಯದಲ್ಲಿರುವ ಹೆಬ್ರಿಡೀಜ್ ಎಂಬ ನಡುಗಡ್ಡೆಯೊಳಗಿನ ಭೂಮಿಯು ಬಂಜೆಯಾಗಿರುತ್ತದೆ; ಆದರೆ ಕರಾವಳಿಯ ಮೇಲೆ ಮೀನು ಹಿಡಿಯುವ ಉದ್ಯೋಗವು ವಿಶೇಷವಾಗಿ ನಡೆಯುತ್ತದೆ.

## ಐರ್ಲಂಡ

ಆಕಾರದಿಂದ ಈ ನಡುಗಡ್ಡೆಯು ಸ್ಕಾಟಲಂಡಕ್ಕಿಂತಲೂ ದೊಡ್ಡದಾಗಿದ್ದರೂ ಅದರ ಮಾನದಿಂದ ಅಲ್ಲಿಯ ಜನವಸತಿಯು ಕಡಿಮೆಯಾಗಿರುತ್ತದೆ. ಇಲ್ಲಿಯ ಜನರು ಕೆಲ್ಟಿಕ್ ವಂಶಜರಿರುತ್ತಾರೆ. ಅವರು ರೋಮನ್ ಕಥಾಲಿಕ್‌ರಿದ್ದು ಸ್ವಭಾವದಿಂದ ವಿನೋದಪ್ರಿಯರೂ, ಉಲ್ಲಾಸಿಗಳೂ, ಸ್ವಾತಂತ್ರ್ಯಪ್ರಿಯರೂ ಆಗಿರುತ್ತಾರೆ. ಅವರೊಳಗೆ ಕಲೆಗಳ ಪ್ರೀತಿಯು ವಿಶೇಷವಾಗಿರು


೧೦°
೮°
೬°
ಅಯರ್ಲಂಡ
ಮುಖ್ಯ ಪಟ್ಟಣಗಳು
ಇಂಗ್ಲೀಷ ಮೈಲು
೧ ೫ ೧೦ ೨೦ ೩೦ ೪೦ ೫೦
ಅಟ್ಲಾಂಟಿಕ ಮಹಾಸಾಗರ
ಲಂಡನಡೆರಿ
ಬೆಲ್ಫಾಸ್ಟ
ಮಧ್ಯದ ಬೈಲು
ಐರಿಶ ಸಮುದ್ರ
ಡಬ್ಲಿನ
ಶಾನನನದಿ
ಲಿಮರಿಕ
ಕಾರ್ಕ
ಕ್ವೀನ್ಸಟೌನ
ಗ್ರೀನಿಚದಿಂದ ೮° ಪಶ್ಚಿಮರೇಖಾಂಶ

ತ್ತದೆ. ಉತ್ತರ ಐರ್ಲಂಡದೊಳಗಿನ ಜನರು ಹೆಚ್ಚಾಗಿ ಇಂಗ್ಲೀಷ ಮತ್ತು ಸ್ಕಾಚ್‌ರಿದ್ದು ಅವರು ಪ್ರೊಟೆಸ್ಟಂಟ ಮತದವರಿರುತ್ತಾರೆ. ಈ ದ್ವೀಪದ ಹವೆಯು ಇಂಗ್ಲಂಡಕ್ಕಿಂತ ಹೆಚ್ಚು ವಿಷಮವಾದದ್ದೂ, ಬೆಚ್ಚಗಾದದ್ದೂ ಆಗಿರುತ್ತದೆ. ಹನ್ನೆರಡೂ ತಿಂಗಳು ಮಳೆಯಾಗುವದರಿಂದ ದೇಶದಲ್ಲೆಲ್ಲ ಯಾವಾಗಲೂ ಹಸರು ಮುರಿಯುತ್ತಿರುವ ಹುಲ್ಲುಗದ್ದೆಗಳು ದೃಷ್ಟಿಗೆ ಬೀಳುತ್ತವೆ. ಇದರಿಂದ ಈ ದ್ವೀಪಕ್ಕೆ 'ಪಚ್ಚದ ನಡುಗಡ್ಡೆ' ಎಂದು ಕರೆಯುತ್ತಾರೆ.

ಈ ದ್ವೀಪದೊಳಗೆ 'ಉತ್ತರ ಐರ್ಲಂಡ' ಮತ್ತು 'ಸ್ವತಂತ್ರ ಐರ್ಲಂಡ' ಅಥವಾ 'ಐರಿಶ್ ರಿಪಬ್ಲಿಕ್' ಗಳೆಂಬ ಎರಡು ಭಾಗಗಳನ್ನು ಮಾಡಿರುತ್ತಾರೆ. ಸ್ವತಂತ್ರ ಐರ್ಲಂಡದ ಪಾರ್ಲಿಮೆಂಟವು ಡಬ್ಲಿನ್ ಪಟ್ಟಣದಲ್ಲಿಯೂ, ಉತ್ತರ ಐರ್ಲಂಡದ ಪಾರ್ಲಿಮೆಂಟವು ಬೆಲ್ಫಾಸ್ಟ ಎಂಬಲ್ಲಿಯೂ ಕೂಡುತ್ತದೆ. ಈ ದ್ವೀಪದೊಳಗೆ ಮೂರು ಸ್ವಾಭಾವಿಕ ವಿಭಾಗಗಳಾಗುತ್ತವೆ. ಅವು ಯಾವವೆಂದರೆ (೧) ಉತ್ತರದ ಕಡೆಯ ದಿನ್ನೆಗಳ ಪ್ರದೇಶವು, (೨) ಮಧ್ಯಭಾಗದ ತಗ್ಗು ಬೈಲು ಮತ್ತು (೩) ದಕ್ಷಿಣದ ಕಡೆಯ ದಿನ್ನೆಗಳ ಪ್ರದೇಶವು.

**(೧) ಉತ್ತರದ ಕಡೆಯ ದಿನ್ನೆಗಳ ಪ್ರದೇಶವು :**—ಈ ಭಾಗದೊಳಗೆ ಅಲ್ಲಲ್ಲಿ ಕಡಿದ ಗುಡ್ಡಗಳು ಕಂಡುಬರುತ್ತವೆ. ಈ ಗುಡ್ಡಗಳು ಒಂದಾನೊಂದು ಕಾಲಕ್ಕೆ ಸ್ಕಾಟಲಂಡದ ಗುಡ್ಡೆಗಳಿಗೆ ಹೊಂದಿಕೊಂಡಿರಬೇಕೆಂದು ಅನಿಸುತ್ತದೆ. ಈ ಭಾಗದೊಳಗೆ ಮಳೆಯು ತುಸುಮಟ್ಟಿಗೆ ಆಗುವದರಿಂದ ಇಲ್ಲಿ ಓಟ, ಜವೆಗೋದಿ ಮತ್ತು ಬಟಾಟೆಗಳು ಬೆಳೆಯುತ್ತವೆ. ಪುಂಡಿಯ ಪೀಕಾದರೂ ಚೆನ್ನಾಗಿ ಬರುತ್ತದೆ. ಇದರ ನಾರಿನಿಂದ ಲಿನನ್ ಎಂಬ ಗಟ್ಟಿಮುಟ್ಟಾದ ಅರಿವೆಯನ್ನು ತಯಾರಿಸುತ್ತಾರೆ. ಮತ್ತು ಬೀಜಗಳಿಂದ ಎಣ್ಣೆಯನ್ನು ತೆಗೆಯುತ್ತಾರೆ. ಇಳುಕಲಿನ ಮೇಲೆ ದನ, ಕುರಿ, ಹಂದಿಗಳನ್ನು ಸಾಕುತ್ತಾರೆ. ಕರಾವಳಿಯ ಮೇಲೆ ಮೀನು ಹಿಡಿಯುವ ಉದ್ಯೋಗವು ನಡೆಯುತ್ತದೆ. ಕಲ್ಲಿದ್ದಲಿಯು ಇಲ್ಲಿ ಸಿಗುವದಿಲ್ಲ. ಆದ್ದರಿಂದ ಇಲ್ಲಿಯ ಕಾರಖಾನೆಗಳ ಸಲುವಾಗಿ ಬೇಕಾಗುವ ಇದ್ದಲಿಯನ್ನು ಇಂಗ್ಲಂಡ ಮತ್ತು ಸ್ಕಾಟಲಂಡಗಳಿಂದ ತರಿಸಬೇಕಾಗುತ್ತದೆ.

**ಬೆಲಫಾಸ್ಟ :**—ಇದು ಮುಖ್ಯ ಪಟ್ಟಣವೂ ಬಂದರದ ಸ್ಥಳವೂ ಆಗಿರುತ್ತದೆ. ಇಲ್ಲಿ ಹಡಗುಗಳನ್ನು ಕಟ್ಟುತ್ತಾರೆ. ಮತ್ತು ಲಿನನ್ (ನಾರು)ದ ಬಟ್ಟೆಗಳನ್ನೂ ರಸಾಯನಿಕ ದ್ರವ್ಯಗಳನ್ನೂ ತಯಾರಿಸುತ್ತಾರೆ. **ಲಂಡನ್ ಡೆರೀ** ಎಂಬಲ್ಲಿ ಸಹ ಹಡಗುಗಳನ್ನು ಕಟ್ಟುವ ಕಾರಖಾನೆಗಳೂ ಅರಿವೆಯ ಗಿರಣಿಗಳೂ ಇರುತ್ತವೆ.

**(೨) ಮಧ್ಯಭಾಗದ ತಗ್ಗು ಬೈಲು :**—ಈ ಭಾಗವು ಬಶಿಯಂತೆ ನಟ್ಟನಡುವೆ ತಗ್ಗಾಗಿರುತ್ತದೆ. ಇಲ್ಲಿ ಮಳೆಯು ವಿಪುಲವಾಗಿ ಬೀಳುತ್ತದೆ. ಆದರೆ ನೀರು ಹರಿದು ಹೋಗದೆ ಇರುವದರಿಂದ ಅಲ್ಲಲ್ಲಿ ಕೆರೆಗಳೂ, ಜವುಳು ಗಳೂ ಕಂಡು ಬರುತ್ತವೆ. ಈ ಜವುಳು ಪ್ರದೇಶಗಳಲ್ಲಿ ಎಷ್ಟೋ ವರುಷಗಳವರೆಗೆ ಗಿಡಗಂಟೆಗಳೂ ಹುಲ್ಲೂ ಬೆಳೆದು ಅವು ನೆಲದೊಳಗೆ ಹೂಳಲ್ಪಟ್ಟವು. ಮತ್ತು ಅವುಗಳ ತರಗಳು ಮೇಲಿನ ಒತ್ತುವಿಕೆಯಿಂದ ಒಂದರೊಳಗೊಂದು ಬೆರೆತು ಒಂದಾದವು. ಇಂಥ ತರಗಳಿಗೆ ಪೀಟ ಎಂದೆನ್ನುತ್ತಾರೆ. ಈ ಪೀಟದಿಂದ ಇಟ್ಟಂಗಿಗಳ ಹಾಗೆ ತುಣುಕುಗಳನ್ನು ಮಾಡಿ, ಒಣಗಿಸಿ ಅವುಗಳನ್ನು ಉರು ವಲದಂತೆ ಉಪಯೋಗಿಸುತ್ತಾರೆ.

ಈ ಪ್ರದೇಶವು ತೇವು ಉಳ್ಳಾಗಿರುವದರಿಂದ ಇಲ್ಲಿ ಗೋದಿಯು ಬೆಳೆ ಯುವುದಿಲ್ಲ. ಕೇವಲ ಬಟಾಟೆ, ಜವೆಗೋದಿ, ಓಟ, ಮತ್ತು ಗಜ್ಜರಿ ಬೆಳೆಯುತ್ತವೆ. ಮೇಲಾದ ಹುಲ್ಲು ಎಲ್ಲ ಕಡೆಯಲ್ಲಿಯೂ ಬೆಳೆಯುತ್ತದೆ. ಒಕ್ಕಲಿಗನು ಅದರ ಮೇಲೆ ದನಗಳನ್ನೂ ಹಂದಿಗಳನ್ನೂ ಅದರಂತೆ ಕೋಳಿ ಬಾತುಕೋಳಿಗಳನ್ನೂ ಸಾಕುತ್ತಾನೆ. ಇಲ್ಲಿಂದ ಮಾಂಸ, ತತ್ತಿ ಮುಂತಾದ ಪದಾರ್ಥಗಳು ಇಂಗ್ಲಂಡಕ್ಕೆ ಕಳಿಸಲ್ಪಡುತ್ತವೆ.

ಈ ಪ್ರದೇಶದೊಳಗೆ ಕಲ್ಲಿದ್ದಲಿಯು ಸಿಗುವದಿಲ್ಲವಾದ್ದರಿಂದ, ಕಾರಖಾನೆ ಗಳ ಪಟ್ಟಣಗಳು ಇಲ್ಲಿ ಇರುವದಿಲ್ಲ. ಯಾವತ್ತೂ ಜನವಸತಿಯು ಹಳ್ಳಿ ಗಳಲ್ಲಿ ಕಂಡು ಬರುತ್ತದೆ, **ಡಬ್ಲಿನ್** ಎಂಬದು ಸ್ವತಂತ್ರ ಐರ್ಲಂಡದ ರಾಜಧಾನಿಯಾಗಿದ್ದು, ಅದು ಇಂಗ್ಲಂಡಕ್ಕೆ ತೀರ ಸಮೀಪದ ಬಂದರವಾಗಿ ರುತ್ತದೆ. ಮಧ್ಯಪ್ರದೇಶದೊಳಗಿಂದ ಹೊರಗೆ ಹೋಗುವ ಸರಕುಗಳು ಇದೇ ಬಂದರದಿಂದ ಹೋಗುತ್ತವೆ. ಇದು ರೇಲುಮಾರ್ಗ, ಕಾಲುವೆಗಳ ಮಾರ್ಗ ಮತ್ತು ಲೈನುದಾರಿಗಳ ಕೇಂದ್ರವಾಗಿರುತ್ತದೆ. ಸರಾಯಿಯನ್ನು

ತಯಾರಿಸುವ ದೊಡ್ಡ ದೊಡ್ಡ ಕಾರಖಾನೆಗಳು ಇಲ್ಲಿ ಇರುತ್ತವೆ. ಪಶ್ಚಿಮ ವಾಹಿನಿಯಾದ **ಶಾನನ್** ಎಂಬ ಹೊಳೆಯು ದಂಡೆಯು ಮೇಲೆ **ಲಿಮರಿಕ್** ಎಂಬ ಪಟ್ಟಣವಿದ್ದು, ಅಲ್ಲಿಂದ ಪಶ್ಚಿಮ ಭಾಗದೊಳಗಿನ ಸರಕು ಹೊರಗೆ ಕಳಿಸಲ್ಪಡುತ್ತದೆ. ಐರ್ಲಂಡದ ಪಶ್ಚಿಮದ ಕರಾವಳಿಯು ತೀರ ಗುಡ್ಡ ಗಾಡು ಇರುವದರಿಂದ ಅಲ್ಲಿ ಬಂದರಗಳಿರುವದಿಲ್ಲ. ಮತ್ತು ಅಲ್ಲಿ ಹೇಳಿ ಕೊಳ್ಳುವ ಹಾಗೆ ಮೀನು ಹಿಡಿಯುವ ಉದ್ಯೋಗವು ಸಾಗುವದಿಲ್ಲ.

**(೩) ದಕ್ಷಿಣದ ಕಡೆಯು ದಿನ್ನೆಗಳ ಪ್ರದೇಶವು :—**ಉತ್ತರದ ಭಾಗದಂತೆ ಇದಾದರೂ ಕಡಿದ ಗುಡ್ಡಗಳಿಂದ ತುಂಬಿಹೋಗಿರುತ್ತದೆ. ಪಶ್ಚಿಮದ ಕಡೆಯಿಂದ ಬೀಸುವ ಕಸುವಿನ ಗಾಳಿಗಳಿಂದ ಈ ಭಾಗದ ಪಶ್ಚಿಮ ದಂಡೆಯು ಬಹಳವಾಗಿ ಒಡಕಾಗಿರುತ್ತದೆ, ಆದರೆ ಅಲ್ಲಿಯ ಸೃಷ್ಟಿಸೌಂದರ್ಯ ವನ್ನು ನೋಡಲಿಕ್ಕೆ ಬಹಳ ಜನರು ಬರುತ್ತಾರೆ. ಅದರೊಳಗಿನ ಕಿಲಾರ್ನಿ ಎಂಬ ಸರೋವರವು ಪ್ರಸಿದ್ಧವಾಗಿರುವದು. ಈ ಪ್ರದೇಶದೊಳಗೆ ಯಾವ ಬೆಳೆಯೂ ಬರುವದಿಲ್ಲ; ಆದರೆ ದನಗಳನ್ನೂ ಹಂದಿಗಳನ್ನೂ ಕೋಳಿ—ಬಾತುಕೋಳಿಗಳನ್ನೂ ಹೆಚ್ಚಾಗಿ ಸಾಕುತ್ತಾರೆ. **ಕಾರ್ಕ** ಎಂಬ ಬಂದರವು ಈ ಭಾಗದೊಳಗೆ ಪ್ರಸಿದ್ಧವಾಗಿರುತ್ತದೆ. ಇಂಗ್ಲಂಡದೊಳಗೆ ಪ್ರತಿ ದಿವಸ ಮಾರಾಟವಾಗುವ ಪದಾರ್ಥಗಳನ್ನು ತೆಗೆದುಕೊಂಡು ಹೋಗುವ ಹಡಗುಗಳು **ಕ್ವೀನ್ಸಟಾವುನ** ಎಂಬ ಬಂದರಕ್ಕೆ ತಲಪುವವು.

ಐರ್ಲಂಡದೊಳಗಿನ ಜನಸಂಖ್ಯೆಯ ಮಾನದಿಂದ ಆ ದೇಶದೊಳಗೆ ಉದ್ಯೋಗ ವ್ಯವಸಾಯಗಳೂ, ಕಾರಖಾನೆಗಳೂ ತುಸು ಇರುತ್ತವೆ. ಆದ್ದರಿಂದ ದೇಶದೊಳಗೆ ಬಡತನವು ಬಹಳವಾಗಿ ಇರುತ್ತದೆ. ಮತ್ತು ಎಷ್ಟೋ ಜನರಿಗೆ ಹೊರಗೆ ಹೋಗಿ ತಮ್ಮ ಹೊಟ್ಟೆ ತುಂಬಿಕೊಳ್ಳಬೇಕಾಗುತ್ತದೆ. ಆ ಜನರು ಇಂಗ್ಲಂಡ ಮತ್ತು ಸ್ಕಾಟಲಂಡದೊಳಗಿನ ಖಣಿಗಳಲ್ಲಿ ದುಡಿಯಲಿಕ್ಕೂ, ಪೋಲೀಸ ಖಾತೆಯೊಳಗೂ ದಂಡಿನೊಳಗೂ ಕೆಲಸಕ್ಕೆ ಹೋಗುತ್ತಾರೆ. ಪ್ರತಿ ವರುಷ ಸಾವಿರಾರು ಜನರು ಅಮೇರಿಕೆಯಲ್ಲಿ ನೆಲಿಸಲಿಕ್ಕೆಂದು ಹೋಗುತ್ತಿರುತ್ತಾರೆ.

**ಬ್ರಿಟಿಶ ನಡುಗಡ್ಡೆಗಳ ಸಾಗಾಟ:—**ಬ್ರಿಟಿಶ ನಡುಗಡ್ಡೆಗಳಲ್ಲಿ ವ್ಯಾಪಾರಕ್ಕೆ ಅನುವಾಗಬೇಕೆಂದು ಕಾಲುವೆಗಳಿಂದ ಹೊಳೆಗಳನ್ನು ಒಂದಕ್ಕೊಂದು

ಜೋಡಿಸಿ ಜಲಮಾರ್ಗಗಳನ್ನು ತಯಾರಿಸಿರುತ್ತಾರೆ. ಆದರೂ ರೇಲುಮಾ ರ್ಗಗಳೇ ಬಹಳ ಮಹತ್ವವಾದ ಮಾರ್ಗಗಳು. ಈ ಮಾರ್ಗಗಳ ಉದ್ದಳ ತೆಯು ೨೦ ಸಾವಿರ ಮೈಲಿಗಿಂತ ಹೆಚ್ಚಾಗಿರುವದು. ಲಂಡನ್, ಎಡಿನ್ ಬರೋ, ಲೀಡ್ಸ ಮುಂತಾದ ಪಟ್ಟಣಗಳು ರೇಲುದಾರಿಗಳ ಕೇಂದ್ರಗಳಾಗಿರು ತ್ತವೆ. ಕರಾವಳಿಯ ಮೇಲಿನ ಯಾವತ್ತೂ ಬಂದರಗಳು ರೇಲಿನಿಂದ ಈ ಭಾಗಗಳಿಗೆ ಜೋಡಿಸಲ್ಪಟ್ಟಿರುತ್ತವೆ. ಇದಲ್ಲದೆ ಹಳ್ಳಿಪಳ್ಳಿಗಳಲ್ಲಿ ಸಹ ಮೇಲಾದ ಲೈನು ದಾರಿಗಳಿರುವದರಿಂದ, ಮೋಟಾರುಗಳ ಓಡಾಟವಾದರೂ ಸಾಕಷ್ಟು ಇರುತ್ತದೆ. ಇತ್ತಲಾಗಿ ಮುಖ್ಯವಾದ ಪಟ್ಟಣಗಳನ್ನು ಜೋಡಿ ಸುವ ವಿಮಾನಮಾರ್ಗಗಳು ಸಹ ಆರಂಭವಾಗಿರುತ್ತವೆ. ಇದರಿಂದ ಜನ ರಿಗೆ ಬಹು ತೀವ್ರವಾಗಿ ಪ್ರವಾಸ ಮಾಡಲಿಕ್ಕೆ ಅನುಕೂಲವಾಗಿರುತ್ತದೆ.

೪ ನೇ ಪ್ರಕರಣ

# ಬ್ರಿಟಿಶ ನಡುಗಡ್ಡೆಗಳ ವ್ಯಾಪಾರವು

ಇಂಗ್ಲಂಡದೊಳಗೆ ೧೮ನೇ ಶತಮಾನದ ಮಧ್ಯದಲ್ಲಿ ವ್ಯಾಪಾರದಲ್ಲಿ ಕ್ರಾಂತಿಯಾಯಿತು. ಇದಕ್ಕೂ ಮುಂಚೆ ಇಂಗ್ಲಂಡ ದೇಶವು ಕೃಷಿಪ್ರಧಾನ ವಾಗಿತ್ತು. ಮತ್ತು ಆಗ ಇಂಗ್ಲಂಡದ ಆಗ್ನೇಯ ಭಾಗವು ಬೆಳೆಯುಳ್ಳದ್ದಿರು ವದರಿಂದ ಅಲ್ಲಿ ಜನವಸತಿಯಾದರೂ ದಟ್ಟಾಗಿತ್ತು. ಇದಲ್ಲದೆ ಆಗ ಇಂಗ್ಲಂ ಡದ ವ್ಯಾಪಾರವು ಯುರೋಪ ಖಂಡದೊಳಗಷ್ಟೇ ಸಾಗುತ್ತಿತ್ತು; ಮತ್ತು ಈ ಭಾಗವು ಯುರೋಪ ಖಂಡಕ್ಕೆ ಸಮೀಪವಿರುವದರಿಂದ ಅದಕ್ಕೆ ಒಂದು ತರದ ಮಹತ್ವವು ಬಂದಿತ್ತು. ಕಲ್ಲಿದ್ದಲಿ ಮತ್ತು ಕಬ್ಬಿಣಗಳು ಈ ದೇಶದ ಔದ್ಯೋಗಿಕ ಕ್ಷೇತ್ರದಲ್ಲಿ ಕ್ರಾಂತಿಯನ್ನುಂಟುಮಾಡಿದವು. ಇವುಗಳ ಮೂಲಕ ಕಾರಖಾನೆಗಳು ಸ್ಥಾಪಿಸಲ್ಪಡಲಾರಂಭಿಸಿದವು. ಮತ್ತು ಎಷ್ಟೋ ಜನರು ತಮ್ಮ ಮನೆಮಾರುಗಳನ್ನು ಬಿಟ್ಟು ಕಾರಖಾನೆಗಳಲ್ಲಿ ದುಡಿಯಲಿಕ್ಕೆಂದು ಕಾರಖಾನೆಗಳಿದ್ದ ಪಟ್ಟಣಗಳಿಗೆ ಹೋಗಲಾರಂಭಿಸಿದರು. ಹೊಸ ಹೊಸ ಪಟ್ಟಣಗಳು ನಿರ್ಮಾಣವಾಗಹತ್ತಿದವು; ಮತ್ತು ಒಕ್ಕಲತನದ ಮಹತ್ವವು ಕ್ರಮೇಣ ಕುಗ್ಗುತ್ತ ನಡೆಯಿತು. ಜನವಸತಿಯು ಬದಲಾಗಲಾರಂಭಿಸಿತು. ಪಶ್ಚಿಮದ ಕಡೆಗಿರುವ ಅಮೇರಿಕಾ ಖಂಡವು ಊರ್ಜಿತಾವಸ್ಥೆಗೆ ಬರಲಾರಂಭಿ ಸಿದ್ದರಿಂದ, ಇಂಗ್ಲಂಡದ ಆಗ್ನೇಯ ಭಾಗದೊಳಗಿನ ವ್ಯಾಪಾರವು ಕಡಿಮೆ ಯಾಗತೊಡಗಿತು, ಮತ್ತು ಅದು ಪಶ್ಚಿಮ ವಾಯುವ್ಯದ ಕರಾವಳಿಯ ಕಡೆಗೆ ಬೆಳೆಯ ಹತ್ತಿತು. ಸದ್ಯಕ್ಕೆ ಇಂಗ್ಲಂಡದೊಳಗೆ ಕಲ್ಲಿದ್ದಲಿ-ಕಬ್ಬಿಣಗಳ ಖಣಿ ಗಳ ಸುತ್ತಲೂ ಜನವಸತಿಯು ದಟ್ಟವಾಗಿರುತ್ತದೆ. ಕುರಿಗಳನ್ನು ಸಾಕುವ ಪ್ರಾಚೀನ ಕಾಲದ ವ್ಯವಸಾಯದಿಂದ ಅನೇಕರಿಗೆ ದುಡಿತ ಸಿಗುವದು ದುರ್ಲ ಭವಾಗಿರುತ್ತದೆ. ಒಕ್ಕಲತನವು ಎಷ್ಟೋ ಜನರಿಗೆ ಕೆಲಸವನ್ನು ಕೊಡು ವದು ನಿಜವಾದರೂ, ಕಾರಖಾನೆಗಳಲ್ಲಿ ಅನೇಕ ಜನ ಕೂಲಿಕಾರರೂ ಆಯಾ ಕೆಲಸವನ್ನು ಬಲ್ಲವರೂ ಬೇಕಾಗಿರುವದರಿಂದ ಎಲ್ಲಿ ಕಾರಖಾನೆಗಳು ಸುರು ವಾಗುವವೋ ಅಲ್ಲಿ ಜನವಸತಿಯು ಹೆಚ್ಚು ದಟ್ಟಾಗುತ್ತದೆ. ಈ ಕಾರಣ

ದಿಂದ ವೇಲ್ಸದೊಳಗಿನ ಗುಡ್ಡಗಾಡು ಪ್ರದೇಶ, ಸ್ಕಾಟಲಂಡದೊಳಗಿನ ಹಾಯ ಲಂಡ್ಸ ಮತ್ತು ದಕ್ಷಿಣದ ತಪ್ಪಲು (ಇಲ್ಲಿಯ ಜನರ ಮುಖ್ಯ ಉದ್ಯೋಗವು ಕುರಿಗಳನ್ನು ಸಾಕುವದು ಆಗಿರುತ್ತದೆ) ಗಳಲ್ಲಿಯ ಜನವಸತಿಯು ವಿರಲವಾ ಗಿರುತ್ತದೆ. ಯಾರ್ಕದೊಳಗೂ, ಆಗ್ನೇಯದ ಕಡೆಗಿರುವ ಬೆಳೆಯುಳ್ಳ ಪ್ರದೇಶದಲ್ಲಿಯೂ ಜನವಸತಿಯು ಸಾಧಾರಣ ದಟ್ಟಾಗಿದ್ದು ಲಂಕಶಾಯರ, ಪೆನಾಯಿನದ ಹತ್ತರಿರುವ ಯಾರ್ಕಶಾಯರದ ಗುಡ್ಡಗಾಡು ಪ್ರದೇಶ ಅಥವಾ 'ಕಪ್ಪುಪ್ರದೇಶ'ದೊಳಗೆ ಜನವಸತಿಯು ಬಹಳ ದಟ್ಟಾಗಿರುತ್ತದೆ.

ಪರದೇಶಗಳ ಸಂಗಡ ನಡೆಯುವ ಇಂಗ್ಲಂಡದ ವ್ಯಾಪಾರವು ಬಹಳ ದೊಡ್ಡದಾಗಿರುತ್ತದೆ. ಬರುವ ಸರಕುಗಳಲ್ಲಿ (ಆಮದು) ಕಾರಖಾನೆಗಳಿಗೆ ಬೇಕಾಗುವ ಕಚ್ಚಾ ಮಾಲು, ಖಾದ್ಯ ಮತ್ತು ಪೇಯ ಪದಾರ್ಥಗಳು ಮುಖ್ಯ ವಾಗಿರುತ್ತವೆ. ಇಂಗ್ಲಿಷ ಜನರ ಮುಖ್ಯ ಆಹಾರವು ಗೋದಿಯಾಗಿರುತ್ತದೆ. ಇಂಗ್ಲಂಡದೊಳಗೆ ಬೆಳೆಯುವ ಗೋದಿಯು ಅಲ್ಲಿ ಬೆಳೆಯುತ್ತಿರುವ ಜನರ ಸಂಖ್ಯೆಗೆ ಸಾಕಾಗುವಷ್ಟು ಇಲ್ಲದ್ದರಿಂದ, ಪರದೇಶಗಳಿಂದ ಗೋದಿಯನ್ನು ಆಮದು ಮಾಡಬೇಕಾಗುತ್ತದೆ. ಅದರಂತೆ ಜವೆಗೋದಿ (ಬಾರ್ಲಿ) ಮಾಂಸ, ಹೈನು, ಹಣ್ಣು, ಪೇಯಪದಾರ್ಥ, ಕಾಯಿಪಲ್ಯ ಮುಂತಾದ ಪದಾರ್ಥಗಳ ನ್ನಾದರೂ ಹೊರಗಿನಿಂದಲೇ ತರಬೇಕಾಗುತ್ತದೆ. ಕಾರಖಾನೆಗಳಿಗೆ ಬೇಕಾ ಗುವ ಕಚ್ಚಾಮಾಲು ಬಹುತರವಾಗಿ ಉಷ್ಣಕಟಿಬಂಧದೊಳಗೆ ಸಿಗುತ್ತವೆ. ಸಮಶೀತೋಷ್ಣಕಟಿಬಂಧದೊಳಗಿರುವ ಇಂಗ್ಲಂಡ ದೇಶಕ್ಕೆ ಈ ಸರಕುಗಳನ್ನು ಹೊರಗಿನಿಂದಲೇ ತರಬೇಕಾಗುವದು. ಆದ್ದರಿಂದ ಹತ್ತಿ, ಉಣ್ಣೆ, ರಬ್ಬರು, ಕಬ್ಬಿಣ, ಸಣಬು, ಎಣ್ಣೆ, ಎಣ್ಣೀಕಾಳುಗಳು, ಕಟ್ಟಿಗೆ ಮುಂತಾದ ಪದಾರ್ಥ ಗಳು ಹೊರಗಿನಿಂದಲೇ ಬರುತ್ತವೆ. ಆಮದು ಆಗುವ ಸರಕುಗಳಲ್ಲಿ ಗೋದಿ, ಸಕ್ಕರೆ, ಚಹ, ಕಾಫೀ, ಕೋಕೋ, ಬೆಣ್ಣೆ, ತತ್ತಿ, ಮಾಂಸ, ಹಣ್ಣು, ತಂಬಾಕು, ಸರಾಯಿ ಮುಂತಾದ ತಿನ್ನುಣ್ಣುವ ಪದಾರ್ಥಗಳೂ, ಹತ್ತಿ, ಉಣ್ಣೆ, ರಬ್ಬರು, ಕಬ್ಬಿಣ, ಶೇಂಗಬೀಜ, ಪೆಟ್ರೋಲ, ಕಟ್ಟಿಗೆ ಮುಂತಾದ ಪದಾರ್ಥಗಳೂ ಮುಖ್ಯವಾಗಿರುತ್ತವೆ. ಈ ಪದಾರ್ಥಗಳು ಯಾವ ಯಾವ ದೇಶಗಳಿಂದ ಬರುತ್ತವೆಂಬುದು ಮುಂದೆ ಕೊಟ್ಟಿರುವ ಕೋಷ್ಟಕದಿಂದ ನೋಡಬಹುದು. ಬ್ರಿಟಿಶ ನಡುಗಡ್ಡೆಗಳಿಗೆ ಹೊರಗಿನಿಂದ ಬರುವ ಸರಕು ಮುಖ್ಯವಾಗಿ ಬ್ರಿಟಿಶರ ಅಧೀನದಲ್ಲಿದ್ದ ಪ್ರದೇಶಗಳಿಂದ ಮತ್ತು ಬ್ರಿಟಿಶ

ಜನರು ವಸತಿ ಮಾಡಿಕೊಂಡಿರುವಂಥ ಪ್ರದೇಶಗಳಿಂದಲೇ ಬರುತ್ತದೆ ಎಂಬುದನ್ನು ನೋಡಬಹುದು. ಬ್ರಿಟಿಶ ನಡುಗಡ್ಡೆಗೆ ೧೯೫೦ನೇ ಇಸವಿಯಲ್ಲಿ ಒಟ್ಟು ೨೫೦ ಕೋಟಿ ಪೌಂಡು ಕಿಮ್ಮತ್ತಿನ ಸರಕನ್ನು ಆಯಾತು ಮಾಡಿದ್ದಾರೆ. ಅದರಲ್ಲಿ ಅನ್ನಧಾನ್ಯ, ಪೇಯಪದಾರ್ಥ, ತಂಬಾಕ ಮುಂತಾದ ಸರಕುಗಳನ್ನು ೧೦೨ ಕೋಟಿ ಪೌಂಡು, ಬೇರೆಬೇರೆ ತರಹದ ಕಾರಖಾನೆಗಳಿಗೆಬೇಕಾಗುವ ಕಚ್ಚಾ ಮಾಲು ೧೦೦ ಕೋಟಿ ಪೌಂಡು, ಇದಲ್ಲದೆ ಬೇರೆ ತಯಾರೀ ಮಾಲು ೫೮ ಕೋಟಿ ಪೌಂಡು, ಕಿಮ್ಮತ್ತಿನದಾಗಿರುತ್ತವೆ. ಈ ಪ್ರದೇಶವು ಅನ್ನ ಧಾನ್ಯ ಪದಾರ್ಥಗಳ ಆಯಾತಕ್ಕೆ ಎರಡನೇ ದೇಶಗಳನ್ನವಲಂಬಿಸಿ ಹೇಗೆ ಇರುತ್ತದೆಂಬುದನ್ನು ಮೇಲೆ ಕೊಟ್ಟಿರುವ ಅಂಕಿ ಸಂಖ್ಯೆಗಳಿಂದ ಸ್ಪಷ್ಟವಾಗುತ್ತದೆ.

**ಕೆಳಗೆ ಕೊಟ್ಟ ಮಾಹಿತಿಯು ಸನ್ ೧೯೫೦ ನೇ ಇಸವಿಯಲ್ಲಿ ಬ್ರಿಟಿಶ ನಡುಗಡ್ಡೆಗಳ ವ್ಯಾಪಾರದ ಪಟ್ಟಿ ಇರುತ್ತದೆ.**

ಪರದೇಶಗಳಿಂದ ಬ್ರಿಟಿಶ ನಡುಗಡ್ಡೆ (ಯು. ಕೆ.) ಗೆ ಬರುವ

**ಸರಕುಗಳು.**

| ಸರಕಿನ ಹೆಸರು. | ಯಾವ ದೇಶದಿಂದ ಆಯಾತವಾಗುವದೋ ಆ ದೇಶದ ಹೆಸರು. |
|---|---|
| ಮುಖ್ಯ ಅನ್ನ ಪದಾರ್ಥ .... | ಕಾನಡಾ, ಯು. ಎಸ್. ಎ. (ಅಮೇರಿಕಾ) ಆಸ್ಟ್ರೇಲಿಯಾ ಮತ್ತು ಫ್ರಾನ್ಸ. |
| ಜವೆಗೋದಿ (ಬಾರ್ಲಿ) .... | ಸೋವ್ಹಿಯಟ ಸಂಘ (ರಶಿಯಾ), ಇರಾಕ, ಆಸ್ಟ್ರೇಲಿಯಾ, ಮೋರೋಕ್ಕೊ. |
| ಮಾಂಸ (ಅನೇಕ ಪ್ರಕಾರದ್ದು).... | ಆರ್ಜೆಂಟಿನಾ, ಯುರುಗ್ವೆ, ನ್ಯೂಝೀಲಂಡ, ಕಾನಡಾ, ಡೆನ್ಮಾರ್ಕ, ಹಾಲಂಡ, ಆಸ್ಟ್ರೇಲಿಯಾ ಮತ್ತು ಪೋಲಂಡ. |

| ಸರಕಿನ ಹೆಸರು. | ಯಾವ ದೇಶದಿಂದ ಆಯಾತವಾಗುವದೋ ಆ ದೇಶದ ಹೆಸರು. |
|---|---|
| ಹಾಲಿನ ಪದಾರ್ಥ .... | ಆಸ್ಟ್ರೇಲಿಯಾ, ನ್ಯೂಝೀಲಂಡ, ಡೆನ್ಮಾರ್ಕ, ಹಾಲಂಡ, ಕಾನಡಾ, ಐರಿಶ್ ರಿಪಬ್ಲಿಕ್, ಇಟಲೀ, ಮತ್ತು ಯು. ಎಸ್. ಎ. ( ಅಮೇರಿಕಾ ). |
| ತತ್ತಿ ವಗೈರೆ ಪದಾರ್ಥ .... | ಆಸ್ಟ್ರೇಲಿಯಾ, ಡೆನ್ಮಾರ್ಕ, ಐರಿಶ್ ರಿಪಬ್ಲಿಕ್, ಪೋಲಂಡ ಮತ್ತು ಯು. ಎಸ್. ಎ. |
| ಹಣ್ಣಿನ ಪದಾರ್ಥ .... | ಆಸ್ಟ್ರೇಲಿಯಾ, ಕಾನಡಾ, ನ್ಯೂಝೀಲಂಡ, ನಾಯಜೀರಿಯಾ, ವೆಸ್ಟ ಇಂಡೀಜ ನಡುಗಡ್ಡೆ, ಸ್ಪೇನ, ಇಸ್ರಾಯಿಲ್, ಬ್ರಾಝೀಲ, ದಕ್ಷಿಣ ಆಫ್ರಿಕ-ಸಂಘ, ಇಟಲೀ, ಹಾಲಂಡ. |
| ಕಾಯಿಪಲ್ಲೆ .... | ಹಾಲಂಡ, ಕನೇರೀ ನಡುಗಡ್ಡೆ. |
| ಸಕ್ಕರೆ .... | ಕ್ಯೂಬಾ, ಜಮೇಕಾ, ಮಾರೀಶಸ್, ಮತ್ತು ಆಸ್ಟ್ರೇಲಿಯಾ. |

## ಮುಖ್ಯ ಪೇಯ ಪದಾರ್ಥಗಳು

| | |
|---|---|
| ಚಹಾ .... | ಭಾರತ, ಸಿಲೋನ, ಪಾಕಿಸ್ತಾನ, ಕೆನಿಯಾ ಮತ್ತು ಚೀನ. |
| ಕಾಫೀ .... | ಬ್ರಾಝೀಲ, ಬ್ರಿಟಿಶ—ಪೂರ್ವ ಆಫ್ರಿಕಾ, ಬೆಲ್ಜಿಯಮ್, ಕಾಂಗ್ಕೊ. |

| ಸರಕಿನ ಹೆಸರು. | ಯಾವ ದೇಶದಿಂದ ಆಯಾತವಾಗುವದೋ ಆ ದೇಶದ ಹೆಸರು. |
| --- | --- |
| ಕೋಕೋ .... | ಬ್ರಿಟಿಶ ಪಶ್ಚಿಮ ಆಫ್ರಿಕಾ, ಬ್ರಾಝೀಲ. |
| ಶಿರೆ .... | ಪೋರ್ತುಗಾಲ, ಫ್ರಾನ್ಸ, ಸ್ಪೇನ, ಬ್ರಿಟಿಶ ಗಿಯಾನಾ. |
| ತಂಬಾಕ .... | ಯು.ಎಸ್.ಎ., ದಕ್ಷಿಣ ಹ್ರೋಡೇಶಿಯಾ, ಕೆನಡಾ, ಭಾರತ, ತುರ್ಕಸ್ತಾನ. |

## ಮಹತ್ವದ ಕಚ್ಚಾ ಸರಕುಗಳು

| | |
| --- | --- |
| ಹತ್ತಿ .... | ಯು. ಎಸ್. ಎ., ಇಜಿಪ್ತ, ಬ್ರಾಝೀಲ, ಪೇರು, ಸುಡಾನ, ಪಾಕಿಸ್ತಾನ, ಭಾರತ. |
| ಉಣ್ಣೆ .... | ಆಸ್ಟ್ರೇಲಿಯಾ, ನ್ಯೂಝೀಲಂಡ, ದಕ್ಷಿಣ ಆಫ್ರಿಕಾ ಸಂಘ, ಫ್ರಾನ್ಸ, ಚಿಲೀ, ಪಾಕಿಸ್ತಾನ, ಭಾರತ. |
| ರಬ್ಬರು .... | ಮಲಯಾ, ಇಂಡೋನೇಶಿಯಾ, ಬ್ರಹ್ಮದೇಶ, ಸಿಲೋನ, ಬ್ರಿಟಿಶ ಪಶ್ಚಿಮ ಆಫ್ರಿಕಾ. |
| ಸಣಬು .... | ಅರ್ಜೆಂಟಿನಾ, ಬ್ರಾಝೀಲ, ಯುರುಗ್ವೆ, ನ್ಯೂಝೀಲಂಡ, ಆಸ್ಟ್ರೇಲಿಯಾ, ದಕ್ಷಿಣ ಆಫ್ರಿಕಾ ಸಂಘ, ಪಾಕಿಸ್ತಾನ, ಭಾರತ. |

| ಸರಕಿನ ಹೆಸರು. | ಯಾವ ದೇಶದಿಂದ ಆಯಾತವಾಗುವದೋ ಆ ದೇಶದ ಹೆಸರು. |
|---|---|
| ಎಣ್ಣೆಕಾಳು .... | ಪಾಪುಆ, ಬ್ರಿಟಿಶ ಪಶ್ಚಿಮ ಆಫ್ರಿಕಾ, ಭಾರತ. |
| ಕಲ್ಲೆಣ್ಣೆ ಮತ್ತು ಪೆಟ್ರೋಲ .... | ಬೆಯಿರಿನ ನಡುಗಡ್ಡೆಗಳು, ಇರಾಣ, ಇರಾಕ, ಸೌಥ ಅರೇಬಿಯಾ, ವ್ಹೆನಿಜ್ಯೂಎಲಾ, ಪೇರೂ, ಯು. ಎಸ್. ಎ. |
| ಕಬ್ಬಿಣ .... | ಸ್ವೀಡನ್, ಜರ್ಮನೀ, ಹಾಲಂಡ, ಫ್ರಾನ್ಸ. |
| ಮೆಂಗನೀಜ .... | ಗೋಲ್ಡ ಕೋಷ್ಟ, ಭಾರತ, ಸೋವ್ಹಿಯಟ್ ಸಂಘ, ಫಿನಲಂಡ. |
| ಕಟ್ಟಿಗೆ .... | ಬ್ರಾಝೀಲ. ಫ್ರಾನ್ಸ, ಬ್ರಹ್ಮದೇಶ. |

ಬ್ರಿಟಿಶ ನಡುಗಡ್ಡೆಗಳಲ್ಲಿಯ ಕಾರಖಾನೆಗಳಲ್ಲಿ ತಯಾರಾಗುವ ವಿವಿಧ ಸರಕುಗಳು ಈ ನಡುಗಡ್ಡೆಗಳಿಂದ ಪರದೇಶಗಳಿಗೆ ಹೋಗುತ್ತವೆ. ಇವುಗಳಲ್ಲಿ ನೂಲಿನ ಬಟ್ಟೆಗಳು, ಕಬ್ಬಿಣ-ಉಕ್ಕುಗಳ ಸಾಮಾನುಗಳು, ಮೋಟಾರುಗಳು ಮತ್ತು ಬೇರೆ ವಾಹನಗಳು, ಯಂತ್ರ, ಕಲ್ಲಿದ್ದಲಿ, ಉಣ್ಣೆಯ ಬಟ್ಟೆ ಮತ್ತು ರಸಾಯನಿಕ ದ್ರವ್ಯಗಳು ಮುಖ್ಯವಾಗಿರುತ್ತವೆ. ಈ ಪದಾರ್ಥಗಳು ಯಾವ ದೇಶಗಳಿಗೆ ಕಳಿಸಲ್ಪಡುವವೆಂಬುದರ ಮಾಹಿತಿ ಕೆಳಗೆ ಕೊಟ್ಟಂತೆ ಇರುತ್ತದೆ. ಬ್ರಿಟಿಶ ನಡುಗಡ್ಡೆಗಳಿಂದ ಸನ್ ೧೯೫೦ ನೇ ಇಸವಿಯಲ್ಲಿ ಒಟ್ಟು ೨೧೭ ಕೋಟಿ ಪೌಂಡು ಕಿಮ್ಮತ್ತಿನ ಸರಕು ಹೊರಗೆ ಕಳಿಸಲ್ಪಟ್ಟಿರುವದು. ಅದರಲ್ಲಿ ಬ್ರಿಟಿಶ್ ಕಾರಖಾನೆಗಳಲ್ಲಿ ತಯಾರಿಸಿ ರವಾನಿಸಲ್ಪಟ್ಟ ಮಾಲು ೧೮೮ ಕೋಟಿ ಪೌಂಡು ಕಿಮ್ಮತ್ತಿನದಾಗಿರುತ್ತದೆ.

# ಬ್ರಿಟಿಶ ನಡುಗಡ್ಡೆಗಳಿಂದ ಹೊರ ಪ್ರದೇಶಗಳಿಗೆ ಹೋಗುವ ಸರಕುಗಳು.

(ಸನ್ ೧೯೫೦ನೇ ಇಸವಿಯಲ್ಲಿಯ ಮಾಹಿತಿ)

| ಸರಕುಗಳ ಹೆಸರು. | ಯಾವದೇಶಕ್ಕೆ ಸರಕು ರವಾನಿಸಲ್ಪಡುವದೋ ಆ ದೇಶದ ಹೆಸರು. |
|---|---|
| ನೂಲು ಮತ್ತು ನೂಲಿನ ಬಟ್ಟೆ .... | ಆಸ್ಟ್ರೇಲಿಯಾ, ನ್ಯೂಝೀಲಂಡ, ಕಾನಡಾ, ನಾರ್ವೆ, ಸ್ವೀಡನ್, ಡೆನ್ಮಾರ್ಕ, ಜರ್ಮನೀ, ಆಫ್ರಿಕಾ ದೇಶದಲ್ಲಿ ಬ್ರಿಟಿಶರ ಅಧೀನದಲ್ಲಿದ್ದ ಎಲ್ಲ ಪ್ರದೇಶ, ಪಾಕಿಸ್ತಾನ, ಮಲಯಾ, ಬ್ರಹ್ಮದೇಶ, ಸಿಲೋನ, ಬ್ರಿಟಿಶ್ ವೆಸ್ಟ ಇಂಡೀಜ ಮತ್ತು ಗಿಯಾನಾ, ಇಂಡೋನೀಶಿಯಾ, ಇರಾಕ ಮತ್ತು ಯು. ಎಸ್. ಎ. |
| ಉಣ್ಣೆಯ ಅರಿವೆ .... | ಭಾರತ, ಕಾನಡಾ, ಫಿನಲಂಡ, ಸ್ವೀಡನ್, ನಾರ್ವೆ, ಜರ್ಮನೀ, ಡೆನ್ಮಾರ್ಕ, ಹಾಲಂಡ, ಗ್ರೀಸ್, ದಕ್ಷಿಣ ಆಫ್ರಿಕಾ ಸಂಘ, ಚೀನ, ಆಸ್ಟ್ರೇಲಿಯಾ, ನ್ಯೂಝೀಲಂಡ, ಯು. ಎಸ್. ಎ., ಇಜಿಪ್ತ. |
| ಕಬ್ಬಿಣ ಮತ್ತು ಉಕ್ಕಿನ ಮಾಲು. ... | ಆಸ್ಟ್ರೇಲಿಯ, ನ್ಯೂಝೀಲಂಡ, ಐರಿಶ್ ಪ್ರಜಾಸತ್ತಾಕ, ಕಾನಡಾ, ಭಾರತ, ಪಾಕಿಸ್ತಾನ, ದಕ್ಷಿಣ ಆಫ್ರಿಕಾ ಸಂಘ, ಡೆನ್ಮಾರ್ಕ, ಹಾಲಂಡ, ಇಜಿಪ್ತ, ಇರಾಣ, ಇರಾಕ, ಯು. ಎಸ್. ಎ., ಸಿಲೋನ, ಚೀನ ಮತ್ತು ಬ್ರಾಝೀಲ. |

| ಸರಕುಗಳ ಹೆಸರು. | ಯಾವ ದೇಶಕ್ಕೆ ಸರಕು ರವಾನಿ ಸಲ್ಪಡುವದೋ ಆ ದೇಶದ ಹೆಸರು. |
|---|---|
| ಮೋಟರ, ವಿಮಾನ, ಇತ್ಯಾದಿ.... | ಭಾರತ, ಆಫ್ರಿಕೆಯಲ್ಲಿ ಬಹುತರ ಎಲ್ಲ ಬ್ರಿಟಿಶ ಪ್ರದೇಶ, ಆಸ್ಟ್ರೇಲಿಯಾ, ಮಲಯಾ, ಕ್ಯಾನಡಾ, ಸ್ವೀಡನ್. |
| ಯಂತ್ರ ಸಾಮುಗ್ರಿಗಳು. .... | ಐರಿಶ್ ಪ್ರಜಾಸತ್ತಾತ್ಮಕ, ಫ್ರಾನ್ಸ, ಇಟಲೀ, ಕ್ಯಾನಡಾ, ಸ್ವೀಡನ್, ನಾರ್ವೆ, ಡೆನ್ಮಾರ್ಕ, ಅರ್ಜೆಂಟಿನಾ. |
| ರಸಾಯನಿಕ ದ್ರವ್ಯಗಳು. .... | ಭಾರತ, ಪಾಕಿಸ್ತಾನ, ಸಿಲೋನ, ಆಸ್ಟ್ರೇಲಿಯಾ, ಬ್ರಾಝೀಲ, ಆಫ್ರಿಕೆಯಲ್ಲಿಯ ಎಲ್ಲ ಬ್ರಿಟಿಶ ಪ್ರದೇಶ, ಕ್ಯಾನಡಾ, ನ್ಯೂಝೀಲಂಡ, ನಾರ್ವೆ, ಡೆನ್ಮಾರ್ಕ, ಬೆಲ್ಜಿಯಮ್, ಫ್ರಾನ್ಸ, ಇಟಲೀ, ಇರಾಣ, ಯು. ಎಸ್. ಎ. |

## ೫ ನೇ ಪ್ರಕರಣ

# ಫ್ರಾನ್ಸ

ಫ್ರಾನ್ಸ ದೇಶವು ಆಕಾರಮಾನದಲ್ಲಿ ಬ್ರಿಟಿಶ ನಡುಗಡ್ಡೆಗಳ ಸುಮಾರು ಇಮ್ಮಡಿ ಇರುವದು. ಈ ದೇಶಕ್ಕೆ ಸಣ್ಣ ಯುರೋಪವೆಂದೆನ್ನುತ್ತಾರೆ. ಯಾಕಂದರೆ ಯುರೋಪಖಂಡದೊಳಗಿನ ಬೇರೆ ಬೇರೆ ಭಾಗಗಳಲ್ಲಿ ಕಂಡು ಬರುವ ಭೂರಚನೆ, ಹವಾಮಾನ, ಬೆಳೆ ಮುಂತಾದವುಗಳು ಈ ದೇಶದೊಳಗೆ ಅಲ್ಲಲ್ಲಿ ಕಂಡುಬರುವವು. ಈ ಪ್ರಕಾರದ ಬೇರೆ ಬೇರೆ ಗುಣಗಳು ಕಂಡು ಬರುವದು ಸ್ವಾಭಾವಿಕವಾದದ್ದು.

ಈ ದೇಶವು ತೋಟಪಟ್ಟಿಗಳಿಂದ ಮತ್ತು ಹಳ್ಳಿಗಳಿಂದ ತುಂಬಿಹೋಗಿದೆ. ಇಲ್ಲಿ ಸುಮಾರು ೪ ಕೋಟಿ ಜನರು ವಾಸಿಸುತ್ತಾರೆ. ಅವರೊಳಗೆ ನೂರಕ್ಕೆ ೬೦ ರಷ್ಟು ಜನರು ಒಕ್ಕಲತನದ ಮೇಲೆ ಜೀವಿಸುತ್ತಾರೆ. ಈ ದೇಶದೊಳಗೆ ದೊಡ್ಡ ದೊಡ್ಡ ಪಟ್ಟಣಗಳು ತುಸು ಇರುತ್ತವೆ. ಫ್ರೆಂಚ ಜನರು ಕಷ್ಟ ಮಾಡುವವರೂ, ಸಾದಾವೃತ್ತಿಯವರೂ, ಶೂರರೂ ಆಗಿರುವರಲ್ಲದೆ ಕಲಾಕೌಶಲ್ಯಗಳಲ್ಲಿ ಪ್ರೀತಿಯುಳ್ಳವರಾಗಿರುತ್ತಾರೆ. ಎಲ್ಲ ತರದ ಶಾಸ್ತ್ರಗಳಲ್ಲಿ ಅವರು ಬಹಳ ಮುಂದುವರಿದಿದ್ದಾರೆ. ಅವರೊಳಗೆ ಸಾಹಸಿಗರಾದ ಪ್ರವಾಸಿಕರೂ, ಶೋಧಕರೂ ಆಗಿಹೋದರು. ಪರೀಸನೊಳಗಿನ ಜನರ ಫಶನ್ನಗಳಿಂದಲೂ, ಅವರ ದುಂದಿನಿಂದಲೂ ಫ್ರೆಂಚ ಜನರೆಲ್ಲ ಹಾಗೆಯೇ ಇರಬೇಕೆಂಬ ತಪ್ಪುಕಲ್ಪನೆಯು ನಮಗಾಗುತ್ತದೆ. ಆದರೆ ಫ್ರೆಂಚ ಜನರಿಗೆ ಕಷ್ಟಮಾಡುವದೂ, ಸಾದಾರೀತಿಯಿಂದಿರುವದೂ, ಮಿತವ್ಯಯದಿಂದ ಜೀವಿಸುವದೂ ಬಹಳ ಸೇರುತ್ತದೆ. ನಮ್ಮ ದೇಶದಂತೆಯೇ ಈ ದೇಶದಲ್ಲಾದರೂ ತಂದೆಯ ತರುವಾಯ ಎಲ್ಲ ಹುಡುಗರಿಗೆ ಆತನ ಹೊಲಗಳನ್ನು ಸರಿಯಾಗಿ ಹಂಚಿಕೊಡುತ್ತಾರೆ. ಇದರಿಂದ ಬಹುತರವಾಗಿ ಎಲ್ಲರಿಗೂ ಅವರ ಸ್ವಂತ ಭೂಮಿಗಳಿದ್ದು, ಅವುಗಳಲ್ಲಿ ಅವರು ಸ್ವತಃ ದುಡಿಯುತ್ತಾರೆ. ಉದ್ಯೋಗ-ವ್ಯವಸಾಯಗಳ ಸಲುವಾಗಿ ಪಟ್ಟಣಗಳಲ್ಲಿ ಹೋಗಿ ನಿಂತ ಜನರು

ಸಹ ಪ್ರತಿವರುಷ ಅನುವು ಮಾಡಿಕೊಂಡು ಒಕ್ಕಲತನವನ್ನು ಮಾಡಲಿಕ್ಕೆ ಹಳ್ಳಿಗಳಿಗೆ ಹೋಗಿರುತ್ತಾರೆ.

ಈ ದೇಶದ ಮೂರು ಕಡೆಯಲ್ಲಿ ಸಮುದ್ರವಿರುತ್ತದೆ. ಉತ್ತರಕ್ಕೆ ಇಂಗ್ಲೀಷ ಆಖಾತವೂ, ಉತ್ತರ ಸಮುದ್ರವೂ, ಪಶ್ಚಿಮಕ್ಕೆ ಅಟಲಾಂಟಿಕ ಮಹಾಸಾಗರವೂ, ದಕ್ಷಿಣಕ್ಕೆ ಭೂಮಧ್ಯ ಸಮುದ್ರವೂ, ಇರುತ್ತದೆ. ಇದಕ್ಕೆ ಭೂಮಧ್ಯ ಸಮುದ್ರವು ಹತ್ತಿರುವದರಿಂದ ವ್ಯಾಪಾರದ ದೃಷ್ಟಿಯಿಂದ ಬ್ರಿಟಿಶ ನಡುಗಡ್ಡೆಗಳಿಗಿಂತ ಹೆಚ್ಚು ಸೌಕರ್ಯವು ಉಂಟಾಗಿದೆ. ಆದರೂ ಇದರ ಪೂರ್ವದ ಸರಹದ್ದು ಸಾಕಷ್ಟು ಭದ್ರವಾಗಿರುವದಿಲ್ಲ.

ಫ್ರಾನ್ಸ ದೇಶದೊಳಗೆ ಕೆಳಗಿನಂತೆ ಸ್ವಾಭಾವಿಕ ವಿಭಾಗಗಳನ್ನು ಮಾಡಬಹುದು:-

(೧) **ಬ್ರಿಟನೀ:**—ವಾಯುವ್ಯದ ಕಡೆಗಿರುವ ಮರಡಿಯ ದ್ವೀಪಕಲ್ಪಕ್ಕೆ ಬ್ರಿಟನೀ ಎಂಬ ಹೆಸರು ಅದೆ. ಇಂಗ್ಲಂಡದೊಳಗಿನ ಕಾರ್ನವಾಲದ ಗುಡ್ಡಗಳೂ ಫ್ರಾನ್ಸದೊಳಗಿನ ಬ್ರಿಟನಿಯ ಗುಡ್ಡವೂ ಒಂದಾನೊಂದು ಕಾಲದಲ್ಲಿ ಹೊಂದಿಕೊಂಡಿದ್ದವು; ಆದರೆ ಅವು ಇಂಗ್ಲಿಷ ಚಾನಲ್‌ದಿಂದ ಬೇರೆ ಮಾಡಲ್ಪಟ್ಟಂತೆ ಕಾಣುತ್ತವೆ. ಈ ಗುಡ್ಡಗಳು ಸಾಧಾರಣವಾಗಿ ೧೦೦೦ ಫೂಟು ಉನ್ನತವಾಗಿರುತ್ತವೆ. ಇದರೊಳಗಿನ ಬಹುತರ ಯಾವತ್ತೂ ಪ್ರಾಂತವು ಮರಡಿಯೇ ಆಗಿದ್ದರೂ ಸಮುದ್ರ ದಂಡೆಯ ಭೂಮಿಯು ಬೆಳೆಯುಳ್ಳದ್ದಾಗಿರುತ್ತದೆ.

ಈ ದ್ವೀಪಕಲ್ಪದ ಮೂರು ಬದಿಗೆ ಸಮುದ್ರವಿರುತ್ತದೆ. ಮತ್ತು ಪಶ್ಚಿಮದ ಕಡೆಯಿಂದ ಅಟಲಾಂಟಿಕ ಮಹಾಸಾಗರದ ಮೇಲಿಂದ ಆರ್ದ್ರವಾದ ಗಾಳಿಗಳು ಬೀಸುತ್ತಿರುತ್ತವೆ. ಇದರಿಂದ ಇಲ್ಲಿ ಹನ್ನೆರಡೂ ತಿಂಗಳೂ ಮಳೆಯಾಗುತ್ತದೆ. ಮತ್ತು ಹವೆಯು ಯಾವಾಗಲೂ ಸಮವಾದದ್ದೂ ಆರ್ದ್ರತೆಯುಳ್ಳದ್ದೂ ಆಗಿರುತ್ತದೆ. ಅಲ್ಲಿ ಮೇಲ್ತರದ ಹುಲ್ಲು ಬೆಳೆಯುತ್ತದೆ, ಮತ್ತು ಅದರ ಮೇಲೆ ಹೈನಿನ ದನಗಳು ಚೆನ್ನಾಗಿ ಪೋಷಿಸಲ್ಪಡುತ್ತವೆ. ಅವುಗಳಿಂದ ಸಿಗುವ ಹಾಲು, ಬೆಣ್ಣೆ, ಚೀಜ ಮುಂತಾದ ಪದಾರ್ಥಗಳನ್ನು ಹೊರಗೆ ಕಳಿಸುತ್ತಾರೆ. ಈ ಭಾಗದೊಳಗೆ ಸಫರಚಂದ ಮುಂತಾದ ಹಣ್ಣುಗಳು ಆಗುತ್ತವೆ. ಸಫರಚಂದದಿಂದ 'ಸೀಡರ್' ಎಂಬ ಜಾತಿಯ ಸರಾಯಿಯನ್ನು ತಯಾರಿಸು

ತ್ತಾರೆ. ಅಲ್ಲಿಯ ಒಕ್ಕಲಿಗರು ಬಟಾಟೆ, ಕಾಯಿಪಲ್ಯಗಳನ್ನು ಸುಗ್ಗಿಯು ಬರುವದಕ್ಕೆ ಮುಂಚೆ ಬೆಳೆದು, ಅವುಗಳನ್ನು ಲಂಡನಕ್ಕೆ ಮಾರಾಟದ ಸಲುವಾಗಿ ಕಳಿಸುತ್ತಾರೆ.

ಆದರೂ ಈ ಮರಡಿಯ ಪ್ರದೇಶಗಳಲ್ಲಿ ಒಕ್ಕಲತನ ಅಷ್ಟಕ್ಕಷ್ಟೇ ಇರುತ್ತದೆ. ಇದರ ಕರಾವಳಿಯು ಒಡಕಾಗಿರುವದರಿಂದ ಸ್ವಾಭಾವಿಕವಾಗಿಯೇ ಜನರ ಲಕ್ಷವು ಸಮುದ್ರದ ಕಡೆಗೆ ಹೋಗುತ್ತದೆ. ಇಲ್ಲಿಯ ಜನರು ಸಾಹಸಿಗರಾದ ಜಲಪರ್ಯಟನ ಮಾಡುವವರೂ ಮೀನುಗಾರರೂ ಎಂದು ಹೆಸರಾಗಿರುತ್ತಾರೆ. ಸಮುದ್ರ ದಂಡೆಯ ಹತ್ತರ ಕಾಡ್ ಮತ್ತು ಹೇರಿಂಗ್ ಎಂಬ ಜಾತಿಯ ಮೀನುಗಳು ಸಿಗುತ್ತವೆ. ಆದರೂ ಅಲ್ಲಿಯ ಜಾಲಗಾರರು ಮೀನು ಹಿಡಿಯುವದರ ಸಲುವಾಗಿ ಆಯಿಸ್ಲಂಡ, ಮತ್ತು ನ್ಯೂಫೌಂಡಲಂಡಗಳ ವರೆಗೆ ಹೋಗುತ್ತಾರೆ. ಅವರೊಳಗೆ ಎಷ್ಟೋ ಜನರು ಸಾಹಸಿಗರಾದ ಶೋಧಕರೆಂದು ಹೆಸರು ಪಡೆದಿರುತ್ತಾರೆ.

ಈ ಪ್ರಾಂತದ ರಾಜಧಾನಿಯಾದ **ರೇನಿಸ್** ಎಂಬ ಪಟ್ಟಣವು ಕಾಲುವೆ, ನದಿ, ಮತ್ತು ರೇಲುಮಾರ್ಗಗಳ ಕೇಂದ್ರವಾಗಿರುತ್ತದೆ. **ಬ್ರೆಸ್ಟ** ಎಂಬ ಬಂದರವು ಯುರೋಪಖಂಡದಲ್ಲೆಲ್ಲ ಪ್ರಸಿದ್ಧವಾದ ಬಂದರದ ಸ್ಥಳವಿದ್ದು, ಇಲ್ಲಿ ಫ್ರೆಂಚ ಸರಕಾರದವರ ಬಲವಾದ ಹಡಗುಪಡೆಯು ಇಡಲ್ಪಟ್ಟಿರುತ್ತದೆ. ಬ್ರಿಟನೀ ಪ್ರಾಂತದಿಂದ ಇಂಗ್ಲಂಡಕ್ಕೆ ಹೋಗುವ ಕಾಯಿಪಲ್ಯ, ಹಣ್ಣುಹಂಪಲುಗಳು ಈ ಬಂದರದೊಳಗಿನ ಸಾವುದಮ್ಟನ್‌ದ ಮೇಲಿಂದ ಲಂಡನಕ್ಕೆ ಕಳಿಸಲ್ಪಡುತ್ತವೆ. **ಶೇರಬುರ್ಗ**—ಇದು ತಟಬಂದಿ ಪಟ್ಟಣವಿದ್ದು ಇಲ್ಲಿ ಫ್ರೆಂಚ ಹಡಗುಪಡೆಯ ಸ್ಥಾನವಿರುವದು.

**(೨) ಸೀನ ಹೊಳೆಯ ಕೊಳ್ಳ:**—ಸೀನ ಹೊಳೆಯು ಹರಿಯುವ ಯಾವತ್ತೂ ಪ್ರದೇಶವು ಬೆಳೆಯುಳ್ಳದ್ದಾಗಿರುವದಲ್ಲದೆ, ಅಲ್ಲಿಯ ಹವೆಯು ಚಳಿಗಾಲದಲ್ಲಿ ಸೌಮ್ಯವಾಗಿಯೂ ಆರ್ದ್ರವಾಗಿಯೂ ಇರುತ್ತದೆ. ಬೇಸಿಗೆಯಲ್ಲಿ ಅದು ಒಣದಾಗಿದ್ದು, ಸೂರ್ಯನ ಪ್ರಕಾಶವಾದರೂ ಸಾಕಷ್ಟು ಬೀಳುತ್ತದೆ. ಇಂಥ ಹವೆಯು ಗೋದಿಗೆ ಬಲು ಹಿತಕರವಾಗಿರುತ್ತದೆ. ಈ ಪ್ರದೇಶದೊಳಗೆ ಎಲ್ಲ ಕಡೆಗಳಲ್ಲಿಯೂ ಒಕ್ಕಲತನವನ್ನು ಮಾಡುತ್ತಾರೆ. ಗೋದಿ, ಜವೆಗೋದಿ, ಬಟಾಟೆ ಮತ್ತು ಬೀಟ ಇವೇ ಮುಖ್ಯವಾದ ಹುಟ್ಟುವಳಿಗಳು.

ಉತ್ತರ ಭಾಗಗಳಲ್ಲಿ ದ್ರಾಕ್ಷೆಗಳು ಬಹು ಚೆನ್ನಾಗಿ ಬೆಳೆಯುತ್ತವೆ. ಅವುಗಳಿಂದ ಸರಾಯಿಯನ್ನು ತಯಾರಿಸುತ್ತಾರೆ. ದಿಬ್ಬಗಳ ಮೇಲಿನ ಹುಲ್ಲುಗಾವಲುಗಳ ಮೇಲೆ ಜನರು ಕುರಿಗಳನ್ನು ಸಾಕುತ್ತಾರೆ.




ಫ್ರಾನ್ಸದ ನಕಾಶ, ಪರೀಸ

**ಪರೀಸ:**—ಫ್ರಾನ್ಸದೇಶದ ರಾಜಧಾನಿಯಾದ ಈ ಜಗದ್ವಿಖ್ಯಾತ ಪಟ್ಟಣವು ಸೀನ ನದಿಯ ಕೊಳ್ಳದ ಮಧ್ಯದಲ್ಲಿ ನೆಲಸಿರುತ್ತದೆ. ಹತ್ತಿರದಲ್ಲಿಯೇ ಸೀನ ನದಿಗೆ ಮಾರ್ನ ಎಂಬ ಸಣ್ಣ ಹೊಳೆಯು ಬಂದು ಕೂಡಿರುತ್ತದೆ. ಸೀನ ನದಿಯ ಪಾತ್ರದೊಳಗೆ ಸಣ್ಣದೊಂದು ನಡುಗಡ್ಡೆಯುಂಟು.

ಅದರೊಳಗೆ ಜೀವಿಸುವ ಜನರಿಗೆ ಸ್ವಸಂರಕ್ಷಣೆಯನ್ನು ಸುಲಭವಾಗಿ ಮಾಡಿ ಕೊಳ್ಳಲಿಕ್ಕೆ ಬರುತ್ತಿತ್ತು; ಆದರೆ ಜನವಸತಿಯು ಇಳಿಯುತ್ತ ಹೋಗಿ ಜನರು ನದಿಯ ಎರಡೂ ತೀರಗಳ ಮೇಲೆ ಇರಲಾರಂಭಿಸಿದರು. ಈ ರೀತಿ



ಎಫೆಲ್ ಟಾವರ, ಪರೀಸ

ಯಿಂದ ಈ ಪಟ್ಟಣದ ಬೆಳವಣಿಗೆಯಾಗುತ್ತ ಹೋಯಿತು. ಇದರೊಳಗಿನ ಲೈನುದಾರಿಗಳು ಬಹಳ ಅಗಲಾಗಿಯೂ, ವೃಕ್ಷರಾಜಗಳಿಂದ ಸುಶೋಭಿತ ವಾಗಿಯೂ ಮಾಡಲ್ಪಟ್ಟಿವೆ. ನಡುನಡುವೆ ಸಾರ್ವಜನಿಕ ಉದ್ಯಾನ ಗಳೂ, ಭವ್ಯವಾದ ಪ್ರಾಸಾದಗಳೂ ಕಂಡುಬರುತ್ತವೆ. ಈ ಪಟ್ಟಣದ

ಸುತ್ತಮುತ್ತು ಕಲ್ಲಿದ್ದಲಿಯು ಸಿಗುವದಿಲ್ಲ. ಆದ್ದರಿಂದ ಇಲ್ಲಿ ದೊಡ್ಡ ದೊಡ್ಡ ಕಾರಖಾನೆಗಳು ಅಷ್ಟು ಇರುವದಿಲ್ಲ. ಆದರೆ ಇಲ್ಲಿ ವಿಲಾಸದ ವಸ್ತುಗಳೂ, ಕಲಾಕುಸುರಿನ ಸರಕುಗಳೂ ತಯಾರಾಗುತ್ತವೆ. ಈ ಪಟ್ಟಣದಿಂದ ದೇಶದೊಳಗೆ ನಾಲ್ಕೂಕಡೆಗೆ ಲೈನುದಾರಿಗಳೂ, ರೇಲುಮಾರ್ಗಗಳೂ ಹೋಗಿರುತ್ತವೆ. ಇದರಿಂದ ಹೋಗುಬರಲಿಕ್ಕೆ ಬಹಳ ಅನುಕೂಲವಾಗುತ್ತದೆ. ಸೀನ ನದಿಯ ಮುಖದೊಳಗಿಂದ ಪ್ಯಾರೀಸದ ವರೆಗೆ ಸಣ್ಣ ಸಣ್ಣ ಉಗಿಹಡಗಗಳು ಹೋಗಿಬರುತ್ತವೆ.

ಪ್ಯಾರೀಸದ ನೈಋತ್ಯಕ್ಕೆ **ವ್ಹರ್ಸಾಯ** ಎಂಬ ಪಟ್ಟಣವಿರುತ್ತದೆ. ಅಲ್ಲಿಯ ಅರಮನೆಯು ನೋಡತಕ್ಕಂಥಾದ್ದಿರುತ್ತದೆ. ಅದರಲ್ಲಿ ಪ್ರಾಚೀನ ಕಾಲದ ಫ್ರಾನ್ಸ ದೇಶದ ಅರಸರು ಇರುತ್ತಿದ್ದರು. **ರುಆ** ಎಂಬ ಪಟ್ಟಣವು ಸೀನ ನದಿಯ ಮೇಲಿನ ದೊಡ್ಡ ಬಂದರವಾಗಿದ್ದು, ಅದು ನಾರ್ಮಂಡೀ ಜನರ ರಾಜಧಾನಿಯಾಗಿತ್ತು. ಇಲ್ಲಿ ಪರದೇಶಗಳಿಂದ ಕಚ್ಚಾಮಾಲು ಬರುತ್ತದೆ. ಮತ್ತು ಕಲ್ಲಿದ್ದಲಿಯ ಖಣಿಗಳು ಇಲ್ಲಿಂದ ಸಮೀಪವಿರುವದರಿಂದ ನೂಲಿನ ಮತ್ತು ಉಣ್ಣೆಯ ಬಟ್ಟೆಗಳನ್ನು ನೇಯುವ ಎಷ್ಟೋ ಗಿರಿಣಿಗಳು ಇಲ್ಲಿ ಇರುತ್ತವೆ. **ಹಾವ್ರ** ಎಂಬ ಬಂದರವು ಸೀನ ನದಿಯ ಮುಖದ ಮೇಲೆ ಇರುತ್ತದೆ. ಅಲ್ಲಿ ಅಮೇರಿಕೆಯಿಂದ ಹತ್ತಿಯೂ, ಇಂಗ್ಲಂಡದಿಂದ ಕಲ್ಲಿದ್ದಲಿಯೂ ಬರುತ್ತವೆ. ಇಲ್ಲಿಂದ ನಾರ್ಮಂಡೀ ಪ್ರಾಂತದೊಳಗಿನ ಸಫರಚಂದ, ಬೆಣ್ಣೆ, ಚೀಜ ಮುಂತಾದ ಸರಕುಗಳು ಇಂಗ್ಲಂಡಕ್ಕೆ ಕಳಿಸಲ್ಪಡುತ್ತವೆ. (**ಶೇರಬುರ್ಗ** ಎಂಬುದು ಭದ್ರವಾದ ಪಟ್ಟಣವಿದ್ದು, ಅಲ್ಲಿ ಹಡಗು ಪಡೆಯ ಠಾಣ್ಯಾವಿರುತ್ತದೆ.) **ಡಿಪ್** ಬಂದರದಿಂದ ಇಂಗ್ಲಂಡದೊಳಗಿನ ನ್ಯೂ ಹೆವ್ಹನ್‌ದ ವರೆಗೆ ಹಡಗಗಳು ಒಂದೇ ಸವನೆ ಓಡಾಡುತ್ತಿರುತ್ತವೆ.

**(೩) ಪೂರ್ವದ ಕಡೆಯ ಭಾಗವು:**– ಈ ಭಾಗವು ಉದ್ಯೋಗ ವ್ಯವಸಾಯಗಳಿಂದಲೂ, ಕಾರಖಾನೆಗಳಿಂದಲೂ ತುಂಬಿ ತುಳುಕುತ್ತದೆ. ಇದರ ಮುಖ್ಯ ಕಾರಣವೇನೆಂದರೆ ಹತ್ತರದಲ್ಲಿಯೇ ಬೆಲ್ಜಮ್‌ದ ಸೀಮೆಯ ಮೇಲೆ ಕಲ್ಲಿದ್ದಲಿಯ ಖಣಿಗಳ ಒಂದು ದೊಡ್ಡ ಪಟ್ಟಿಯೇ ಸಿಕ್ಕಿರುತ್ತದೆ. ಮತ್ತು ಈ ಭಾಗದೊಳಗೆ ಹೊರಗಿನಿಂದ ಕಚ್ಚಾಮಾಲು ತರಲಿಕ್ಕೆ ಬಹಳ ಸೌಕರ್ಯಗಳುಂಟು. **ರೊಅನ್** ಪಟ್ಟಣದ ಸುತ್ತಮುತ್ತಲಿನ ಗುಡ್ಡಗಳ ಮೇಲೆ

ಕುರಿಗಳನ್ನು ಸಾಕುತ್ತಾರೆ. ಅವುಗಳ ಉಣ್ಣೆಯಿಂದ ಅರಿವೆಗಳನ್ನು ನೇಯುವ ದೊಡ್ಡ ದೊಡ್ಡ ಕಾರಖಾನೆಗಳು ಆ ಪಟ್ಟಣದೊಳಗೆ ಸ್ಥಾಪಿತವಾಗಿರುತ್ತವೆ. ಈ ಭಾಗದಲ್ಲಿ ಪುಂಡಿಯ ಬೆಳೆಯು ಚೆನ್ನಾಗಿ ಬರುತ್ತದೆ. ಅದರ ನಾರಿನಿಂದ ಲಿನನ್‌ದ ಅರಿವೆಗಳನ್ನು ನೇಯುವ ದೊಡ್ಡ ಕಾರಖಾನೆಗಳು **ಲೀಲ** ಮತ್ತು **ಕ್ಯಾಂಬ್ರಾಯ** ಎಂಬಲ್ಲಿ ಚೆನ್ನಾಗಿ ಸಾಗಿರುತ್ತವೆ. ಈ ಭಾಗದಲ್ಲಿ ಬೀಟದ ಗಡ್ಡೆಗಳು ವಿಪುಲವಾಗಿ ಬೆಳೆಯುತ್ತವೆ. ಅವುಗಳಿಂದ ಲೀಲ ಎಂಬಲ್ಲಿ ಸಕ್ಕರೆಯನ್ನು ತಯಾರಿಸುತ್ತಾರೆ. ಈ ಪ್ರಾಂತದೊಳಗಿನ ಕಾರಖಾನೆಗಳಿಗೆ ಬೇಕಾಗುವ ಉಣ್ಣೆಯು ದಕ್ಷಿಣ ಅಮೇರಿಕೆಯಿಂದಲೂ, ಹತ್ತಿಯು ಸಂಯುಕ್ತ ಸಂಸ್ಥಾನಗಳಿಂದಲೂ, ಪುಂಡಿಯು ಬಾಲ್ಟಿಕ್ ಸಮುದ್ರದ ದಂಡೆಯ ಮೇಲಿನ




ಪ್ರದೇಶಗಳಿಂದಲೂ **ಡಂಕರ್ಕ** ಎಂಬ ಬಂದರಕ್ಕೆ ಬರುತ್ತವೆ. ಮತ್ತು ಇವುಗಳಿಂದ ತಯಾರಾದ ಸರಕುಗಳಾದರೂ ಇದೇ ಬಂದರದಿಂದಲೇ ಹೊರಗೆ ಹೋಗುತ್ತವೆ. **ಕ್ಯಾಲೆ** ಮತ್ತು **ಬುಲಾಯಿ** ಬಂದರಗಳಿಂದ ಇಂಗ್ಲಂಡಕ್ಕೆ ಹೋಗುವ ಹಡಗಗಳು ಒಂದೇ ಸವನೆ ಓಡಾಡುತ್ತಿರುತ್ತವೆ.

ಲೋರೆನ್ ಪ್ರಾಂತದೊಳಗೆ ಕಬ್ಬಿಣದ ದೊಡ್ಡ ದೊಡ್ಡ ಖಣಿಗಳುಂಟು. ಆದ್ದರಿಂದ ಈ ಪ್ರಾಂತದೊಳಗಿನ ಕಾರಖಾನೆಗಳಿಗೆ ಬಹು ದೊಡ್ಡ ಸಹಾಯ ವಾಗಿರುತ್ತದೆ. ಇತ್ತಲಾಗಿ ವ್ಹಾಸ್‌ಜಿಸ್ ಗುಡ್ಡದೊಳಗಿನ ತಡಸಲುಗಳಿಂದ ಹುಟ್ಟಿಸಿದ ವಿದ್ಯುಚ್ಛಕ್ತಿಯಿಂದಲೂ ಕಾರಖಾನೆಗಳು ನಡೆಸಲ್ಪಡುತ್ತವೆ. **ಲಾಕ್ರೂಸೋ** ಎಂಬಲ್ಲಿ ಕಬ್ಬಿಣದ ಸರಕುಗಳೂ, ಯುದ್ಧಕ್ಕೆ ಬೇಕಾಗುವ ಸಾಮಗ್ರಿಗಳೂ ರೇಲುಮಾರ್ಗಕ್ಕೆ ಬೇಕಾಗುವ ಪದಾರ್ಥಗಳೂ ತಯಾರಾಗು ತ್ತವೆ. ಪೂರ್ವಭಾಗದಲ್ಲಿರುವ ಗುಡ್ಡಗಳ ಇಳುಕಲಿನ ಮೇಲೆ ದ್ರಾಕ್ಷೆಯ



ಫ್ರಾನ್ಸದೊಳಗಿನ ದ್ರಾಕ್ಷೆಯ ತೋಟ

ಬಳ್ಳಿಗಳನ್ನು ಹಚ್ಚುತ್ತಾರೆ. ಮತ್ತು ಉತ್ತರದ ಕಡೆಗೆ ಬೀಟದ ಬೆಳೆಯು ಚೆನ್ನಾಗಿ ಬರುತ್ತದೆ.

**(೪) ಹ್ರೋನ-ಸೇವ್ಹೋನ್ ಹೊಳೆಗಳ ಕೊಳ್ಳ :—** ಸೇವ್ಹೋನ್ ಹೊಳೆಯ ಕೊಳ್ಳವು ಹ್ರೋನ ನದಿಯ ಕೊಳ್ಳಕ್ಕೆ ಹತ್ತಿಕೊಂಡು ಉತ್ತರಕ್ಕೆ ಇರುತ್ತದೆ. ಅದರೊಳಗೆ ದ್ರಾಕ್ಷೆಯ ಹೊರ್ತಾಗಿ ಹೇಳಿಕೊಳ್ಳುವಂಥ ಬೇರೆ ಬೆಳೆಗಳು ಬರುವದಿಲ್ಲ. ಹ್ರೋನದ ಕೊಳ್ಳದೊಳಗೆ ಚಳಿಗಾಲದಲ್ಲಿ

ಮಳೆಯಾಗುತ್ತದೆ. ಅಲ್ಲಿ ಹಣ್ಣು ಹಂಪಲುಗಳೂ, ದ್ರಾಕ್ಷಿಗಳೂ, ತುತ್ತೀಗಿಡ ಗಳೂ ಬೆಳೆಯುವವಲ್ಲದೆ ಗೋದಿ-ಗೋವಿನ ಜೋಳಗಳಾದರೂ ಕೆಲಮಟ್ಟಿಗೆ ಬೆಳೆಯುತ್ತವೆ. ಈ ಕೊಳ್ಳದ ದಕ್ಷಿಣದ ಕಡೆಯ ಸಮುದ್ರ ದಂಡೆಯ ಮೇಲಿನ ಭಾಗಕ್ಕೆ **ರಿವ್ಹಿಏರಾ** ಎಂದೆನ್ನುತ್ತಾರೆ ಉತ್ತರದ ಕಡೆಯ ದೇಶ ದೊಳಗಿನ ಜನರು ಇಲ್ಲಿಯ ಚಳಿಗಾಲದ ಆಲ್ಹಾದಕರವಾದ ಹವೆಯ ಸಲು ವಾಗಿ ಇಲ್ಲಿ ಬರುತ್ತಾರೆ. ಇದೇ ರಿವ್ಹಿಏರಾ ಎಂಬುದು ಪೂರ್ವದ ಕಡೆಗೆ ಇಟಲೀಯ ದಂಡೆಯ ಮೇಲಾದರೂ ಹಬ್ಬಿರುವದು.

**ಲಿಆನ್** ಎಂಬ ಪಟ್ಟಣವು ಹ್ರೋನ-ಸೇವ್ಹೋನಗಳ ಸಂಗಮದ ಮೇಲಿದ್ದು, ಆಲ್ಲಿ ರೇಶಿಮೆಯ ಬಟ್ಟೆಗಳನ್ನು ತಯಾರು ಮಾಡುವ ಕಾರಖಾನೆ ಗಳುಂಟು. ಅವುಗಳಿಗೆ ಸ್ಥಾನಿಕ ರೇಶಿಮೆಯ ಪೂರೈಕೆಯು ಸಾಕಷ್ಟು ಆಗು ವದಿಲ್ಲ. ಆದ್ದರಿಂದ ಚೀನ-ಜಪಾನ ದೇಶಗಳಿಂದ ರೇಶಿಮೆಯನ್ನು ಆಮದು ಮಾಡಬೇಕಾಗುತ್ತದೆ. **ಮಾರ್ಸೆಲ್ಸ** ಎಂಬ ಬಂದರವು ದಕ್ಷಿಣ ಸಮುದ್ರ ದಂಡೆಯ ಮೇಲಿನ ಮಹತ್ವವಾದ ಬಂದರವೂ, ಆಯಕಟ್ಟಿನ ಸ್ಥಳವೂ ಆಗಿ ರುತ್ತದೆ. ಹ್ರೋನ ಹೊಳೆಯ ಕೊಳ್ಳದೊಳಗಿಂದ ಹೋಗು-ಬರುವ ಸರ ಕುಗಳು ಇಲ್ಲಿಂದಲೇ ಕಳಿಸಲ್ಪಡುತ್ತವೆ. ಇಲ್ಲಿ ಸಬಕಾರ ಮತ್ತು ಮೇಣ ಬತ್ತಿಗಳನ್ನು ಮಾಡುವ ದೊಡ್ಡ ದೊಡ್ಡ ಕಾರಖಾನೆಗಳಿರುತ್ತವೆ. ಅವುಗಳಿಗೆ ಬೇಕಾಗುವ ಎಣ್ಣೆ, ಇಲ್ಲವೆ ಕೊಬ್ಬರಿ, ಅಗಸೆ, ನೆಲಗಡಲೆ ಮುಂತಾದ ಕಚ್ಚಾ ಮಾಲುಗಳು ಭಾರತದಿಂದಲೂ ಇತರ ಪೌರ್ವಾತ್ಯ ದೇಶಗಳಿಂದಲೂ ಹೋಗುತ್ತವೆ. **ಟೂಲಾ** ಎಂಬ ಬಂದರದೊಳಗೆ ಹಡಗು ಪಡೆಯ ಠಾಣ್ಯ ವಿರುತ್ತದೆ. ರಿವ್ಹಿಏರಾದೊಳಗೆ **ನಾಯಿಸ್** ಎಂಬ ಸುಂದರವಾದ ಪಟ್ಟ ಣವು ನೆಲಿಸಿದೆ.

**(೫) ಮಧ್ಯಭಾಗದ ತಪ್ಪಲು :**—ಸಾಧಾರಣವಾಗಿ ಫ್ರಾನ್ಸದ ನಟ್ಟನಡುವೆ ಇರುವ ಈ ತಪ್ಪಲು ಸಮುದ್ರದಿಂದ ದೂರಿರುವ ಕಾರಣ ಅಲ್ಲಿಯ ಹವೆಯು ಬೇಸಿಗೆಯಲ್ಲಿ ಹೆಚ್ಚಾಗಿ ಉಷ್ಣವಾಗಿಯೂ ಚಳಿಗಾಲದಲ್ಲಿ ಹೆಚ್ಚು ಶೀತವಾಗಿಯೂ ಇರುತ್ತದೆ. ಮಳೆಯು ಸಾಕಷ್ಟು ಆಗುವದು ಆದರೆ ಭೂಮಿಯು ಅಷ್ಟು ಕಸುವುಳ್ಳದ್ದಲ್ಲ. ಆದ್ದರಿಂದ ಅಲ್ಲಿಯ ಹುಲ್ಲು ಗಾವಲುಗಳ ಮೇಲೆ ಕುರಿಗಳನ್ನು ಸಾಕುತ್ತಾರೆ. ಮತ್ತು ಅಲ್ಲಲ್ಲಿ ರಾಯ,

ಓಟ, ಬಟಾಟೆಗಳ ಬೆಳೆಗಳು ಬರುತ್ತವೆ. ಕುರಿ ಹಾಲಿನಿಂದ ಉತ್ತಮವಾದ ಚೀಜವು ತಯಾರಾಗುತ್ತದೆ. ಈ ತಪ್ಪಲಿನ ಮೇಲೆ ಜನವಸತಿಯು ತೀರ ವಿರಳವಾಗಿದ್ದು, ಜನರ ಜೀವನಕ್ರಮವು ಬಹಳ ಕಷ್ಟದಾಯಕವಾಗಿರುತ್ತದೆ.

ಫ್ರಾನ್ಸ-ಹುಟ್ಟುವಳಿಗಳು

(೬) **ಪಶ್ಚಿಮದ ಕಡೆಯ ಬೈಲು ಪ್ರದೇಶ:**—ಈ ಪ್ರದೇಶದೊಳಗೆ ಗಾರೋನ ಮತ್ತು ಲಾಯರ್ ಹೊಳೆಗಳ ಕೊಳ್ಳಗಳ ಭಾಗವು ಸಮಾವೇಶವಾಗುತ್ತದೆ. ಈ ಹೊಳೆಗಳಿಂದಲೂ, ಅವುಗಳಿಗೆ ಬಂದು ಕೂಡುವ ಹೊಳೆ

ಗಳಿಂದಲೂ ತರಲ್ಪಟ್ಟ ರೇವೆಯ ಮಣ್ಣಿನಿಂದ ಈ ಭಾಗವು ನಿರ್ಮಾಣವಾಗಿ ರುವದರಿಂದ, ಅದು ಬಹಳ ಬೆಳೆಯುಳ್ಳದ್ದಾಗಿರುತ್ತದೆ. ಬಿಸ್ಕೇದ ಉಪಸಾಗರಕ್ಕೆ ಹೊಂದಿಕೊಂಡಿರುವ ಭಾಗದೊಳಗೆ ಪಶ್ಚಿಮದ ಕಡೆಯಿಂದ ಹನ್ನೆರಡೂ ತಿಂಗಳು ಮಳೆಯು ಬರುತ್ತದೆ; ಮತ್ತು ದಕ್ಷಿಣದ ಕಡೆಯ ಭಾಗದೊಳಗೆ ಚಳಿಗಾಲದಲ್ಲಿ ಮಳೆಯಾಗುತ್ತದೆ. ಆದ್ದರಿಂದ ಎರಡೂ ತರಹದ ಹವೆಯೊಳಗೆ ಬರುವ ಬೆಳೆಗಳು ಇಲ್ಲಿ ಬೆಳೆಯುತ್ತವೆ.

ಗಾರೋನ ಹೊಳೆಯ ಕೊಳ್ಳದೊಳಗೆ ಗೋದಿ ಮತ್ತು ದ್ರಾಕ್ಷೆಗಳು ಬೆಳೆಯುತ್ತವೆ. ದ್ರಾಕ್ಷೆಗಳಿಂದ ತಯಾರಿಸಿದ ಮದ್ಯವು ಹೊಳೆಯ ಮೇಲಿನ **ಬೋಡೋರ್** ಎಂಬ ಬಂದರದೊಳಗಿಂದ ರಫ್ತಾಗುತ್ತದೆ. **ಟುಲೂಜ** ಎಂಬುದು ಹಳೇ ರಾಜಧಾನಿಯ ಸ್ಥಳವು. ಸದ್ಯಕ್ಕೆ ಅಲ್ಲಿ ರೇಶಿಮೆಯ ಅರಿವೆಯನ್ನು ನೇಯುವ ಕಾರಖಾನೆಗಳೂ, ತಂಬಾಕ, ತೊಗಲಿನ ಸರಕುಗಳನ್ನು ತಯಾರಿಸುವ ಕಾರಖಾನೆಗಳೂ ಇರುತ್ತವೆ. ಗಾರೋನದ ಮುಖದಿಂದ ದಕ್ಷಿಣದ ಕಡೆಯ ಕರಾವಳಿಯ ಪಟ್ಟಿಯವರೆಗಿನ ಭಾಗವು ಉಸುಬಿನ ದಿನ್ನೆಗಳಿಂದಲೂ ಜವುಳುಗಳಿಂದಲೂ ತುಂಬಿಹೋಗಿದೆ. ಅಲ್ಲಿ ಇತ್ತಲಾಗಿ ಪಾಯಿನ್ ವೃಕ್ಷಗಳನ್ನು ಹಚ್ಚಿ, ಭೂಮಿಯನ್ನು ಸುಧಾರಿಸುವ ಕೆಲಸವು ನಡೆದಿರುತ್ತದೆ. ಅಲ್ಲಿ ತುಸು ಹುಲ್ಲು ಬೆಳೆಯುತ್ತದೆ; ಮತ್ತು ಅದರ ಮೇಲೆ ಕುರಿಗಳನ್ನೂ ಹಂದಿಗಳನ್ನೂ ಸಾಕುತ್ತಾರೆ.

ಲೊಯರ ನದಿಯು ಮಧ್ಯ ತಪ್ಪಲಿನ ಮೇಲೆ ಉಗಮವಾಗಿ, ಆಮೇಲೆ ಬೈಲಿನೊಳಗಿಂದ ಹರಿಯುತ್ತ ಹೋಗುತ್ತದೆ. ಅದರ ದಂಡೆಯ ಮೇಲೆ ಗೋದಿಯ ಹೊಲಗಳೂ, ಹಣ್ಣುದೋಟಗಳೂ, ದ್ರಾಕ್ಷೆಯ ತೋಟಗಳೂ, ದೃಷ್ಟಿಗೆ ಬೀಳುತ್ತವೆ. ಈ ನದಿಯು ಮೇಲಿನಿಂದ ಹರಿದು ಬರುವ ರೇವೆಯಿಂದ ತುಂಬುವದರಿಂದ ಜಲಮಾರ್ಗಕ್ಕೆ ನಿರುಪಯೋಗವಾಗಿರುತ್ತದೆ. **ನಾಂಟೇಜ** ಪಟ್ಟಣದ ವರೆಗೆ ಪೂರ್ವಕಾಲದಲ್ಲಿ ಹಡಗಗಳು ಹೋಗುತ್ತಿದ್ದವು. ಇತ್ತಲಾಗಿ ಹೊಳೆಯ ಮುಖದ ಮೇಲಿರುವ **ಸೆಂಟನಾಝೆರ** ಎಂಬ ಬಂದರಕ್ಕೆ ಹೆಚ್ಚು ಮಹತ್ವವು ಪ್ರಾಪ್ತವಾಗಿರುತ್ತದೆ. **ಆರ್ಲೀನ್ಸ** ಪಟ್ಟಣದ ಸುತ್ತಮುತ್ತಲು ಬೆಳೆಯುವ ಕಾಯಿಪಲ್ಲೆಗಳೂ ಹಣ್ಣು ಹಂಪಲುಗಳೂ ಅಲ್ಲಿ ಕೂಡಿ ಹಾಕಲ್ಪಟ್ಟು ಅಲ್ಲಿಂದ ಪೆರೀಸಕ್ಕೆ ಕಳಿಸಲ್ಪಡುತ್ತವೆ.

**ಕಾರ್ಸಿಕಾ:**—ಈ ಗುಡ್ಡಗಾಡು ದ್ವೀಪದೊಳಗೆ ಗೋದಿ, ದ್ರಾಕ್ಷಿ, ಅಂಜೀರ, ಆಲಿವ್ಹ ಮುಂತಾದ ಹಣ್ಣುಗಳು ತಕ್ಕ ಮಟ್ಟಿಗೆ ಬೆಳೆಯುತ್ತವೆ. ಕರಾವಳಿಯ ಮೇಲೆ ಮೀನು ಹಿಡಿಯುವ ಉದ್ಯೋಗವೂ, ಹುಲ್ಲುಗಾವಲುಗಳ ಮೇಲೆ ಕುರಿಗಳನ್ನು ಸಾಕುವ ಉದ್ಯೋಗವೂ ನಡೆಯುತ್ತವೆ. ಈ ದ್ವೀಪದ ರಾಜಧಾನಿಯಾದ **ಅಜಾಸಿವೊ** ಎಂಬ ಪಟ್ಟಣದೊಳಗೆ ನೇಪೋಲಿಯನ್ ಬಾದಶಹನು ಹುಟ್ಟಿದ್ದನು.

**ಬರು-ಹೋಗುವ ಸಾಧನಗಳು:**—ಫ್ರಾನ್ಸದೊಳಗೆ ಬರುಹೋಗುವ ಉತ್ತಮವಾದ ಸಾಧನಗಳುಂಟು. ಮೂವತ್ತು ಸಾವಿರ ಮೈಲುಗಳಿಗಿಂತ ಹೆಚ್ಚಾದ ರೇಲುಮಾರ್ಗಗಳು ಇಡೀ ದೇಶದಲ್ಲಿ ಪಸರಿಸಿರುತ್ತವೆ. ಅದರಂತೆ ಮೇಲಾದ ಲೈನುದಾರಿಗಳಾದರೂ ದೇಶದಲ್ಲೆಲ್ಲ ಕಂಡುಬರುತ್ತವೆ. ಅದರಂತೆ ಹೊಳೆಗಳೂ, ಅವುಗಳಿಗೆ ಬಂದು ಕೂಡುವ ಉಪನದಿಗಳೂ, ಕಾಲುವೆಗಳಿಂದ ಒಂದಕ್ಕೊಂದು ಜೋಡಿಸಲ್ಪಟ್ಟಿರುತ್ತವೆ. ಈ ಸೌಕರ್ಯಗಳಿಂದ ವ್ಯಾಪಾರಕ್ಕೆ ಬಹಳ ಅನುಕೂಲವಾಗಿರುತ್ತದೆ. ಈಗ ಎಲ್ಲ ದೊಡ್ಡ ಶಹರುಗಳು ವಿಮಾನ ಮಾರ್ಗದಿಂದ ಜೋಡಿಸಲ್ಪಟ್ಟಿರುವವು. ಪರೀಸ ಪಟ್ಟಣವು ಜಾಗತಿಕ ವಿಮಾನ ಮಾರ್ಗದ ಕೇಂದ್ರವಾಗಿರುವದು.

## ೬ನೇ ಪ್ರಕರಣ

# ಇಟಲೀ

ಪ್ರಾಚೀನಕಾಲದಲ್ಲಿ ರೋಮನ್ ಸಾಮ್ರಾಜ್ಯಸತ್ತೆಯು ಇಡೀ ಯುರೋಪಖಂಡದಲ್ಲಿ ಪಸರಿಸಿತ್ತು. ಮತ್ತು ಅದರಿಂದಲೇ ಯುರೋಪ ಖಂಡದೊಳಗಿನ ಎಲ್ಲ ದೇಶಗಳು ಸುಧಾರಿಸಿದವು. ಅವುಗಳೊಳಗಿನ ಭಾಷೆ, ಕಾಯದೆ, ಧರ್ಮ, ರಾಜ್ಯಪದ್ಧತಿ ಮುಂತಾದವುಗಳ ಉಗಮವು ರೋಮನ್ ಸಾಮ್ರಾಜ್ಯದಲ್ಲಿಯೇ ಆದದ್ದು ಕಂಡುಬರುತ್ತದೆ. ಆದರೆ ಬರಬರುತ್ತ ಇಟಾಲಿಯನ್ ಜನರೊಳಗಿನ ಏಕರಾಷ್ಟ್ರೀಯತ್ವದ ಭಾವನೆಯು ಇಲ್ಲದಂತಾಗಿ, ಅವರ ಸಾಮ್ರಾಜ್ಯವು ಅಳಿದು ಹೋಗಿ, ದೇಶವೆಲ್ಲ ವಿಸ್ಕಳಿತವಾಯಿತು. ಹತ್ತೊಂಬತ್ತನೇ ಶತಮಾನದ ಮಧ್ಯದ ಸುಮಾರಕ್ಕೆ ಗ್ಯಾರೀಬಾಲ್ಡೀ ಎಂಬ ಮಹಾಪುರುಷನು ಈ ದೇಶಕ್ಕೆ ತಿರುಗಿ ಊರ್ಜಿತಾವಸ್ಥೆಯನ್ನು ತಂದುಕೊಟ್ಟನು. ಮತ್ತು ಮೊದಲನೇ (೧೯೧೪-೧೮) ಮಹಾಯುದ್ಧದ ನಂತರ ಮುಸೋಲಿನಿಯ ಕೈಕೆಳಗೆ ಈ ದೇಶವು ಎಲ್ಲ ಬಗೆಯಿಂದಲೂ ಮುಂದೆ ಬರಲಿಕ್ಕೆ ಪ್ರಯತ್ನ ನಡೆಸಿದ್ದಿತು. ಆದರೆ ಎರಡನೇ (೧೯೩೭-೪೬) ಮಹಾಯುದ್ಧದಲ್ಲಿ ಇಟಲೀ ದೇಶವು ಪರಾಭವ ಹೊಂದಿದ್ದರಿಂದ ದೇಶದ ಪ್ರಗತಿಯು ಕುಂಟಿತವಾಗಿರುವದು. ೧೯೪೬ ರ ವರೆಗೆ ಈ ದೇಶದಲ್ಲಿ ರಾಜನಿದ್ದನು. ಆದರೆ ಆ ಮೇಲೆ ದೇಶವು ಪ್ರಜಾಸತ್ತಾಕ (ರಿಪಬ್ಲಿಕ) ವಾಗಿದೆ. ಈಗ ಉಂಟಾದ ದೇಶದಲ್ಲಿಯ ಅಸ್ತವ್ಯಸ್ತತೆಯು ಪುನಃ ಸುಧಾರಿಸಹತ್ತಿರುವದು.

ಮೊಟ್ಟಮೊದಲು ಭಾರತ ಮತ್ತು ಇತರ ಪೌರ್ವಾತ್ಯ ದೇಶಗಳ ವ್ಯಾಪಾರವು ಯುರೋಪದ ಸಂಗಡ ವ್ಹೇನಿಸ್ ಮತ್ತು ಜಿನೋಆ ಬಂದರಗಳೊಳಗಿಂದ ಸಾಗುತ್ತಿತ್ತು. ಆದ್ದರಿಂದ ಇಟಲೀ ದೇಶಕ್ಕೆ ಹೆಚ್ಚು ಮಹತ್ವವು ಪ್ರಾಪ್ತವಾಗಿತ್ತು. ಆದರೆ ಆಫ್ರಿಕೆಯನ್ನು ಸುತ್ತುವರಿದು ಇತ್ತ ಕಡೆಗೆ ಬರುವ ಮಾರ್ಗದ ಶೋಧವಾದಂದಿನಿಂದ ಈ ಮಹತ್ವವು ಕಡಿಮೆಯಾಗುತ್ತ ಬಂತು. ಸುಏಝುದ ಕಾಲುವೆಯಾದಂದಿನಿಂದಲೂ, ಆಲ್ಪ್ಸ ಪರ್ವತದೊಳಗಿಂದ ರೇಲು ಮಾರ್ಗದ ಸಲುವಾಗಿ ಸುರಂಗ ಮಾರ್ಗಗಳನ್ನು ಮಾಡಿದ್ದರಿಂದಲೂ ಈ ದೇಶಕ್ಕೆ ಪುನಃ ಮಹತ್ವವು ಬರಲಾರಂಭಿಸಿದೆ.

ಈ ದೇಶದಲ್ಲಿ ಗುಡ್ಡಗಳ ಮೇಲಿಂದ ಹರಿದು ಬರುವ ಹೊಳೆಗಳ ಪ್ರವಾಹ ಗಳಿಂದ ವಿದ್ಯುತ್ತನ್ನು ಹುಟ್ಟಿಸಿ, ಅದರ ಶಕ್ತಿಯಿಂದ ಅನೇಕ ತರದ ಕಾರ ಖಾನೆಗಳು ಆರಂಭಿಸಲ್ಪಟ್ಟಿವೆ. ಅದರಂತೆ ಜವುಳು ಭೂಮಿಗಳನ್ನು ಸುಧಾರಿಸಿ ಒಕ್ಕಲತನವನ್ನು ಬೆಳಿಸಹತ್ತಿದ್ದಾರೆ. ಹೀಗೆ ಎಲ್ಲ ರೀತಿಯಿಂದಲೂ




ಇಟಲೀ—ಭೂರಚನೆಯೂ, ಪಟ್ಟಣಗಳೂ, ರೇಲುಮಾರ್ಗಗಳೂ

ಪ್ರಯತ್ನ ಮಾಡಿ ಯುರೋಪದೊಳಗೆ ಸುಧಾರಿಸಿದ ದೇಶಗಳೊಳಗೆ ತಾನೂ ಎಣಿಸಲ್ಪಡಬೇಕೆಂದು ಈ ದೇಶವು ಸಿದ್ಧತೆಯನ್ನು ನಡೆಸಿರುತ್ತದೆ.

ಯುರೋಪಖಂಡದ ಪಶ್ಚಿಮದಲ್ಲಿ ಮೂರು ದ್ವೀಪಕಲ್ಪಗಳು ಕಂಡುಬರುತ್ತವೆ. ಅವುಗಳೊಳಗಿನ ಇಟಲೀ ದೇಶವು ನಡುವಿನ ದ್ವೀಪಕಲ್ಪವಾಗಿರುತ್ತದೆ. ಇದರಿಂದ ಭೂಮಧ್ಯ ಸಮುದ್ರದೊಳಗೆ ಎರಡು ಭಾಗಗಳಾಗಿರುತ್ತವೆ. ಇದರ ಈ ಮಧ್ಯದಲ್ಲಿರುವ ಸ್ಥಾನವು ಬಹು ಮಹತ್ವದ್ದಾಗಿರುತ್ತದೆ. ಈ ದ್ವೀಪಕಲ್ಪವು ಒಂದಾನೊಂದು ಕಾಲಕ್ಕೆ ಆಫ್ರಿಕೆಯ ಉತ್ತರದ ದಂಡೆಗೆ ಹೊಂದಿಕೊಂಡಿದ್ದಂತೆ ಕಾಣುತ್ತದೆ.

ಈ ದೇಶದೊಳಗೆ ಮೂರು ನೈಸರ್ಗಿಕ ವಿಭಾಗಗಳಿರುತ್ತವೆ. (೧) ಆಲ್ಪ್ಸ ಪರ್ವತದ ಇಳುಕಲಿನ ಪ್ರದೇಶ, (೨) ಲೋಂಬಾರ್ಡಿಯ ಬೈಲು ಸೀಮೆ, ಮತ್ತು (೩) ದಕ್ಷಿಣದ ಕಡೆಯ ದ್ವೀಪಕಲ್ಪದ ಭಾಗ.

**(೧) ಆಲ್ಪ್ಸದ ಇಳುಕಲಿನ ಪ್ರದೇಶ:**—ಆಲ್ಪ್ಸ ಪರ್ವತವು ಎತ್ತರವಾಗಿದ್ದರೂ, ಅದು ಹಿಮಾಲಯದಷ್ಟು ಉನ್ನತವಾಗಿರುವದಿಲ್ಲ. ಆದ್ದರಿಂದ ಹೊಳೆಗಳ ಕೊಳ್ಳಗಳಗುಂಟಲೂ, ಕಣಿವೆಗಳಗುಂಟಲೂ ಓಡಾಡಲಿಕ್ಕೆ ಅನುವಾಗಿರುತ್ತದೆ. ಈ ಮಾರ್ಗಗಳಿಂದ ಫ್ರಾನ್ಸ, ಸ್ವಿತ್ಝರ್ಲಂಡ, ಮತ್ತು ಜರ್ಮನೀ ದೇಶಗಳಿಗೆ ಹೋಗಲಿಕ್ಕೆ ಬರುತ್ತದೆ. ಇವುಗಳಲ್ಲಿ ಬ್ರೇನರ್ ಎಂಬ ಕಣಿವೆಯ ಮಾರ್ಗವು ಎಲ್ಲಕ್ಕೂ ಕಡಿಮೆ ಎತ್ತರದ ಮೇಲಿಂದ ಹೋಗುತ್ತದೆ. ಮತ್ತು ಈ ಮಾರ್ಗವು ಬಹು ಪ್ರಾಚೀನ ಕಾಲದಿಂದ ಉಪಯೋಗಿಸಲ್ಪಡುತ್ತಿರುತ್ತದೆ. ಭಾರತದಿಂದ ಮಸಾಲೆಯ ಸಾಮಾನು, ರೇಶಿಮೆ ಮತ್ತು ಬೇರೆ ಬೇರೆ ತರದ ಮೇಲಾದ ವಸ್ತ್ರಗಳೂ, ಬಂಗಾರ, ರತ್ನ ಮುಂತಾದ ಪದಾರ್ಥಗಳೂ ವ್ಹೇನಿಸ್ ಪಟ್ಟಣದ ಮೇಲಿಂದ ಇದೇ ಮಾರ್ಗವಾಗಿ ಯುರೋಪಕ್ಕೆ ಹೋಗುತ್ತಿದ್ದವು. ಸದ್ಯಕ್ಕೆ ಜರ್ಮನೀಗೆ ಹೋಗುವ ಮುಖ್ಯವಾದ ರೇಲುಮಾರ್ಗವು ಇದೇ ಕಣಿವೆಯೊಳಗಿಂದ ಹೋಗಿರುತ್ತದೆ. ಆಲ್ಪ್ಸ ಪರ್ವತದೊಳಗಿಂದ ಒಟ್ಟಿಗೆ ಆರು ರೇಲು ಮಾರ್ಗಗಳು ಹೋಗಿರುತ್ತವೆ. ಆದ್ದರಿಂದ ಲೋಂಬಾರ್ಡಿ ಬೈಲಿನೊಳಗಿರುವ ಮಿಲನ್, ಟ್ಯೂರಿನ್ ಮುಂತಾದ ಪಟ್ಟಣಗಳು ಬಹಳ ಮಹತ್ವವನ್ನು ಪಡೆದಿರುತ್ತವೆ.

ಆಲ್ಪ್ಸದ ಇಳುಕಲಿನ ಅಡಿಯಲ್ಲಿ ಜನವಸತಿಯು ಆಗಿರುತ್ತದೆ. ಈ ಪರ್ವತದಿಂದ ಹರಿಯುವ ಹಲವು ನದಿಗಳನ್ನು ಕಟ್ಟಿದ್ದರಿಂದ ಗಾರ್ಡಿಕೋಮೊ, ಮಾಗಿಓರೆಗಳಂಥ ರಮಣೀಯವಾದ ಸರೋವರಗಳು ನಿರ್ಮಾಣವಾಗಿರುತ್ತವೆ. ಅವುಗಳನ್ನು ನೋಡಲಿಕ್ಕೆ ಸಾವಿರಾರು ಪ್ರವಾಸಿಕರು ಇಲ್ಲಿ ಬರುತ್ತಾರೆ. ಅವರ ಸಲುವಾಗಿ ಹಾಟೆಲಗಳನ್ನು ಇಟ್ಟು, ಇಲ್ಲವೆ ಅವರಿಗೆ ಬೇರೆ ತರದ ಸೌಕರ್ಯಗಳನ್ನು ಒದಗಿಸಿಕೊಟ್ಟು, ತಮ್ಮ ಉಪಜೀವಿಕೆಯನ್ನು ಇಲ್ಲಿಯ ಜನರು ಸಾಗಿಸುತ್ತಾರೆ.

ಉತ್ತರದ ಕಡೆಯಿಂದ ಬರುವ ಶೀತ ಗಾಳಿಗಳು ಆಲ್ಪ್ಸ ಪರ್ವತಗಳಿಂದ ತಡೆಯಲ್ಪಡುತ್ತವೆ. ಈ ಶೀತ ಗಾಳಿಗಳು ತಡೆಯಲ್ಪಟ್ಟಿದ್ದರಿಂದ ಪರ್ವತದ ಈ ಮಗ್ಗಲಿಗೆ ಆಲಿವ್ಹ, ಕಿತ್ತಳಿ, ನಿಂಬೆಹಣ್ಣು ಮತ್ತು ದ್ರಾಕ್ಷಿಗಳ ದೊಡ್ಡ ದೊಡ್ಡ ತೋಟಗಳನ್ನು ಕಟ್ಟಲು ಶಕ್ಯವಾಗಿರುವದು. ತುತ್ತೀಗಿಡಗಳಿಗಾದರೂ ಈ ಭಾಗವು ಪೋಷಕವಾಗಿರುತ್ತದೆ. ಈ ಗಿಡಗಳ ಮೇಲೆ ರೇಶಿಮೆಯ ಹುಳಗಳನ್ನು ಸಾಕಿ ಎಷ್ಟೋ ಜನರು ರೇಶಿಮೆಯನ್ನು ತಯಾರಿಸುತ್ತಾರೆ. ಈ ದಕ್ಷಿಣದ ಇಳುಕಲಿನ ಮೇಲೆ ಹುಲ್ಲುಗಾವಲುಗಳಾದರೂ ಇರುತ್ತವೆ. ಅಲ್ಲಿ ಜನರು ದನಗಳನ್ನೂ ಕುರಿಗಳನ್ನೂ ಸಾಕುತ್ತಾರೆ. ಇಮಾರತಿಯ ಕಟ್ಟಿಗೆಯಾದರೂ ಇಲ್ಲಿ ತಕ್ಕಮಟ್ಟಿಗೆ ಸಿಗುತ್ತದೆ. ಖಣಿಗಳಿಂದ ಕಬ್ಬಿಣವಾದರೂ ಹೊರಡುತ್ತದೆ. ಕಲ್ಲಿದ್ದಲಿಯು ಸಿಗದ್ದರಿಂದ ಇಲ್ಲಿಯ ಕಾರಖಾನೆಗಳಲ್ಲಿ ವಿದ್ಯುಚ್ಛಕ್ತಿಯನ್ನು ಉಪಯೋಗಿಸುತ್ತಾರೆ.

**(೨) ಲೋಂಬಾರ್ಡಿಯ ಬೈಲು** :-ಇಲ್ಲಿ ಪೂರ್ವಕಾಲದಲ್ಲಿ ಸಮುದ್ರವಿತ್ತು. ಅದರೊಳಗೆ ಪೋ ಮತ್ತು ಬೇರೆ ಸಣ್ಣ ಸಣ್ಣ ಹೊಳೆಗಳು ಪರ್ವತದ ಮೇಲಿಂದ ಹರಿದು ಬರುವಾಗ ಸಂಗಡ ರೇವೆಯನ್ನು ತಂದು ಚಲ್ಲುತ್ತವೆ; ಆದ್ದರಿಂದ ಸಾವಿರಾರು ವರ್ಷಗಳ ಮೇಲೆ ಈ ಫಲವತ್ತಾದ ಬೈಲು ಪ್ರದೇಶವು ನಿರ್ಮಾಣವಾಯಿತು. ಅದು ಇಂದಿಗೂ ಪ್ರತಿವರ್ಷ ಬೆಳೆಯುತ್ತಿರುತ್ತದೆ.

ಪೋ ಹೊಳೆಯೂ ಆದರ ಉಪನದಿಗಳೂ ತಮ್ಮ ಸಂಗಡ ಬಹಳ ರೇವೆಯನ್ನು ತರುವದರಿಂದ, ಪೋ ಹೊಳೆಯ ಪಾತ್ರವು ಬದಿಗಿರುವ ಭೂಮಿಗಿಂತ ಹೆಚ್ಚು ಎತ್ತರವಾಗಿರುತ್ತದೆ. ಹೊಳೆಯ ಎರಡೂ ಮಗ್ಗಲಿಗಿರುವ ಬೈಲಿನಲ್ಲಿ ಮಹಾಪೂರದ ನೀರು ಹೋಗಿ ಬೆಳೆಗಳು ನಾಶವಾಗಬಾರದೆಂದು ವಿಸ್ತೀರ್ಣ

ವಾದ ದೊಡ್ಡ ದೊಡ್ಡ ಒಡ್ಡುಗಳನ್ನು ಹಾಕಿರುತ್ತಾರೆ. ಅವುಗಳನ್ನು ಚೊಕ್ಕಾಗಿಟ್ಟು ಯಾವಾಗಲೂ ಅವುಗಳ ಮೇಲೆ ಲಕ್ಷವಿಡಬೇಕಾಗುತ್ತದೆ.

ಆದರೆ ಈ ಬೈಲು ರೇವೆಯಿಂದುಂಟಾಗಿರುವದರಿಂದ ಇಲ್ಲಿಯ ಭೂಮಿಯು ಕಸುವುಳ್ಳದ್ದೂ ಪೊಳ್ಳಾದದ್ದೂ ಆಗಿರುತ್ತದೆ. ಅಲ್ಲಿ ಬೇಸಿಗೆಯಲ್ಲಿ




ಇಟಲೀ—ಹುಟ್ಟುವಳಿಗಳು

ಸಾಕಷ್ಟು ಉಷ್ಣತಾಮಾನವು ಇರುತ್ತದೆ. ಆದರೆ ಕಾಳು ಬೆಳೆಯಲಿಕ್ಕೆ ಸಾಕಷ್ಟು ಮಳೆಯಾಗುವದಿಲ್ಲ. ಆದ್ದರಿಂದ ಕಾಲುವೆಗಳಿಂದ ನೀರಿನ ಪೂರೈಕೆ

ಯನ್ನು ಮಾಡಬೇಕಾಗುತ್ತದೆ. ಅಕ್ಕಿ, ಗೋವಿನ ಜೋಳ, ಗೋದಿ, ದ್ರಾಕ್ಷಿ, ಪುಂಡಿ, ತುತ್ತೀ ಮತ್ತು ತುಸುಮಟ್ಟಿಗೆ ಹತ್ತಿಯ ಬೆಳೆಗಳನ್ನು ತೆಗೆಯುತ್ತಾರೆ. ಗೋವಿನಜೋಳ ಮತ್ತು ಅಕ್ಕಿ ಇವು ಜನರ ಮುಖ್ಯವಾದ ಆಹಾರವಾಗಿ ರುತ್ತವೆ. ಗೋದಿಯಿಂದ ಮೆಕರೋನೀ ಎಂಬ ಖಾದ್ಯ ಪದಾರ್ಥವನ್ನು ತಯಾರಿಸುತ್ತಾರೆ. ತುತ್ತೀಗಿಡಗಳ ಮೇಲೆ ರೇಶಿಮೆಯ ಉದ್ಯೋಗವು ನಡೆಯುತ್ತದೆ. ಈ ಭಾಗದೊಳಗೆ ತುಸು ಹುಲ್ಲುಗಾವಲುಗಳಾದರೂ ಇರುತ್ತವೆ. ಅವುಗಳ ಮೇಲೆ ಹೈನಿನ ದನಗಳನ್ನು ಸಾಕಿ ಅವುಗಳಿಂದ ಬೆಣ್ಣೆ ಮತ್ತು ಚೀಜ ಮುಂತಾದ ಪದಾರ್ಥಗಳನ್ನು ತಯಾರಿಸುತ್ತಾರೆ.

ಈ ಬೈಲಿನಲ್ಲಿ ಕಾರಖಾನೆಗಳಾದರೂ ಸ್ಥಾಪಿಸಲ್ಪಟ್ಟಿರುತ್ತವೆ. ನೆರೆಯಲ್ಲಿದ್ದ ಫ್ರೆಂಚ ಮತ್ತು ಸ್ವಿಸ್ ಜನರಂತೆ ಇಲ್ಲಿಯ ಜನರಾದರೂ ಉದ್ಯೋಗಿಗಳಾಗಿರುತ್ತಾರೆ. ಜನವಸತಿಯು ದಟ್ಟಾಗಿರುವದರಿಂದ, ಕೂಲಿಯು ಅಗ್ಗವಾಗಿದ್ದು ವಿದ್ಯುಚ್ಛಕ್ತಿಯಾದರೂ ಅಗ್ಗವಾಗಿ ಸಿಗುತ್ತದೆ. ಮಿಲನ್ ಪಟ್ಟಣದೊಳಗೆ ನೂಲು, ಉಣ್ಣೆ ಮತ್ತು ರೇಶಿಮೆಯನ್ನು ತಯಾರಿಸುವ ದೊಡ್ಡ ದೊಡ್ಡ ಕಾರಖಾನೆಗಳಿರುತ್ತವೆ. ಇಲ್ಲಿ ಹುಟ್ಟುವ ರೇಶಿಮೆಯು ಇಲ್ಲಿಯ ಕಾರಖಾನೆಗಳಿಗೆ ಸಾಕಾಗದ್ದರಿಂದ ಹೆಚ್ಚಾಗಿ ಬೇಕಾಗುವ ರೇಶಿಮೆಯನ್ನು ಪರದೇಶಗಳಿಂದ ತರಸಿಕೊಳ್ಳುತ್ತಾರೆ. **ಟ್ಯೂರಿನ್** ಎಂಬ ಪಟ್ಟಣದೊಳಗೆ ಕಬ್ಬಿಣ-ಉಕ್ಕುಗಳ ಸರಕುಗಳನ್ನೂ ಮೋಟಾರು-ಯಂತ್ರಗಳನ್ನೂ ತಯಾರಿಸುವ ಕಾರಖಾನೆಗಳಿರುತ್ತವೆ. ಫಿಯಾಟ ಕಂಪನಿಯ ಮೋಟಾರುಗಳೂ ವಿಮಾನಗಳೂ ಇಲ್ಲಿ ತಯಾರಾಗುತ್ತವೆ. ಆದರೆ ಅದಕ್ಕೆ ಬೇಕಾಗುವ ಕಬ್ಬಿಣವನ್ನು ಹೆಚ್ಚಾಗಿ ಆಮದು ಮಾಡಬೇಕಾಗುತ್ತದೆ. ವ್ಹೇನಿಸ್ ಮತ್ತು ಟ್ರೀಸ್ಟಿ ಎಂಬಲ್ಲಿ ಹಡಗುಗಳನ್ನು ಕಟ್ಟುವ ಕಾರಖಾನೆಗಳಿರುತ್ತವೆ.

**ಮಿಲನ್:**—ಈ ಪಟ್ಟಣವು ನಟ್ಟನಡುವೆ ಇದ್ದದರಿಂದ ಅದು ರೇಲು ಮಾರ್ಗಗಳ ಕೇಂದ್ರವಾಗಿರುತ್ತದೆ. ಅಲ್ಲಿಯ ದೇವಾಲಯವು ಭವ್ಯವಾದದ್ದೂ, ಪ್ರೇಕ್ಷಣೀಯವಾದದ್ದೂ ಆಗಿರುತ್ತದೆ. **ವ್ಹೇನಿಸ್** ಎಂಬ ಪಟ್ಟಣವು ಪ್ರಾಚೀನ ಕಾಲದಿಂದ ವ್ಯಾಪಾರದ ಸಲುವಾಗಿ ಪ್ರಸಿದ್ಧವಾಗಿದ್ದು, ಅದು ಹಲವು ನಡುಗಡ್ಡೆಗಳ ಮೇಲೆ ಕೂಡಿ ನೆಲಿಸಿರುತ್ತದೆ. ಅದರೊಳಗಿನ ಓಡಾಟವು ಲೈನುದಾರಿಗಳ ಬದಲು ಕಾಲುವೆಗಳಿಂದ ಸಾಗುತ್ತದೆ. ಇಲ್ಲಿ ತಯಾರಾಗುವ ಜರದ ಸಾಮಾನುಗಳೂ, ಕಲಾಕುಸರಿನ ಕಾಚಿನ ಸಾಮಾನುಗಳೂ ಪ್ರಸಿದ್ಧ

ವಾಗಿರುತ್ತವೆ. ಅದರಂತೆ ಇಲ್ಲಿಯ ಪುರಾತನ ಕಾಲದ ಅರಮನೆಗಳೂ ಪ್ರಾರ್ಥನಾಮಂದಿರಗಳೂ ನೋಡತಕ್ಕಂಥವಿರುತ್ತವೆ.

ಪೋ ಹೊಳೆಯ ಕೊಳ್ಳದೊಳಗಿನ ಸರಕುಗಳು ವ್ಹೇನಿಸ್ ಮತ್ತು **ಜಿನೋಆ** ಎಂಬ ಬಂದರಗಳಿಂದ ಹೋಗುತ್ತವೆ. ಆಲ್ಪ್ಸ ಪರ್ವತ ದೊಳಗೆ ಗವಿಯನ್ನು ಸರಿದು ರೇಲುಮಾರ್ಗವನ್ನು ಮಾಡಿದಂದಿನಿಂದ ಜಿನೋಆ ಬಂದರದ ಮಹತ್ವವು ಹೆಚ್ಚಾಗಿರುತ್ತದೆ. ಸ್ವಿತ್ಝರ್ಲಂಡ ಮತ್ತು ದಕ್ಷಿಣ ಜರ್ಮನಿಗಳೊಳಗಿಂದ ರಫ್ತಾಗುವ ಸರಕುಗಳು ಈ ಬಂದರದ ಮಾರ್ಗವಾಗಿ ರವಾನಿಸಲ್ಪಡುವದು. ನೂಲಿನ ಗಿರಣಿಗಳೂ, ಹಡಗುಗಳನ್ನು ಕಟ್ಟುವ ಕಾರಖಾನೆಗಳೂ ಅದರಂತೆ ಆಲಿವ್ಹ ಎಣ್ಣೆಯಿಂದ ಸಾಬಣಗಳನ್ನು ಮತ್ತು ಕಬ್ಬಿಣದ ಸರಕುಗಳನ್ನು ಮಾಡುವ ಕಾರಖಾನೆಗಳೂ ಇಲ್ಲಿ ಇರುತ್ತವೆ.

ಫ್ರಾನ್ಸದ ಆಗ್ನೇಯ ದಿಕ್ಕಿಗೂ ಇಟಲಿಯ ವಾಯುವ್ಯದ ಮೂಲೆಯ ಲ್ಲಿಯೂ ಕರಾವಳಿಯ ಮೇಲೆ ಅತಿ ರಮಣೀಯವಾದ ಮತ್ತು ಉತ್ತಮ ವಾದ ಹವೆಯುಳ್ಳ ಕಿರಿಯುಗಲಾದ ಪಟ್ಟಿಯುಂಟು. ಅದಕ್ಕೆ **ರಿವ್ಹಿಏರಾ** ಎಂದೆನ್ನುತ್ತಾರೆ. ಇದರ ಹಿಮ್ಮಗ್ಗಲಿಗೆ ಆಲ್ಪ್ಸ ಪರ್ವತದ ಇಳುಕಲು ಇರುತ್ತದೆ. ಅದರ ಮೇಲಿನ ಹವೆಯು ಉತ್ತಮವಾಗಿರುವದಲ್ಲದೆ ಸೂರ್ಯ ಪ್ರಕಾಶವಾದರೂ ಸಾಕಷ್ಟು ಬೀಳುತ್ತದೆ. ಆದ್ದರಿಂದ ಅಲ್ಲಿ ಸುಂದರವಾದ ತೋಟಗಳು ಕಂಡುಬರುತ್ತವೆ. ಅದರಂತೆ ಪಾವಟಿಗೆಗಳಂತೆ ತೋಟಗಳನ್ನು ಮಾಡಿ ಅವುಗಳೊಳಗೆ ದ್ರಾಕ್ಷೆ, ತುತ್ತೀ, ಆಲಿವ್ಹ, ಕಿತ್ತಳೆ, ನಿಂಬೆ ಮುಂತಾ ದವುಗಳನ್ನು ಹಚ್ಚಿ ಬೆಳೆಯಿಸುತ್ತಾರೆ. ಇಲ್ಲಿಯ ರಮಣೀಯವಾದ ತೋಟ ಗಳ ಸಲುವಾಗಿಯೂ, ಚಳಿಗಾಲದೊಳಗಿನ ಸೌಮ್ಯ ಹವೆಯ ಸಲುವಾಗಿಯೂ ಎಷ್ಟೋ ಜನರು ಇಲ್ಲಿ ಬಂದು ನಿಲ್ಲುತ್ತಾರೆ.

**(೩) ದ್ವೀಪಕಲ್ಪದ ಪ್ರದೇಶವು:**—ದಕ್ಷಿಣದ ಕಡೆಗಿರುವ ಈ ಪ್ರದೇಶ ದೊಳಗಿಂದ ಅಪಿನಾಯಿನ್ಸ ಪರ್ವತಾವಳಿಯು ಹಾಯ್ದುದ್ದರಿಂದ, ಈ ಭಾಗವೆಲ್ಲ ಬಹುತರವಾಗಿ ಗುಡ್ಡಗಾಡು ಇರುತ್ತದೆ. ಆರ್ನೊ ಮತ್ತು ಟಾಯಬರ್ ಹೊಳೆಗಳ ದಂಡೆಗಳ ಮೇಲೆ ಮಾತ್ರ ಫಲವತ್ತಾದ ಸಣ್ಣ ಸಣ್ಣ ಬೈಲುಗಳಿರು ತ್ತವೆ. ಅಪಿನಾಯಿನ್ಸ ಪರ್ವತದ ದಕ್ಷಿಣಭಾಗವೂ, ಸಿಸಿಲೀ, ಸಾರ್ಡಿನಿಯಾ

ಮತ್ತು ಎಲ್ಬಾ ದ್ವೀಪಗಳೂ ಕೂಡಿ ಆದ ಒಂದು ಪರ್ವತದ ಸಾಲು ಇತ್ತು. ಅದರ ಮೇಲೆ ಎಷ್ಟೋ ಜ್ವಾಲಾಮುಖಿಗಳಿದ್ದವು. ಅವುಗಳೊಳಗಿಂದ ಹೊರ ಹೊರಟ ಶಿಲಾರಸದಿಂದ ಹುಟ್ಟಿದ ಮಣ್ಣು ಬಹು ಫಲವತ್ತಾಗಿರುತ್ತದೆ. ಆದರೆ ಕರಾವಳಿಯ ಹತ್ತರದ ತಗ್ಗು ಪ್ರದೇಶವು ಗುಡ್ಡಗಳ ಮೇಲಿಂದ ಹರಿದು ಬರುವ ಹಳ್ಳಗಳಿಂದಾದ ಜವುಳಗಳಿಂದ ತುಂಬಿ ಹೋಗಿದೆ. ಅಲ್ಲಿಯ ಹವೆಯು ಸಹ ಅನಾರೋಗ್ಯಕರವಾಗಿರುವದು. ಆದರೆ ಈ ಪರಿಸ್ಥಿತಿಯನ್ನು ಬದಲು ಮಾಡುವ ಪ್ರಯತ್ನವು ಈಗ ಭರದಿಂದ ಸಾಗಿದೆ.

ಲೋಂಬಾರ್ಡಿಯ ಬೈಲಿನಲ್ಲಿಯ ಹವೆಯು ವಿಷಮವಾಗಿದ್ದು, ಅಲ್ಲಿ ಬೇಸಿಗೆಯಲ್ಲಿ ಮಳೆಯಾಗುತ್ತದೆ. ಮತ್ತು ಚಳಿಗಾಲವಾದರೂ ಬಹು ಶೀತ ವಾಗಿರುತ್ತದೆ; ಆದರೆ ದ್ವೀಪಕಲ್ಪದ ಭಾಗದೊಳಗೆ ಭೂಮಧ್ಯ ಸಮುದ್ರದ ದಂಡೆಯ ಮೇಲೆ ಕಂಡು ಬರುವ ವಿಶಿಷ್ಟವಾದ ಹವೆಯು ಕಂಡುಬರುತ್ತದೆ. ಅಂದರೆ ಅಲ್ಲಿ ಬೇಸಿಗೆಯು ಉಷ್ಣವಾದದ್ದೂ, ಒಣದಾದದ್ದೂ ಇರುತ್ತದೆ. ಮತ್ತು ಚಳಿಗಾಲವು ಬೆಚ್ಚಗಾಗಿರುವದಲ್ಲದೆ ಆಗ ಅಲ್ಲಿ ಮಳೆಯಾಗುತ್ತದೆ. ಈ ಭಾಗದೊಳಗಿನ ಜನವಸತಿಯು ಉತ್ತರದ ಕಡೆಗಿರುವ ಬೈಲಿನೊಳಗಿನ ಜನವಸತಿಗಿಂತ ಕಡಿಮೆಯಾಗಿರುತ್ತದೆ. ಮತ್ತು ಜನರಾದರೂ ಬಡವರೂ, ಅಜ್ಞಾನಿಗಳೂ ಆಗಿರುತ್ತಾರೆ. ಅವರೊಳಗೆ ಅನೇಕ ಜನರು ಬ್ರಾಝೀಲ, ಅರ್ಜೆಂಟಿನಾ ಮುಂತಾದ ದೇಶದೊಳಗೆ ಇರಲಿಕ್ಕೆ ಹೋಗುತ್ತಾರೆ. ಇಲ್ಲವೆ, ನೆರೆಯಲ್ಲಿರುವ ಫ್ರಾನ್ಸ, ಸ್ವಿಝರ್ಲಂಡ ಮುಂತಾದ ದೇಶಗಳಿಗೆ ಕೂಲಿ-ಕುಂಬಳಿ ಮಾಡಲಿಕ್ಕೆ ಹೋಗುತ್ತಾರೆ.

ಈ ಭಾಗದೊಳಗಿನ ಗುಡ್ಡಗಳ ಇಳುಕಲುಗಳ ಮೇಲೆ ದ್ರಾಕ್ಷೆ, ಆಲಿವ್ಹ ಗಳನ್ನು ಬೆಳೆಯುತ್ತಾರೆ. ಸಪಾಟಾದ ಪ್ರದೇಶದೊಳಗೆ ಗೋದಿಯು ಬೆಳೆಯು ತ್ತದೆ. ಬೇಸಿಗೆಯು ಒಣದಾಗಿರುವದರಿಂದ ಈ ಗುಡ್ಡಗಳ ಮೇಲೆ ಹುಲ್ಲು ಕಡಿಮೆ ಇರುತ್ತದೆ. ಆದರೂ ಅದರ ಮೇಲೆ ಕುರಿಗಳನ್ನು ಸಾಕುತ್ತಾರೆ. ಹತ್ತರದಲ್ಲಿರುವ ದ್ವೀಪಗಳಿಂದ ಕಬ್ಬಿಣವನ್ನು ತಂದು ಅದರಿಂದ ಕಬ್ಬಿಣದ ಸರಕುಗಳನ್ನು ತಯಾರಿಸುವ ಕಾರಖಾನೆಗಳು ಆರಂಭಿಸಲ್ಪಟ್ಟಿವೆ. ಕರಾವ ಳಿಯ ಮೇಲೆ ಮೀನು ಹಿಡಿಯುವ ಉದ್ಯೋಗವು ಸಾಗುತ್ತದೆ.

ಆರ್ನೋ ಹೊಳೆಯ ದಡದಲ್ಲಿರುವ **ಫ್ಲಾರೆನ್ಸ** ಎಂಬ ಪಟ್ಟಣವು ಪ್ರಾಚೀನ ಕಾಲದಿಂದ ವಿದ್ಯೆ-ಕಲೆಗಳ ಆಗರವಾಗಿರುತ್ತದೆ. ಅಲ್ಲಿ ಎಷ್ಟೋ

ಜನ ಮೂರ್ತಿಕಾರರೂ, ಕವಿಗಳೂ, ಚಿತ್ರಕಾರರೂ ಆಗಿ ಹೋದರು. ಹತ್ತಿರದಲ್ಲಿಯೇ ಕರಾರಾ ಎಂಬಲ್ಲಿ ಮೇಲಾದ ಸಂಗಮರವರೀ ಕಲ್ಲು ಸಿಗುತ್ತದೆ. ಆರ್ನೊ ನದಿಯ ಮುಖದ ಮೇಲಿನ **ಪೀಸಾ** ಎಂಬ ಪಟ್ಟಣವು ಅಲ್ಲಿಯ ಒಲಿದ ಗೋಪುರದ ಸಲುವಾಗಿ ಪ್ರಸಿದ್ಧವಿರುತ್ತದೆ. ಟಾಯಬರ್ ನದಿಯ ದಂಡೆಯ ಮೇಲೆ ಇಲ್ಲಿಯ ರಾಜಧಾನಿಯಾದ **ರೋಮ** ಎಂಬ ಪಟ್ಟಣವಿರುತ್ತದೆ. ಇಲ್ಲಿ ರೋಮನ್ ಕಥಾಲಿಕ್ ಧರ್ಮಪಂಥದ ಮುಖ್ಯ ಗುರುಗಳಾದ ಪೋಪನು ಇರುತ್ತಾನೆ. **ನೇಪಲ್ಸ** ಎಂಬ ಸುಂದರವಾದ ಪಟ್ಟಣವು ವ್ಹೆಸುವಿಯಸ್ ಎಂಬ ಹೆಸರಿನ ಜ್ವಾಲಾಮುಖಿ ಪರ್ವತದ ಅಡಿಯಲ್ಲಿ ರಮಣೀಯ



ರೋಮ ENIT.

ವಾದ ಒಂದು ಉಪಸಾಗರದ ಮೇಲೆ ಇರುತ್ತದೆ. ಇತ್ತಲಾಗಿ ಇಲ್ಲಿ ವಿದ್ಯುಚ್ಛಕ್ತಿಯ ಸಹಾಯದಿಂದ ಎಷ್ಟೋ ಕಾರಖಾನೆಗಳು ನಡೆದಿರುತ್ತವೆ. ಪೂರ್ವ ಕರಾವಳಿಯ ಮೇಲಿರುವ **ಬ್ರಿಂಡೀಸೀ** ಎಂಬ ಬಂದರವು ತೀರ ಸಮೀಪವಾಗಿರುತ್ತದೆ. ಇಲ್ಲಿಂದ **ಬೋಲೋನಾ** ಪಟ್ಟಣದ ಮೇಲಿಂದ ಸಿಂಪ್ಲನ್ ಎಂಬ ಸುರಂಗ ಮಾರ್ಗದಿಂದ ಉತ್ತರ ಯುರೋಪಕ್ಕೆ ರೇಲಿನಿಂದ ಹೋಗಲು ಅನುಕೂಲವಾಗಿರುತ್ತದೆ.

**ವ್ಯಾಪಾರವೂ ಬರುಹೋಗುವ ಸಾಧನಗಳೂ :**—ಇಟಲೀ ದೇಶ ದೊಳಗೆ ಭಾರತದಂತೆ ದಿನ ದಿನಕ್ಕೆ ಹೆಚ್ಚಿಚ್ಚು ಪ್ರಮಾಣದಲ್ಲಿ ಧಾನ್ಯವನ್ನು ಬೆಳೆಸುತ್ತಿದ್ದರೂ, ಅದು ಅಲ್ಲಿಯ ಜನರಿಗೆ ಸಾಕಾಗುವದಿಲ್ಲ. ಆದ್ದರಿಂದ ಹೆಚ್ಚಿಗೆ ಬೇಕಾಗುವ ಧಾನ್ಯವನ್ನು ಹೊರಗಿನಿಂದ ಆಮದು ಮಾಡಬೇಕಾ ಗುತ್ತದೆ. ಕಾರಖಾನೆಗಳು ಬೆಳೆದದ್ದರಿಂದ ಕಚ್ಚಾಮಾಲನ್ನು ಸಹ ಹೊರಗಿ ನಿಂದ ತರಬೇಕಾಗುತ್ತದೆ. ಆಲಿವ್ಹ ಎಣ್ಣಿ, ಹಣ್ಣು, ಸರಾಯಿ, ಗಂಧಕ, ಹುಲ್ಲಿನ ಟೊಪ್ಪಿಗೆ, ಸಂಗಮರವರೀ ಕಲ್ಲು, ಮೋಟರು ಮುಂತಾದ ಪದಾರ್ಥ ಗಳು ಇಲ್ಲಿ ತಯಾರಾಗುತ್ತವೆ. ಆದರೂ ಗೋದಿ, ಕಲ್ಲಿದ್ದಲಿ, ರೇಶಿಮೆ, ತಂಬಾಕ ಮುಂತಾದ ಪದಾರ್ಥಗಳು ಈ ದೇಶದೊಳಗೆ ಆಮದು ಆಗುತ್ತವೆ.




ಇಟಲೀ ದೇಶದೊಳಗೆ ರೇಲು ಮಾರ್ಗಗಳು ನೋಡಿದತ್ತೆಲ್ಲ ಆಗಿರು ತ್ತವೆ. ಆಲ್ಪ್ಸ ಪರ್ವತವನ್ನು ದಾಟಿ ಹೋಗುವದಕ್ಕೆ ರೇಲು ತಯಾರಾದಂ ದಿನಿಂದ ಈ ದೇಶದೊಳಗಿನ ಓಡಾಟವೂ ಬರುಹೋಗುವ ಮಾರ್ಗಗಳೂ ಬಹಳವಾಗಿ ಬೆಳೆದಿರುತ್ತವೆ. ಲೋಂಬಾರ್ಡಿಯ ಬೈಲಿನೊಳಗೆ ರೇಲುಗಳ ಜಾಳಿಗೆಯಾದದ್ದು ಕಂಡುಬರುತ್ತದೆ. ದಕ್ಷಿಣ ಭಾಗದೊಳಗೆ ಅಪಿನಾಯಿನ್ಸ ಪರ್ವತದ ಎರಡೂ ಮಗ್ಗಲಿಗೆ ಕರಾವಳಿಯಗುಂಟ ರೇಲುಗಳು ಹೋಗಿರು

ತ್ರವೆ. ಮತ್ತು ಅವುಗಳಿಗೆ ಬಂದು ಕೂಡುವಂಥ ಅಡ್ಡಮಾರ್ಗಗಳನ್ನು ಪರ್ವತದ ಕಂದರದೊಳಗಿಂದ ಮಾಡಿರುತ್ತಾರೆ.

ಇಟಲೀ ದೇಶದೊಳಗಿನ ಹೊಳೆಗಳು ಕಿರಿಯಾಳಾಗಿರುವದರಿಂದ ಓಡಾಡಲಿಕ್ಕೆ ನಿರುಪಯೋಗವಾಗಿರುತ್ತವೆ. ಪಶ್ಚಿಮದ ದಂಡೆಯ ಮೇಲಿನ ಬಂದರಗಳ ನಡುವಿನ ವ್ಯಾಪಾರವು ಪಟದ ದೋಣಿಗಳಿಂದ ಸಾಗುತ್ತದೆ. ಆದರೆ ಪಶ್ಚಿಮದ ದಂಡೆಯ ಮೇಲಿರುವಷ್ಟು ಮಹತ್ವದ ಬಂದರಗಳು ಪೂರ್ವದ ದಂಡೆಯ ಮೇಲಿರುವದಿಲ್ಲ.

**ಸಿಸಿಲೀ :**—ಈ ದ್ವೀಪದೊಳಗಿನ ಅಪಿನಾಯಿನ್ಸ ಪರ್ವತವೂ ಆಫ್ರಿಕೆಯೊಳಗಿನ ಅಟ್ಲಾಸ್ ಪರ್ವತವೂ ಕೂಡಿಕೊಂಡಿರುವವೋ ಏನೋ ಎಂಬಂತೆ ಕಂಡುಬರುತ್ತದೆ. ಈ ದ್ವೀಪದೊಳಗೆ ಎಟ್ನಾ ಎಂಬ ಜ್ವಾಲಾಮುಖಿ ಇದ್ದು ಅದರ ಸುತ್ತಮುತ್ತಲೂ ಗಂಧಕವು ಸಿಗುತ್ತದೆ. ಕಾರಖಾನೆಯೊಳಗೆ ಅದನ್ನು ಶುದ್ಧಗೊಳಿಸಿ ಪರದೇಶಗಳಿಗೆ ಕಳಿಸುತ್ತಾರೆ. ಈ ದ್ವೀಪದೊಳಗಿನ ಭೂಮಿಯು ಬೆಳೆಯುಳ್ಳದ್ದಿದ್ದು, ಅದರೊಳಗೆ ಭೂಮಧ್ಯ ಸಮುದ್ರ ದಂಡೆಯ ಮೇಲಿನ ಯಾವತ್ತೂ ಹುಟ್ಟುವಳಿಗಳು ಬರುತ್ತವೆ. ದ್ರಾಕ್ಷೆ ಮತ್ತು ಗೋದಿ ಇವು ವಿಶೇಷವಾಗಿ ಬೆಳೆಯುತ್ತವೆ. **ಪಾಲೆರ್ಮೊ** ಎಂಬ ರಾಜಧಾನಿಯ ಸ್ಥಳದಲ್ಲಿ ಕಿತ್ತಳೆ ಮತ್ತು ನಿಂಬೆಹಣ್ಣಿನ ದೊಡ್ಡ ದೊಡ್ಡ ತೋಟಗಳುಂಟು. ಇಲ್ಲಿ ಕಬ್ಬಿಣದ ಸರಕುಗಳ ಮತ್ತು ಹಡಗಗಳನ್ನು ಕಟ್ಟುವ ಕಾರಖಾನೆಗಳಾದರೂ ಇರುತ್ತವೆ. **ಮೆಸಿನಾ** ಎಂಬಲ್ಲಿ ರೇಶಿಮೆಯ ಅರಿವೆಯು ಹುಟ್ಟುತ್ತದೆ. ಮೆಸಿನಾ ಸಾಮುದ್ರಧುನಿಯೊಳಗಿಂದ ಹೋಗುವಾಗ ಹಾದಿಯಲ್ಲಿರುವ ಸ್ಟ್ರಂಬೋಲೀ ಎಂಬ ನಡುಗಡ್ಡೆಯ ಮೇಲೆ ಒಂದು ಜ್ವಾಲಾಮುಖಿ ಪರ್ವತವಿರುತ್ತದೆ.

**ಸಾರ್ಡಿನಿಯಾ:**—ಈ ನಡುಗಡ್ಡೆಯೊಳಗೆ ಎತ್ತರವಾದ ಗುಡ್ಡವೂ, ಜವುಳುಗಳುಳ್ಳ ಸಮುದ್ರದಂಡೆಯೂ ಇರುತ್ತವೆ. ಗುಡ್ಡದೊಳಗೆ ಸೀಸ ಮತ್ತು ಸತುವುಗಳು ಸಿಗುತ್ತವೆ; ಮತ್ತು ಹಳವುಗಳಿಂದ ಕಟ್ಟಿಗೆಯು ಹೊರಡುತ್ತದೆ. ಕರಾವಳಿಯ ಮೇಲೆ ಉಪ್ಪು ಮಾಡುವ ಉದ್ಯೋಗವೂ ಹತ್ತರದಲ್ಲಿಯೇ ಮೀನು ಹಿಡಿಯುವ ಉದ್ಯೋಗವೂ ಚೆನ್ನಾಗಿ ಸಾಗುತ್ತವೆ. ಕಾಗ್ಲಿಆರಿಯೆಂಬುದು ಮುಖ್ಯವಾದ ಪಟ್ಟಣವೂ ಬಂದರವೂ ಆಗಿರುತ್ತದೆ. ಎಲ್ಬಾ ದ್ವೀಪದೊಳಗೆ ಮೇಲಾದ ಜಾತಿಯ ಕಬ್ಬಿಣವು ಸಿಗುತ್ತದೆ.

೭ ನೇ ಪ್ರಕರಣ

# ಜರ್ಮನೀ

ಜರ್ಮನೀ ದೇಶವು ಯುರೋಪ ಖಂಡದೊಳಗಿನ ನಟ್ಟನಡುವಿನ ದೇಶವಾಗಿರುತ್ತದೆ. ಅನೇಕ ಸಂಸ್ಥಾನಗಳು ಕೂಡಿ ಈ ದೇಶವಾಗಿರುತ್ತದೆ. ಕಳೆದ ೭೫ ವರುಷಗಳಲ್ಲಿ ಜರ್ಮನರು ತಮ್ಮ ಉದ್ಯೋಗ, ವ್ಯವಸಾಯ, ಒಕ್ಕಲತನ ಮತ್ತು ವ್ಯಾಪಾರಗಳ ಬೆಳವಣಿಗೆಯನ್ನು ಬಹು ತೀವ್ರವಾಗಿ ಮಾಡಿಕೊಂಡಿರುತ್ತಾರೆ. ಕಲ್ಲಿದ್ದಲಿ, ಕಬ್ಬಿಣ ಮತ್ತು ಇನ್ನಿತರ ಧಾತುಗಳ ಖಣಿಗಳ ಶೋಧವಾದದ್ದರಿಂದ ಅವರು ನೋಡಿದತ್ತೆಲ್ಲ ಕಾರಖಾನೆಗಳನ್ನು ಆರಂಭಿಸಿದರು. ತಮ್ಮ ದೇಶದೊಳಗೆಲ್ಲ ಲೋಹ ಮಾರ್ಗಗಳನ್ನೂ ಕಾಲುವೆಗಳನ್ನೂ ಕಟ್ಟಿ, ಕಾರಖಾನೆಗಳ ಪಟ್ಟಣಗಳನ್ನು ಮತ್ತು ಖಣಿಗಳ ಪ್ರದೇಶಗಳನ್ನು ನದಿಗಳಿಗೂ ಸಮುದ್ರಕ್ಕೂ ಕೂಡಿಸಿದರು. ಇದರಿಂದ ವ್ಯಾಪಾರವು ಬೆಳೆಯಿತು. ಅಲ್ಲಲ್ಲಿ ಔದ್ಯೋಗಿಕ ಶಿಕ್ಷಣದಲ್ಲಿ ತರಬೇತು ಮಾಡಲು ಅವರು ಶಾಲೆಗಳನ್ನಾದರೂ ಸ್ಥಾಪಿಸಿದರು. ಒಕ್ಕಲತನದಲ್ಲಿ ಸಹ ಅವರು ಬಹು ದೊಡ್ಡ ಸುಧಾರಣೆಯನ್ನು ಮಾಡಿದರು. ಶಾಸ್ತ್ರೀಯ ರೀತಿಯಿಂದ ಭೂಮಿಯನ್ನು ಸಾಗುಮಾಡಿ, ಗೊಬ್ಬರವನ್ನು ಹಾಕಿ ಹುಟ್ಟುವಳಿಗಳನ್ನು ಹೆಚ್ಚಿಸಿದರು. ದೇಶದೊಳಗಿನ ಯಾವತ್ತೂ ಜನರಿಗೆ ಬೇಕಾಗುವ ಅನ್ನ ಸಾಮಗ್ರಿಯ ಬಹುಭಾಗವನ್ನು ಸ್ವಂತ ದೇಶದೊಳಗೆ ಹುಟ್ಟಿಸಹತ್ತಿದರು; ಮತ್ತು ಈ ರೀತಿಯಿಂದ ಆ ಜನರು ಸ್ವಾವಲಂಬಿಯಾದರು.

ಮೊದಲನೇ (೧೯೧೪-೧೮) ಮಹಾಯುದ್ಧದಲ್ಲಿ ಜರ್ಮನರು ಪರಾಭವ ಹೊಂದಿದರು, ಮತ್ತು ಅವರ ಪ್ರಗತಿಯು ಕುಂಠಿತವಾಯಿತು. ಆದರೂ ಜರ್ಮನ ಜನರು ಬಹಳ ದೂರದೃಷ್ಟಿಗಳೂ, ಬುದ್ಧಿವಂತರೂ, ಉದ್ಯೋಗಶೀಲರೂ ಇರುವದರಿಂದ ಹಿಟ್ಲರನ ನೇತೃತ್ವದಲ್ಲಿ ಆ ದೇಶವು ಮತ್ತೆ ಸಾಕಷ್ಟು ಪ್ರಗತಿಯನ್ನು ಹೊಂದಿತು. ಎರಡನೇ (೧೯೩೭-೪೬) ಮಹಾಯುದ್ಧದಲ್ಲಿ ಜರ್ಮನ ದೇಶವು ಮತ್ತೆ ಪರಾಭವ ಹೊಂದಿತು ಮತ್ತು ಈಗ ೫-೬ ವರ್ಷಗಳಿಂದ ಜರ್ಮನ ದೇಶದ ರಾಜಕೀಯ ಕಾರಭಾರವು ಬ್ರಿಟಿಶ,

ಫ್ರೆಂಚ, ಅಮೇರಿಕಾ ( ಸಂಸ್ಥಾನಗಳು) ಮತ್ತು ರಶಿಯಾ ಈ ನಾಲ್ಕು ರಾಷ್ಟ್ರಗಳಲ್ಲಿ ವಿಭಾಗಿಸಲ್ಪಟ್ಟಿರುವದು. ಪೂರ್ವ ಜರ್ಮನಿಯು ಸೋವ್ಹಿಯಟ್ ರಶಿಯಾದ ಆಡಳಿತದಲ್ಲಿದೆ, ಮತ್ತು ಪಶ್ಚಿಮದ ಕಡೆಯ ಉಳಿದ ಪ್ರದೇಶವು ಮೂರು ರಾಷ್ಟ್ರಗಳ ನೇತೃತ್ವದಲ್ಲಿರುವದು. ಜರ್ಮನಿಯ ರಾಜಧಾನಿಯಾದ ಬರ್ಲಿನ ಪಟ್ಟಣವು ಇದೇ ರೀತಿಯಲ್ಲಿ ವಿಭಾಗಿಸಲ್ಪಟ್ಟಿರುವದು. ಈ ಪರಿಸ್ಥಿತಿಯು ದಿನದಿನಕ್ಕೆ ಸುಧಾರಿಸಹತ್ತಿದೆ. ಆದರೂ ಇಂದಿನ ಮಟ್ಟಿಗೆ ರಾಜಕೀಯ ದೃಷ್ಟಿಯಿಂದ ಜರ್ಮನ ರಾಷ್ಟ್ರವು ಸ್ವತಂತ್ರವಾಗಿರುವದಿಲ್ಲ.

**ರಚನೆ:**—ತಗ್ಗುದಿಣ್ಣೆಗಳ ದೃಷ್ಟಿಯಿಂದ (೧) ದಕ್ಷಿಣದ ಕಡೆಗಿರುವ ಗುಡ್ಡಗಳಿಂದ ತುಂಬಿದ ಗುಡ್ಡಗಾಡು ಪ್ರದೇಶವೂ. (೨) ಉತ್ತರದ ಕಡೆಗೆ ಬೈಲು ಪ್ರದೇಶವೂ ಎಂಬ ಎರಡು ಸ್ವಾಭಾವಿಕ ಭಾಗಗಳು ಈ ದೇಶದೊಳಗೆ ಸ್ಪಷ್ಟವಾಗಿ ಕಂಡುಬರುತ್ತವೆ. ಜರ್ಮನ ದೇಶದೊಳಗಿನ ನದಿಗಳು ಎಲ್ಲಿ ಉಗಮವಾಗಿ ಹೇಗೆ ಹರಿಯುತ್ತವೆಂಬುದನ್ನು ನೋಡಿದರೆ ಈ ಭೂಪ್ರದೇಶವು ಉತ್ತರದ ಕಡೆಗೆ ಇಳುಕಲಾಗಿರುತ್ತದೆಂಬ ಮಾತು ಸಹಜವಾಗಿ ಕಂಡು ಬರುತ್ತದೆ.

ಈ ದೇಶದ ಹವೆಯು ಒಟ್ಟಿನ ಮೇಲೆ ವಿಷಮವಾಗಿರುತ್ತದೆ. ಉತ್ತರ ಭಾಗಕ್ಕಿಂತ ದಕ್ಷಿಣ ಭಾಗದ ಹವೆಯು ನಿಜವಾಗಿ ಹೆಚ್ಚು ಉಷ್ಣವಾಗಿರಬೇಕು; ಆದರೆ ಆ ಪ್ರದೇಶವು ಎತ್ತರವಾಗಿರುವದರಿಂದ ಬೇಸಿಗೆಯಲ್ಲಿ ಅಲ್ಲಿಯ ಹವೆಯು ತಂಪಾಗಿರುವದಲ್ಲದೆ ಚಳಿಗಾಲದಲ್ಲಿ ಅಷ್ಟು ಶೀತವಾಗಿರುವದಿಲ್ಲ. ಉತ್ತರದ ಕಡೆಯ ಬೈಲಿನೊಳಗಿನ ಪಶ್ಚಿಮಭಾಗದ ಹವೆಯು ಸಮವಾಗಿರುತ್ತದೆ; ಆದರೆ ಪೂರ್ವಕ್ಕೆ ಹೋದ ಹಾಗೆ ಹವೆಯು ವಿಷಮವಾದದ್ದು ಕಂಡುಬರುತ್ತದೆ. ಪೂರ್ವಭಾಗದೊಳಗೆ ಚಳಿಗಾಲದಲ್ಲಿ ಹಿಮವು ಬೀಳುತ್ತದೆ. ಆದರೆ ಪಶ್ಚಿಮ ಭಾಗದಲ್ಲಿ ಅದು ಬೀಳುವದಿಲ್ಲ. ಗುಡ್ಡಗಾಡು ಪ್ರದೇಶದಲ್ಲಿ ಮಳೆಯು ಹೆಚ್ಚಾಗಿ ಆಗುತ್ತದೆ. ಉತ್ತರದ ಕಡೆಯ ಬೈಲಿನೊಳಗೆ ಮಳೆಯ ಪ್ರಮಾಣವು ಪಶ್ಚಿಮದ ಕಡೆಯಿಂದ ಪೂರ್ವದ ಕಡೆಗೆ ಹೋದ ಹಾಗೆ ಕಡಿಮೆಯಾಗುತ್ತದೆ.

**(೧) ಉತ್ತರದ ಕಡೆಯ ಬೈಲುಪ್ರದೇಶವು:**—ಜರ್ಮನೀ ದೇಶದೊಳಗಿನ ಅರ್ಧಭಾಗವು ಗುಡ್ಡಗಾಡು ಇದ್ದು, ಉಳಿದ ಅರ್ಧಭಾಗವು ಬೈಲು ಪ್ರದೇಶವಾಗಿರುತ್ತದೆ. ಈ ಬೈಲುಪ್ರದೇಶದೊಳಗೆ ವೇಸರ್, ಎಲ್ಬ ಮತ್ತು ಓಡರ್ ಎಂಬ ಹೊಳೆಗಳು ಹರಿಯುತ್ತವೆ. ಅವುಗಳಿಗೆ ಬಂದು ಕೂಡುವ

ಹೊಳೆಗಳು ಇಡೀ ಬೈಲು ಪ್ರದೇಶದಲ್ಲಿ ಪಸರಿಸಿರುತ್ತವೆ. ಸಮುದ್ರ ದಂಡೆಯ ಪ್ರದೇಶವು ತಗ್ಗಾಗಿದ್ದು ಜವುಳುಗಳಿಂದ ತುಂಬಿಹೋಗಿದೆ. ಬಾಲ್ಟಿಕ್ ಸಮುದ್ರದ ದಂಡೆಯ ಮೇಲಿನ ಭೂಮಿಯು ಉಸುಬಿನ ಬಂಡೆಗಳಿಂದ ತುಂಬಿದ್ದು ತೀರ ಬೀಳು ಭೂಮಿಯಾಗಿದೆ. ಅದರ ಒಳಭಾಗದಲ್ಲಿಯೂ ಸಹ ಕಡಿಮೆ




ಜರ್ಮನೀ—ಹುಟ್ಟುವಳಿಗಳು

ತರಗತಿಯ ಭೂಮಿಯು ಇರುತ್ತದೆ. ಆದರೂ ಶಾಸ್ತ್ರೀಯ ಜ್ಞಾನದಿಂದಲೂ, ಮೇಲಾದ ಗೊಬ್ಬರಗಳಿಂದಲೂ ಅಲ್ಲಿ ಗೋದಿ, ರಾಯ, ಜವೆಗೋದಿ, ಬಟಾಟೆ ಮುಂತಾದ ಬೆಳೆಗಳನ್ನು ತೆಗೆಯುತ್ತಾರೆ. ಫಲವತ್ತಾದ ಭೂಮಿಯಲ್ಲಿ ಬೀಟದ ಬೆಳೆಯು ವಿಪುಲವಾಗಿ ಬರುತ್ತದೆ. ಇದರಿಂದ ಸಕ್ಕರೆಯನ್ನು ತಯಾರಿಸುವ ದೊಡ್ಡ ದೊಡ್ಡ ಕಾರಖಾನೆಗಳು **ಮ್ಯಾಗ್ಡೆಬರ್ಗ** ಎಂಬಲ್ಲಿರುತ್ತವೆ.

**ಬರ್ಲಿನ:**—ರಾಜಧಾನಿಯ ಸ್ಥಳವಾದ ಈ ಪಟ್ಟಣವು ಬಹು ವಿಸ್ತೀರ್ಣವಾಗಿದ್ದು, ಅದು ಒಂದು ಹೊಳೆಯ ದಂಡೆಯ ಮೇಲೆ ನೆಲಿಸಿರುತ್ತದೆ.

ಅಲ್ಲಿ ರೇಲು, ಕಾಲುವೆ, ಲೈನುದಾರಿ ಮತ್ತು ವಿಮಾನ ಮಾರ್ಗಗಳ ಕೇಂದ್ರವೇ ಆಗಿರುತ್ತದೆ. ಅಲ್ಲಿ ಯಂತ್ರ, ಖಾದ್ಯಪದಾರ್ಥ, ಮತ್ತು ಅರಿವೆಗಳನ್ನು ತಯಾರಿಸುವ ಕಾರಖಾನೆಗಳೂ ಇರುತ್ತವೆ. ಈ ಪಟ್ಟಣವು ವಿದ್ಯೆ ಮತ್ತು ಕಲೆಗಳ ತವರುಮನೆಯೆಂದು ತಿಳಿಯಲ್ಪಡುತ್ತದೆ.

ಬಾಲ್ಟಿಕ್ ಸಮುದ್ರಕ್ಕೆ ಹೊಂದಿಕೊಂಡಿರುವ ಜರ್ಮನೀ ದೇಶದ ಕರಾವಳಿಯು ಸಾಕಷ್ಟು ಉದ್ದವಾಗಿದ್ದರೂ ಅದರ ಮೇಲಿರುವ ಬಂದರುಗಳು




ಬರ್ಲಿನದ ನಕಾಶ

ಚಳಿಗಾಲದಲ್ಲಿ ಹೆಪ್ಪುಗಟ್ಟುತ್ತವೆ. ಆದ್ದರಿಂದ ಅವು ಹೋಗುಬರುವದಕ್ಕೆ ನಿರುಪಯೋಗವಾಗುತ್ತವೆ. **ಕೀಲ** ಎಂಬ ಬಂದರವು ಅದೇ ಹೆಸರಿನ ಕಾಲುವೆಯ ಪೂರ್ವದ ಮೇಲಿರುತ್ತದೆ. ಬಾಲ್ಟಿಕ್ ಸಮುದ್ರವನ್ನು ಉತ್ತರ ಸಮುದ್ರಕ್ಕೆ ಕೂಡಿಸುವ ಈ ಕಾಲುವೆಯಿಂದ ಜರ್ಮನೀ ದೇಶದ ವ್ಯಾಪಾರಕ್ಕೆ ಬಹಳ ಸಹಾಯವಾಗುತ್ತದೆ.

ಉತ್ತರ ಸಮುದ್ರದ ಕರಾವಳಿಯು ವ್ಯಾಪಾರದ ದೃಷ್ಟಿಯಿಂದ ಜರ್ಮನಿಗೆ ಬಹಳ ಮಹತ್ವದ್ದಾಗಿರುತ್ತದೆ. ಎಲ್ಬ ಹೊಳೆಯ ಮುಖದ ಹತ್ತರ ಇರುವ **ಹಂಬರ್ಗ** ಎಂಬ ಬಂದರವು ಬಹಳ ಹೆಸರಾದದ್ದು. ಜರ್ಮನೀಯ ಬಹು ದೊಡ್ಡ ಭಾಗದಿಂದಲೂ ಝೆಕೋಸ್ಲೋವ್ಹಾಕಿಯಾ ದೇಶದೊಳ



ಬರ್ಲಿನ

ಗಿಂದಲೂ ಪರದೇಶಗಳಿಗೆ ಹೋಗುವ ಸರಕುಗಳು ಈ ಬಂದರದೊಳಗೆ ಬರುತ್ತವೆ. ಇಲ್ಲಿಂದ ಅರಿವೆ, ಕಬ್ಬಿಣದ ಸಾಮಾನುಗಳು, ಯಂತ್ರ ಮುಂತಾದ ಸರಕುಗಳು ಪರದೇಶಗಳಿಗೆ ಹೋಗುತ್ತವೆ; ಮತ್ತು ಹತ್ತಿ, ಉಣ್ಣೆ, ಗೋದಿ, ಮಾಂಸ, ಮುಂತಾದ ಸರಕುಗಳು ಹೊರಗಿನಿಂದ ಇಲ್ಲಿ ಬರುತ್ತಿರುತ್ತವೆ. ಇಲ್ಲಿ ದೊಡ್ಡ ದೊಡ್ಡ ಹಡಗುಗಳನ್ನು ಕಟ್ಟುವ ಕಾರಖಾನೆಗಳಾದರೂ ಇರುತ್ತವೆ. **ಬ್ರೇಮೆನ್** ಎಂಬ ಬಂದರವು ವೇಸರ ಹೊಳೆಯ ಮುಖದ ಹತ್ತರ ಇರುತ್ತದೆ; ಆದರೆ ಅದು ಹಂಬರ್ಗದಷ್ಟು ಮಹತ್ವದ್ದಾಗಿರುವದಿಲ್ಲ.

(೨) **ದಕ್ಷಿಣದ ಕಡೆಯು ತಪ್ಪಲು ಪ್ರದೇಶವು:**—ಈ ಪ್ರದೇಶದ ಪಶ್ಚಿಮ ಭಾಗದೊಳಗಿಂದ ಹ್ರಾಯಿನ್ ಎಂಬ ಹೊಳೆಯು ಹರಿಯುತ್ತದೆ. ಈ ಹೊಳೆಯು ಜರ್ಮನೀಯೊಳಗಷ್ಟೇ ಅಲ್ಲದೆ ಇಡೀ ಯುರೋಪ ಖಂಡದೊಳಗೆ ಅತಿ ಮಹತ್ವವಾದ ಹೊಳೆಯಾಗಿರುತ್ತದೆ. ಈ ಹೊಳೆಯು ಆಲ್ಪ್ಸ ಪರ್ವತದೊಳಗಿನ ಉನ್ನತವಾದ ಪ್ರದೇಶದೊಳಗಿಂದ ಕೆಳಗೆ ಹರಿದು ಬರುವದರಿಂದ ಅದರ ಎರಡೂ ದಂಡೆಗುಂಟ ಫಲವತ್ತಾದ ಭೂಮಿಯು




ನಿರ್ಮಾಣವಾಗಿರುತ್ತದೆ. ಆದರ ಎರಡೂ ಮಗ್ಗಲಿಗಿರುವ ಗುಡ್ಡಗಳ ಇಳುಕಲಿನ ಮೇಲೆ ಮೇಲಾದ ದ್ರಾಕ್ಷೆಗಳಾಗುತ್ತವೆ; ಮತ್ತು ತಗ್ಗು ಪ್ರದೇಶದೊಳಗೆ ರಾಯ, ಓಟ, ಬಟಾಟೆ ಮತ್ತು ತಂಬಾಕಗಳ ಬೆಳೆಗಳು ಚೆನ್ನಾಗಿ ಬರುತ್ತವೆ. ಈ ಹೊಳೆಯ ಕೊಳ್ಳದೊಳಗೆ ಇಳಿಯುವ ಸ್ಥಳದಲ್ಲಿ ಬಹಳ ರಮ್ಯವಾದ ನೋಟಗಳು ಕಂಡುಬರುತ್ತವೆ.

ಇದೇ ಪ್ರದೇಶದೊಳಗೆ 'ಬ್ಲಕ್ ಫಾರೆಸ್ಟ' ಎಂಬ ಹೆಸರಿನ ಹಳವು ಇರುತ್ತದೆ. ಪೂರ್ವಕಾಲದಲ್ಲಿ ಈ ಯಾವತ್ತೂ ದೇಶವು ಹಳವುಗಳಿಂದ

ತುಂಬಿಹೋಗಿತ್ತು. ಬ್ಲ್ಯಾಕ್ ಫಾರೆಸ್ಟದೊಳಗಿನ ಹಳವುಗಳಲ್ಲಿ ಕಟ್ಟಿಗೆ ಕಡಿ ಯುವ ಉದ್ಯೋಗವು ಸಾಗುತ್ತದೆ. **ನ್ಯೂರೆಂಬರ್ಗ** ಎಂಬ ಪಟ್ಟಣದೊ ಳಗೆ ಕಟ್ಟಿಗೆಯು ಮತ್ತು ಬೇರೆ ತರದ ಆಟದ ಒಡವೆಗಳು ತಯಾರಾಗು ತ್ತವೆ. ಗುಡ್ಡಗಳ ಮೇಲಿಂದ ಹರಿದು ಬರುವ ಹಳ್ಳಗಳ ಪ್ರವಾಹಗಳಿಂದ ವಿದ್ಯುಚ್ಛಕ್ತಿಯನ್ನು ಹುಟ್ಟಿಸಿ ಆದನ್ನು ಕಾರಖಾನೆಗಳಲ್ಲಿ ಉಪಯೋಗಿಸು ತ್ತಾರೆ. ಇಳುಕಲಿನ ಮೇಲೆ ಹುಲ್ಲು ಬೆಳೆಯುತ್ತದೆ. ಅಲ್ಲಿ ಹೈನಿನ ದನಗ ಳನ್ನು ಸಾಕುತ್ತಾರೆ. ಮತ್ತು ಹೈನಿನ ಉದ್ಯೋಗವನ್ನು ನಡಿಸುತ್ತಾರೆ.

ಹ್ರಾಯಿನ್ ಹೊಳೆಗೆ ದಾರಿಯಲ್ಲಿ ಹ್ರೂರ ಎಂಬ ಹೊಳೆಯು ಬಂದು ಕೂಡುತ್ತದೆ. ಅದರ ಕೊಳ್ಳದೊಳಗೆ ಜರ್ಮನೀಯೊಳಗಿನ ಎಲ್ಲಕ್ಕೂ ದೊಡ್ಡ ಕಲ್ಲಿದ್ದಲಿಯ ಖಣಿಗಳಿರುತ್ತವೆ. ಹತ್ತರದಲ್ಲಿ ಕಬ್ಬಿಣವು ಸಹ ಸಿಗುತ್ತದೆ. ಆದ್ದರಿಂದ ಈ ಕೊಳ್ಳವು ಕಾರಖಾನೆಗಳ ಆಗರವೇ ಆಗಿರುತ್ತದೆ. **ಡ್ಯೂ ಸೇಲಡಾರ್ಫ, ಬಾರ್ಮೆನ್** ಮುಂತಾದ ಪಟ್ಟಣಗಳಲ್ಲಿ ಎಷ್ಟೋ ತರದ ಕಾರಖಾನೆಗಳು ನಡೆದಿರುತ್ತವೆ. **ಏಸ್ಸನ್** ಎಂಬಲ್ಲಿ ಕಬ್ಬಿಣ-ಉಕ್ಕುಗಳ ಸರಕುಗಳನ್ನು ಮಾಡುವ ವಿಶಾಲವಾದ ಕಾರಖಾನೆಗಳು ಇರುತ್ತವೆ. ಅಲ್ಲಿ ರೇಲ್ವೆ ಎಂಜಿನುಗಳು, ಯಂತ್ರ ಮುಂತಾದ ಪ್ರತಿಯೊಂದು ತರದ ಧಾತುವಿನ ಸರಕುಗಳು ತಯಾರಾಗುತ್ತವೆ.

ಹ್ರಾಯಿನ್ ಹೊಳೆಯು ಕೊಳ್ಳದೊಳಗಿನ **ಮ್ಯುನ್ಹೀಮ** ಎಂಬ ಪಟ್ಟಣ ದೊಳಗೆ ಒಕ್ಕಲತನಕ್ಕೆ ಬೇಕಾಗುವ ಯಂತ್ರಗಳು, ಅರಿವೆ ಮತ್ತು ಕಾಜಿನ ಒಡವೆಗಳು ತಯಾರಾಗುತ್ತವೆ. **ಸ್ಟಟಗಾರ್ಟ** ಎಂಬ ಪಟ್ಟಣದೊಳಗೆ ಸ್ವರದ ಪೆಟ್ಟಿಗೆ(ಪಿಯಾನೋ), ಗಡಿಯಾರ, ದುರ್ಬೀಣಿ ಮುಂತಾದ ಕೈಗಾ ರಿಕೆಯ ಒಡವೆಗಳು ತಯಾರಾಗುತ್ತವೆ. **ಫ್ರ್ಯಾಂಕಫುರ್ಟ** ಎಂಬ ಪಟ್ಟಣವು ವ್ಯಾಪಾರೋದ್ಯೋಗಗಳ ಕೇಂದ್ರವಾಗಿರುತ್ತದೆ. **ಕೋಲೋನ್** ಪಟ್ಟ ಣದ ವರೆಗೆ ಹೊಳೆಯೊಳಗಿಂದ ದೊಡ್ಡ ದೊಡ್ಡ ಹಡಗಗಳು ಹೋಗುತ್ತವೆ. ಅಲ್ಲಿ ಗೋದಿ, ಕಲ್ಲಿದ್ದಲಿ ಮತ್ತು ಕಟ್ಟಿಗೆಗಳ ಬಹು ದೊಡ್ಡ ವ್ಯಾಪಾರವು ಸಾಗುತ್ತದೆ. ಅದರಂತೆ ಚಾಕೋಲೇಟ, ಸಿಗಾರೇಟ, ಸುವಾಸಿಕ ದ್ರವ್ಯ (ಕೋಲನ ವಾಟರ) ಮುಂತಾದ ಪದಾರ್ಥಗಳನ್ನು ತಯಾರಿಸುವ ಕಾರಖಾ ನೆಗಳು ಇರುತ್ತವೆ.

ಸಕ್ಸನೀ ಭಾಗದೊಳಗೆ ಕಲ್ಲಿದ್ದಲಿ, ಕಬ್ಬಿಣ ಮತ್ತು ಬೇರೆ ಧಾತುಗಳು ಸಿಗುತ್ತವೆ. **ಚೆಮನೀಟ್ಝು** ಎಂಬ ಪಟ್ಟಣದೊಳಗೆ ಅರಿವೆ, ಧಾತುಗಳ ಸರಕು ಮತ್ತು ಕಾಜಿನ ಒಡವೆಗಳನ್ನು ಮಾಡುವ ಕಾರಖಾನೆಗಳಿರುತ್ತವೆ. **ಡ್ರೆಸ್ಡೆನ್** ಎಂಬ ಪಟ್ಟಣವು ಚೀನೀಮಣ್ಣಿನ ಅಂದವಾದ ಪಾತ್ರೆಗಳ ಸಲುವಾಗಿ ಪ್ರಸಿದ್ಧವಾಗಿರುತ್ತದೆ. **ಲಾಯಪ್ಝಿಕ್** ಎಂಬಲ್ಲಿ ಅಚ್ಚುಹಾಕುವ ಕೆಲಸದ ದೊಡ್ಡ ದೊಡ್ಡ ಕಾರಖಾನೆಗಳುಂಟು. ಅಲ್ಲಿ ವಾದ್ಯಗಳ ಮತ್ತು ತೊಗಲಿನ ಸಾಮಾನುಗಳು ತಯಾರಾಗುತ್ತವೆ. ಅಲ್ಲಿಯ ವಿಶ್ವವಿದ್ಯಾಲಯವೂ ಕಲಾ ಪ್ರದರ್ಶನಗಳೂ ಪ್ರಸಿದ್ಧವಾಗಿರುತ್ತವೆ. ಸಕ್ಸನೀ ಪ್ರಾಂತದೊಳಗೆ ಹಲ ವಡೆಯಲ್ಲಿ ಬೀಟದಬೆಳೆಯಾದರೂ ಬರುತ್ತದೆ. **ಬ್ರೆಸ್ಲಾ** ಎಂಬಲ್ಲಿ ಯಂತ್ರ, ಲಿನನ್‌ದ ಅರಿವೆ, ಕಾಗದ ಮತ್ತು ಕಟ್ಟಿಗೆಯ ಸಾಮಾನುಗಳು ತಯಾರಾಗುತ್ತವೆ. ಈ ಪ್ರಾಂತದೊಳಗೆ ಬೀಟು ಚೆನ್ನಾಗಿ ಬೆಳೆಯುತ್ತದೆ, ಮತ್ತು ಜನರು ಹಂದಿಗಳನ್ನು ಸಾಕುತ್ತಾರೆ. **ಮ್ಯುನಿಚ್** ಎಂಬಲ್ಲಿ ಸರಾಯಿಯನ್ನು ತಯಾರಿಸುವ ಕಾರಖಾನೆಗಳಿರುತ್ತವೆ.

**ಬರು-ಹೋಗುವ ಮಾರ್ಗಗಳು:**—ಜರ್ಮನೀ ದೇಶದೊಳಗೆ ಬರುಹೋಗುವದಕ್ಕೆ ಬಹಳ ಸೌಕರ್ಯಗಳುಂಟು. ರೇಲು, ಕಾಲುವೆ, ಮತ್ತು ಆಕಾಶಮಾರ್ಗಗಳ ಒಂದು ಜಾಳಿಗೆಯೇ ಆಗಿರುತ್ತದೆ. ರೇಲುಮಾರ್ಗದ ಒಟ್ಟು ಉದ್ದಳತೆಯು ೩೬ ಸಾವಿರ ಮೈಲಿಗಿಂತ ಹೆಚ್ಚಾಗಿರುತ್ತದೆ. ಎಂಟು ಸಾವಿರ ಮೈಲಿನಷ್ಟು ಜಲಮಾರ್ಗವಿರುತ್ತದೆ. ಮುಖ್ಯ ಮುಖ್ಯ ಪಟ್ಟಣಗಳೆಲ್ಲ ಆಕಾಶ ಮಾರ್ಗಗಳಿಂದ ಜೋಡಿಸಲ್ಪಟ್ಟಿರುತ್ತವೆ. ಬರುಹೋಗುವದಕ್ಕೆ ಈ ದೇಶದೊಳಗೆ ಉಪಯೋಗಿಸುವಷ್ಟು ವಿಮಾನಗಳನ್ನು ಇನ್ನಾವ ದೇಶದಲ್ಲಿಯೂ ಉಪಯೋಗಿಸುವದಿಲ್ಲ. ಜರ್ಮನೀ ದೇಶದೊಳಗಿನ ಲೈನು ಮಾರ್ಗಗಳಾದರೂ ಉತ್ತಮವಾಗಿದ್ದು, ಹಳ್ಳಿಗಳಲ್ಲಿಯೂ ಸಹ ಅವು ಹಬ್ಬಿರುತ್ತವೆ. ಎಲ್ಲ ಲೈನುದಾರಿಗಳು ಡಾಂಬರದಿಂದ ಮಾಡಿದ್ದು, ಅವುಗಳ ಮೇಲಿನ ಓಡಾಡುವಿಕೆಯಾದರೂ ಬಹು ದೊಡ್ಡ ಪ್ರಮಾಣದಲ್ಲಿ ನಡೆಯುತ್ತದೆ. ಇಷ್ಟು ಓಡಾಡುವಿಕೆಯು ಇದ್ದಾಗ್ಯೂ ಯಾವತ್ತೂ ಲೈನುದಾರಿಗಳ ಮೇಲೆ ಸಂಪೂರ್ಣವಾಗಿ ಶಾಂತತೆಯು ಇರುತ್ತದೆ. ಈ ಮಾತು ಜರ್ಮನೀ ದೇಶದೊಳಗೆ ವಿಶೇಷವಾಗಿ ಕಂಡುಬರುತ್ತದೆ.

## ೮ನೇ ಪ್ರಕರಣ

# ಸಂಯುಕ್ತ ಸಂಸ್ಥಾನಗಳು

ಉತ್ತರ ಅಮೇರಿಕೆಯೊಳಗಿನ ಕ್ಯಾನಡಾದ ದಕ್ಷಿಣಕ್ಕಿರುವ ಬಹುದೊಡ ಪ್ರದೇಶವು ಅಮೇರಿಕೆಯೊಳಗಿನ ಸಂಯುಕ್ತ ಸಂಸ್ಥಾನಗಳಿಂದ ವ್ಯಾಪಿಸಲ್ಪಟ್ಟಿರುತ್ತದೆ. ಈ ದೇಶದ ಕ್ಷೇತ್ರಫಲವು ಸಾಧಾರಣವಾಗಿ ಕ್ಯಾನಡಾದಷ್ಟೇ ಇರುತ್ತದೆ. ಇದಲ್ಲದೆ ಆಲಾಸ್ಕಾದ ಪ್ರದೇಶವೂ ಬೇರೆ ಹಲವು ನಡುಗಡ್ಡೆಗಳೂ ಈ ದೇಶದ ವಶದಲ್ಲಿರುತ್ತವೆ. ಈ ದೇಶದ ಕ್ಷೇತ್ರಫಲವು ಭಾರತದ ಕ್ಷೇತ್ರಫಲದ ಎರಡುವರೆ ಪಟ್ಟು ಅಂದರೆ ಸುಮಾರು ೩೦ ಲಕ್ಷ ಚೌ. ಮೈಲು ಇದ್ದರೂ ಸಹ ಅಲ್ಲಿಯ ಜನಸಂಖ್ಯೆಯು ಮಾತ್ರ ಸುಮಾರು ೧೬ ಕೋಟಿ ಅಂದರೆ ಭಾರತದ ಜನಸಂಖ್ಯೆಯ ೧/೩ ದಷ್ಟು ಇರುತ್ತದೆ. ಪ್ರತಿವರುಷ ಎರಡು ಮೂರು ಲಕ್ಷ ಜನರು ಹೊರದೇಶಗಳಿಂದ ಮುಖ್ಯವಾಗಿ ಯುರೋಪ ಖಂಡದಿಂದ ಈ ದೇಶದೊಳಗೆ ಮನೆ ಮಾಡಿಕೊಂಡು ಇರಲಿಕ್ಕೆ ಬರುತ್ತಿರುತ್ತಾರೆ.

ಈ ದೇಶದೊಳಗೆ ೪೮ ಸಂಸ್ಥಾನಗಳಿರುತ್ತವೆ. ಪ್ರತಿಯೊಂದು ಸಂಸ್ಥಾನದ ರಾಜ್ಯಕಾರಭಾರವು ಪ್ರಜಾಸತ್ತಾತ್ಮಕ ಪದ್ಧತಿಯಿಂದ ನಡೆಯುತ್ತದೆ. ಆದರೆ ಎಲ್ಲ ಸಂಸ್ಥಾನಗಳೂ ಕೂಡಿ ಒಂದು ರಾಷ್ಟ್ರವಾಗಿರುತ್ತದೆ; ಮತ್ತು ಅದರ ರಾಜ್ಯಕಾರಭಾರವಾದರೂ ಪ್ರಜಾಸತ್ತಾತ್ಮಕವಾಗಿರುತ್ತದೆ. ಇಲ್ಲಿಯ ರಾಷ್ಟ್ರಸಭೆಗೆ ' ಕಾಂಗ್ರೆಸ್ ' ಎಂತಲೂ ರಾಷ್ಟ್ರಾಧಿಪತಿಗೆ ' ಪ್ರೆಸಿಡೆಂಟ್ ' ಎಂತಲೂ ಅನ್ನುತ್ತಾರೆ.

ಸಂಯುಕ್ತ ಸಂಸ್ಥಾನಗಳ ಪೂರ್ವದ ಕರಾವಳಿಯು ಹೆಚ್ಚಾಗಿ ಒಡಕಾಗಿದ್ದು, ಅದರ ಮೇಲೆ ಅತ್ಯುತ್ತಮವಾದ ಬಂದರಗಳಿರುತ್ತವೆ. ಪಶ್ಚಿಮದ ದಂಡೆಯು ಮಾತ್ರ ಬಂದರಗಳಿಗೆ ಅನುವಾಗಿರುವದಿಲ್ಲ. ಭೂರಚನೆಯ

ದೃಷ್ಟಿಯಿಂದ ಈ ದೇಶದೊಳಗೆ ಮೂರು ವಿಭಾಗಗಳಿರುತ್ತವೆ (೧) ಪೂರ್ವದ ಕಡೆಯ ಅಪೇಲೇಶಿಯನ್ ಪರ್ವತದ ಉನ್ನತವಾದ ಪ್ರದೇಶವು; (೨) ಪಶ್ಚಿಮದ ಕಡೆಯ ರಾಕೀ ಪರ್ವತವು ಮತ್ತು ಅದರ ಮೇಲಿನ ತಪ್ಪಲುಗಳು; ಮತ್ತು (೩) ಇವೆರಡರ ಮೇಲಿನ ತಗ್ಗು ಪ್ರದೇಶವು. ಇವಲ್ಲದೆ ಪೂರ್ವದ ದಂಡೆಗೆ ಹೊಂದಿಕೊಂಡಿದ್ದ ಸಪಾಟ ಪ್ರದೇಶವನ್ನು ಬೇರೆ ಭಾಗವನ್ನಾಗಿ ತಿಳಿಯುತ್ತಾರೆ.

ಈ ದೇಶದ ಹವೆಯು ಸಾಧಾರಣವಾಗಿ ಸಮಶೀತೋಷ್ಣವಾಗಿದ್ದರೂ, ಅವುಗಳ ಮಧ್ಯಭಾಗವು ಸಮುದ್ರದಿಂದ ದೂರಿರುವದರಿಂದ, ಅಲ್ಲಿಯ ಹವೆಯು ವಿಷಮವಾಗಿರುತ್ತದೆ. ಪೂರ್ವ ಮತ್ತು ಪಶ್ಚಿಮದ ದಂಡೆಗಳ ಮೇಲಿನ ಹವೆಯು ಸಮವಾಗಿರುತ್ತದೆ; ಮತ್ತು ರಾಕೀ ಪರ್ವತದ ತಪ್ಪಲುಗಳ ಮೇಲಿನ ಹವೆಯು ಉಷ್ಣವಾದದ್ದೂ ಇರುತ್ತದೆ. ಪೂರ್ವದ ದಂಡೆಯ ಮೇಲೆ ಮಳೆಯು ಹೆಚ್ಚಾಗುತ್ತದೆ; ಆದರೆ ಪಶ್ಚಿಮಕ್ಕೆ ಹೋದ ಹಾಗೆ ಮಳೆಯ ಪ್ರಮಾಣವು ಕಡಿಮೆಯಾಗುತ್ತದೆ. ಮತ್ತು ತಪ್ಪಲಿನ ಮೇಲೆ ಮಳೆಯಾಗುವದಿಲ್ಲ ಎಂದರೆ ತಪ್ಪಾಗಲಿಕ್ಕಿಲ್ಲ. ಪಶ್ಚಿಮದ ದಂಡೆಯ ಮೇಲೆ ತುಸು ಮಳೆಯಾಗುತ್ತದೆ. ಕಲಿಫೋರ್ನಿಯದ ದಂಡೆಯ ಮೇಲೆ ಮಾತ್ರ ಚಳಿಗಾಲದಲ್ಲಿ ಮಳೆಯಾಗುತ್ತದೆ. ಉಳಿದ ಕಡೆಯಲ್ಲಿ ಬೇಸಿಗೆಯಲ್ಲಿ ಮಳೆಯಾಗುತ್ತದೆ.

ಸಂಯುಕ್ತ ಸಂಸ್ಥಾನದೊಳಗೆ ಮುಖ್ಯವಾಗಿ ಗೋದಿ, ಗೋವಿನ ಜೋಳ, ಹತ್ತಿ ಮತ್ತು ಹಣ್ಣುಹಂಪಲುಗಳು ಬೆಳೆಯುತ್ತವೆ. ಇವಲ್ಲದೆ ಅಕ್ಕಿ, ತಂಬಾಕ ಮತ್ತು ಕಬ್ಬುಗಳಾದರೂ ಬಹಳ ಬೆಳೆಯುತ್ತವೆ.

**ಗೋದಿ :**—ಕಾನಡಾ ದೇಶದೊಳಗಿನ ಪ್ರೇಅರೀ ಪ್ರದೇಶದ ದಕ್ಷಿಣದ ಕಡೆಯ ವಿಸ್ತಾರವು ಸಂಯುಕ್ತ ಸಂಸ್ಥಾನದೊಳಗೆ ಬರುತ್ತದೆ. ಮತ್ತು ಇದೇ ಈ ದೇಶದೊಳಗಿನ ಮುಖ್ಯವಾದ ಗೋದಿಯ ಪ್ರದೇಶವಾಗಿರುತ್ತದೆ. ಇಲ್ಲಿಯ ಗೋದಿಯ ಹೊಲಗಳನ್ನು ಯಂತ್ರಗಳಿಂದ ಸಾಗುಮಾಡುತ್ತಾರೆ. ಈ ಪ್ರದೇಶದೊಳಗಿನ ದೊಡ್ಡ ದೊಡ್ಡ ಪಟ್ಟಣಗಳು ಗೋದಿಯ ಉಗ್ರಾಣಗಳಾಗಿರುತ್ತವೆ. ಮತ್ತು ಇಲ್ಲಿಯ ಗೋದಿಯಾದರೂ ಮಹಾ ಸರೋವರಗಳ

ಮೇಲಿನಿಂದಲೂ ಉಗಿಬಂಡಿಗಳಿಂದಲೂ ಹೊತ್ತೊಯ್ಯಲ್ಪಟ್ಟು ಯುರೋಪಕ್ಕೆ ಕಳಿಸಲ್ಪಡುತ್ತದೆ.

**ಗೋವಿನ ಜೋಳ:**-ಇದಕ್ಕೆ ಅಮೇರಿಕೆಯೊಳಗೆ 'ಕಾರ್ನ' ಅಥವಾ 'ಇಂಡಿಯನ್ ಕಾರ್ನ' ಎಂದೆನ್ನುತ್ತಾರೆ. ನಮ್ಮ ದೇಶದೊಳಗೆ ಈ ಧಾನ್ಯವು ಅಮೇರಿಕೆಯಿಂದಲೇ ಬಂದಿರುತ್ತದೆ. ಗೋದಿಯ ಪ್ರದೇಶದ ದಕ್ಷಿಣಕ್ಕೆ ಗೋವಿನ ಜೋಳದ ಪ್ರದೇಶವಿರುತ್ತದೆ. ಯಾಕಂದರೆ ಇದಕ್ಕೆ ಮಳೆಯೂ ಬಿಸಿಲೂ ಹೆಚ್ಚಾಗಿ ಬೇಕಾಗುತ್ತದೆ. ಉತ್ತರದಿಂದ ದಕ್ಷಿಣಕ್ಕೆ ವಿಷುವವೃತ್ತದ ಕಡೆಗೆ ಹೋದ ಹಾಗೆ ಉಷ್ಣತಾಮಾನವು ಹೆಚ್ಚಾಗುತ್ತ ಹೋಗುತ್ತದೆ; ಮತ್ತು ಸಮುದ್ರದ ಮೇಲಿಂದ ಬರುವ ಮಳೆಯಾದರೂ ಹೆಚ್ಚಾಗುತ್ತದೆ. ಅಮೇರಿಕೆಯೊಳಗೆ ಗೋವಿನ ಜೋಳವು ಅತಿ ವಿಪುಲವಾಗಿ ಬೆಳೆಯುತ್ತದೆ. ಆದರೆ ಅದರ ಉಪಯೋಗವನ್ನು ಜನರು ಹೆಚ್ಚಾಗಿ ಮಾಡಿಕೊಳ್ಳುವದಿಲ್ಲ. ದನಗಳನ್ನು, ಅದರಲ್ಲಿಯೂ ಹಂದಿಗಳನ್ನು ಹೆಚ್ಚಾಗಿ ಕೊಬ್ಬಿಸಲಿಕ್ಕೂ, ಮಾಂಸಲುಗಳನ್ನಾಗಿ ಮಾಡಲಿಕ್ಕೂ, ಗೋವಿನ ಜೋಳವನ್ನು ಉಪಯೋಗಿಸುತ್ತಾರೆ.

**ಹತ್ತಿ :**—ಗೋವಿನ ಜೋಳದ ಪ್ರದೇಶದ ದಕ್ಷಿಣಕ್ಕಿರುವ ಪ್ರದೇಶದಲ್ಲಿ ಹತ್ತಿಯನ್ನು ಬಹು ದೊಡ್ಡ ಪ್ರಮಾಣದಲ್ಲಿ ಬೆಳೆಸುತ್ತಾರೆ. ಜಗತ್ತಿನೊಳಗಿನ ಎಲ್ಲ ಪ್ರದೇಶಗಳಲ್ಲಿ ಕೂಡಿ ಬೆಳೆಯುವ ಹತ್ತಿಯ ಎರಡು ಮೂರಾಂಶದಷ್ಟು ಹತ್ತಿಯು ಬೆಳೆಯುತ್ತದೆ. ಇಂಗ್ಲಂಡದೊಳಗೆ ಮಂಚೆಸ್ಟರ ಪಟ್ಟಣದೊಳಗಿನ ಗಿರಣಿಗಳಿಗೆ ಬೇಕಾಗುವ ಹತ್ತಿಯಲ್ಲಿಯ ಬಹು ದೊಡ್ಡ ಭಾಗವು ಇಲ್ಲಿಂದಲೇ ಪೂರೈಸಲ್ಪಡುತ್ತದೆ. ಇತ್ತಲಾಗಿ ಸಂಯುಕ್ತ ಸಂಸ್ಥಾನದಲ್ಲಿ ಸಹ ಹತ್ತಿಯ ಗಿರಣಿಗಳು ಎಷ್ಟೋ ಆಗಿರುತ್ತವೆ. ಅವುಗಳಿಗೆಲ್ಲ ಸಾಕಾಗಿ ಹೆಚ್ಚಾದ ಹತ್ತಿಯನ್ನು ಪರದೇಶಗಳಿಗೆ ಕಳಿಸುತ್ತಾರೆ.

ಹತ್ತಿಯನ್ನು ಕೈಯಿಂದಲೇ ಬಿಡಿಸಬೇಕಾಗುತ್ತದೆ. ಯಾಕಂದರೆ ಎಲ್ಲ ಹತ್ತಿಯ ಗಿಡಗಳು ಒಂದೇ ವೇಳೆಗೆ ಹತ್ತಿಯನ್ನು ಬಿಡುವದಿಲ್ಲ. ಇದರಿಂದ ಅವುಗಳನ್ನು ಒಂದೇ ವೇಳೆಗೆ ತೆಗೆಯಲಿಕ್ಕೆ ಬರುವದಿಲ್ಲ. ಆದ್ದರಿಂದ ಈ ಕೆಲಸವು ಯಂತ್ರಗಳಿಂದ ನಡೆಯುವಂತೆ ಇಲ್ಲ. ಅಮೇರಿಕೆಯೊಳಗೆ ಮೊಟ್ಟಮೊದಲು ಹತ್ತಿಯನ್ನು ಬೆಳೆಯಲಾರಂಭಿಸಿದಾಗ, ಆಫ್ರಿಕೆಯೊಳಗಿನ ನಿಗ್ರೋ

ಜನರನ್ನು ಈ ಕೆಲಸದ ಸಲುವಾಗಿ ಹಿಡಿದು ತಂದು ಇಲ್ಲಿ ಗುಲಾಮರನ್ನಾಗಿ ಮಾರುತ್ತಿದ್ದರು. ಆದರೆ ಈಗ ಆ ಜನರು ಗುಲಾಮರಾಗಿರುವದಿಲ್ಲ. ಆದರೆ ಹೊಲದೊಳಗಿನ ಹತ್ತಿ ಬಿಡಿಸುವ ಕೆಲಸವನ್ನು ಮಾತ್ರ ನಿಗ್ರೋ ಹೆಂಗಸರೂ, ಗಂಡಸರೂ, ಹುಡುಗರೂ ಮಾಡುತ್ತಾರೆ. ಯಾಕಂದರೆ ಅವರು ಬಿಳೀ ಜನರಿಗಿಂತ ಕಡಿಮೆ ಕೂಲಿಯ ಮೇಲೆ ದುಡಿಯಲು ಬರುತ್ತಾರೆ. ಮೊಟ್ಟ ಮೊದಲು ಆಫ್ರಿಕೆಯಿಂದ ಹಿಡಿದು ತಂದ ನಿಗ್ರೋ ಜನರ ವಂಶಜರು ಇಂದಿಗೆ ಈ ದೇಶದೊಳಗೆ ಎಲ್ಲ ಕಡೆಯಲ್ಲಿಯೂ ಹಬ್ಬಿದ್ದು, ಅವರ ಜನಸಂಖ್ಯೆಯು ಈಗ ಒಂದು ಕೋಟಿಗಿಂತ ಹೆಚ್ಚಾಗಿರುತ್ತದೆ.

ಅಮೇರಿಕೆಯೊಳಗಿನ ಹತ್ತಿಯ ಬೆಳೆಯ ಬಗ್ಗೆ ಹೇಳುವಾಗ, ಭಾರತದೊಳಗಿನ ಹತ್ತಿಯ ಬೆಳೆಯ ಬಗ್ಗೆ, ವಿಶೇಷತಃ ಮುಂಬಯಿಯಲ್ಲಿಯ ಹತ್ತಿಯ ಗಿರಣಿಗಳ ಬಗ್ಗೆ ಕೆಳಗಿನ ಮಾತು ನೆನಪಿನಲ್ಲಿಡತಕ್ಕಂಥಾದ್ದಿರುತ್ತದೆ. ಅದೇನೆಂದರೆ ೧೮೬೦ನೇ ವರುಷದಲ್ಲಿ ಸಂಯುಕ್ತ ಸಂಸ್ಥಾನದೊಳಗಿನ ಉತ್ತರ ಮತ್ತು ದಕ್ಷಿಣ ಸಂಸ್ಥಾನಗಳ ನಡುವೆ ಯುದ್ಧವು ಆರಂಭವಾಯಿತು. ಉತ್ತರದ ಕಡೆಯ ಸಂಸ್ಥಾನಗಳೊಳಗಿನ ಜನರು ದಕ್ಷಿಣದ ಸಂಸ್ಥಾನಗಳೊಳಗಿರುವ ನಿಗ್ರೋ ಜನರನ್ನು ಗುಲಾಮತನದಿಂದ ಬಿಡುಗಡೆಮಾಡಬೇಕೆಂದು ಕೇಳಹತ್ತಿದರು. ಆದರೆ ದಕ್ಷಿಣ ಸಂಸ್ಥಾನಗಳೊಳಗೆ ಹತ್ತಿಯ ಬೆಳೆಯು ಮುಖ್ಯವಾಗಿರುವದರಿಂದಲೂ ಈ ನಿಗ್ರೋ ಗುಲಾಮರು ಈ ಹೊಲಗಳಲ್ಲಿ ದುಡಿಯುತ್ತಿದ್ದುದರಿಂದಲೂ ಈ ಸಂಸ್ಥಾನದೊಳಗಿನ ಜನರು ಅದಕ್ಕೆ ಒಪ್ಪಲಿಲ್ಲ. ಈ ಯುದ್ಧದೊಳಗೆ ಉತ್ತರ ಸಂಸ್ಥಾನಗಳು ಜಯಹೊಂದಿದ್ದರಿಂದ ನಿಗ್ರೋ ಜನರು ಗುಲಾಮತನದಿಂದ ಮುಕ್ತರಾದರು. ಈ ಯುದ್ಧವು ನಾಲ್ಕೈದು ವರುಷಗಳ ವರೆಗೆ ಸಾಗಿತ್ತು. ಮತ್ತು ಈ ಯುದ್ಧದ ವೇಳೆಯಲ್ಲಿ ಹತ್ತಿಯ ಬೆಳೆಯು ತೀರ ನಿಂತು ಹೋಯಿತು. ಇದರಿಂದ ಮಂಚೆಸ್ಟರದೊಳಗಿನ ಗಿರಣಿಗಳಿಗೆ ಹತ್ತಿಯ ಪೂರೈಕೆಯು ಆಗದ ಹಾಗಾಯಿತು. ಆಗ ಭಾರತದೊಳಗಿನ ಹತ್ತಿಗೆ ಬಹು ದೊಡ್ಡ ಬೇಡಿಕೆಯು ಬಂದಿತು. ಬೆಲೆಯು ಚೆನ್ನಾಗಿ ಬರಹತ್ತಿದ್ದರಿಂದ ಹತ್ತಿಯ ಬೆಲೆಯು ಈ ದೇಶದಲ್ಲಿ ಒಮ್ಮಿಂದೊಮ್ಮೆ ಹೆಚ್ಚಾಯಿತು. ಮತ್ತು ಮುಂಬಯಿಯಲ್ಲಿ ಗಿರಣಿಗಳು ಸ್ಥಾಪಿಸಲ್ಪಟ್ಟವು. ಹತ್ತಿಯ ಬೆಳೆಗೂ ಗಿರಣಿಗಳಿಗೂ ಒಮ್ಮೆಲೆ ಪ್ರೋತ್ಸಾಹನವು ಸಿಕ್ಕಿತು. ಮತ್ತು ಈ ರೀತಿಯಿಂದ ಅಮೇರಿಕೆಯೊಳಗೆ

ನಿಗ್ರೋ ಜನರ ಸ್ವಾತಂತ್ರ್ಯದ ಸಲುವಾಗಿ ನಡೆದ ಯುದ್ಧದಿಂದ ಭಾರತಕ್ಕೆ, ಅದರಲ್ಲಿಯೂ ಮುಂಬಯಿ ಪಟ್ಟಣಕ್ಕೆ ಬಹು ದೊಡ್ಡ ಲಾಭ ವಾಯಿತು.

ಸಂಯುಕ್ತ ಸಂಸ್ಥಾನದೊಳಗಿನ ಹತ್ತಿಯನ್ನು ಬೆಳೆಯುವ ಪ್ರದೇಶವು ಕರಾವಳಿಯಿಂದ ತುಸು ದೂರದಲ್ಲಿರುತ್ತದೆ. ಈ ಪ್ರದೇಶದ ದಕ್ಷಿಣದ ಕಡೆಗೆ ಸಮುದ್ರ ದಂಡೆಯ ಹತ್ತಿರಿರುವ ಪ್ರದೇಶದೊಳಗೆ ಅಕ್ಕಿ ಮತ್ತು ಕಬ್ಬು ಬೆಳೆಯುತ್ತವೆ. ಇವಲ್ಲದೆ ದಕ್ಷಿಣದ ಕಡೆಯ ಪ್ರದೇಶದೊಳಗಿನ ಬಹುಭಾಗದಲ್ಲಿ ತಂಬಾಕ ಬೆಳೆಯುತ್ತದೆ. ವ್ಹರ್ಜಿನಿಯಾ ಸಂಸ್ಥಾನವು ತಂಬಾಕಿನ ಸಲುವಾಗಿ ಪ್ರಸಿದ್ಧವಿರುತ್ತದೆ.

**ಹಣ್ಣು ಹಂಪಲುಗಳು** :—ಪಶ್ಚಿಮ ದಂಡೆಯ ಮೇಲಿರುವ ಕಲಿಫೋರ್ನಿಯಾದ ಕೊಳ್ಳವು ಹಣ್ಣುದೋಟಗಳ ಸಲುವಾಗಿ ಪ್ರಸಿದ್ಧವಿರುತ್ತದೆ. ಇದರೊಳಗಿನ ಭೂಮಿಯು ಹೊಳೆಗಳ ರೇವೆಯಿಂದುಂಟಾಗಿರುವದರಿಂದ ಅದು ಬಹಳ ಬೆಳೆಯುಳ್ಳದ್ದಾಗಿರುತ್ತದೆ. ಈ ಪ್ರದೇಶದೊಳಗೆ ಚಳಿಗಾಲದಲ್ಲಿ ಮಳೆಯಾಗುವದರಿಂದ ಭೂಮಧ್ಯ ಸಮುದ್ರದ ಸುತ್ತಮುತ್ತಲು ಬೆಳೆಯುವ ಎಲ್ಲ ತರದ ಹಣ್ಣುಗಳು ಇಲ್ಲಿ ಆಗುತ್ತವೆ. ಈ ಕೊಳ್ಳದೊಳಗೆ ಮಳೆಯು ಕಡಿಮೆ ಆಗುತ್ತದೆ; ಆದರೆ ಪೂರ್ವದ ಬದಿಗಿರುವ ಪರ್ವತದ ಮೇಲಿಂದ ಹರಿದು ಬರುವ ಹೊಳೆಗಳ ನೀರನ್ನು ಅಣೆಕಟ್ಟುಗಳಿಂದ ಕಟ್ಟಿ ಕಾಲುವೆಗಳಿಂದ ನೀರನ್ನು ತಂದದ್ದರಿಂದ, ಒಂದು ಕಾಲಕ್ಕೆ ರುಕ್ಷವಾದ ಈ ಪ್ರದೇಶವು ಈಗ ಹಣ್ಣುದೋಟಗಳಿಂದ ತುಂಬಿ ತುಳುಕುತ್ತದೆ. ಇಲ್ಲಿ ಪೀಚ, ದ್ರಾಕ್ಷೆ, ಬೋರೆ, ಕಿತ್ತಳೆ, ನಿಂಬೆ, ಸಫರಚಂದ, ನೀರಲ, ಅಂಜೂರಿ, ಆಲಿವ್ಹ, ಗ್ರೆಪಫ್ರುಟ (ಪಪನಸದಂಥ ಒಂದು ತರದ ಹಣ್ಣು), ಅಕ್ರೋಡ, ಬದಾಮು ಮುಂತಾದ ಹಣ್ಣುಗಳು ಆಗುತ್ತವೆ. ಪೂರ್ವದ ಕಡೆಗಿರುವ ಫ್ಲಾರಿಡಾ ಎಂಬ ಭಾಗವು ಸಹ ಕಿತ್ತಳೆ ಮುಂತಾದ ನಿಂಬೆಹಣ್ಣಿನ ಜಾತಿಯ ಹಣ್ಣುಗಳ ಸಲುವಾಗಿ ಪ್ರಸಿದ್ಧವಿರುತ್ತದೆ.

**ಕಟ್ಟಿಗೆ ಕಡಿಯುವದು** :—ಸಂಯುಕ್ತ ಸಂಸ್ಥಾನದೊಳಗೆ ಕಟ್ಟಿಗೆ ಕಡಿಯುವ ಉದ್ಯೋಗವು ಅಷ್ಟೊಂದು ದೊಡ್ಡ ಪ್ರಮಾಣದಲ್ಲಿ ಸಾಗುವದಿಲ್ಲ. ಆದರೂ ಪಶ್ಚಿಮದ ಕರಾವಳಿಯ ಮೇಲಿನ ಪರ್ವತಗಳ ಇಳುಕಲುಗಳ

ಮೇಲೆ ಉತ್ತಮ ಜಾತಿಯ ಎತ್ತರವಾದ ಗಿಡಗಳ ದಟ್ಟಾದ ಅರಣ್ಯಗಳು ಇರುತ್ತವೆ. ಅಲ್ಲಿ ಕಟ್ಟಿಗೆ ಕಡಿಯುವ ಉದ್ಯೋಗವು ತಕ್ಕಮಟ್ಟಿಗೆ ನಡೆಯುತ್ತದೆ.

**ದನಗಳನ್ನು ಸಾಕುವದು** :—ಪ್ರೇಅರೀ ಪ್ರದೇಶದ ಪಶ್ಚಿಮಕ್ಕೆ ೧೦೦ ರೇಖಾಂಶದ ಆಚೆಯ ಭೂಮಿಯು ರಾಕೀ ಪರ್ವತದ ಕಡೆಗೆ ಏರಾಗುತ್ತ ಹೋಗುತ್ತದೆ. ಇಲ್ಲಿ ಮಳೆಯ ಪ್ರಮಾಣವು ಕಡಿಮೆಯಾಗಿರುವದರಿಂದ ಸಣ್ಣ ಹುಲ್ಲಿನ ಹೊರ್ತಾಗಿ ಬೇರೆ ಏನೂ ಬೆಳೆಯುವದಿಲ್ಲ. ಈ ಪ್ರದೇಶದೊಳಗೆ ಕಾನಡಾದಂತೆಯೇ ದನಗಳನ್ನು ಬಹಳವಾಗಿ ಸಾಕಿ ಬೆಳೆಸುತ್ತಾರೆ. ಈ ದೇಶದ ಪೂರ್ವಕ್ಕೆ ಇರುವ ಗೋವಿನ ಜೋಳದ ಪ್ರದೇಶದೊಳಗೆ ಸಹ ದನಗಳನ್ನು ಸಾಕುತ್ತಾರೆ; ಮತ್ತು ದನಗಳ ಸಂಗಡ ಸಾವಿರಗಟ್ಲೆ ಹಂದಿಗಳನ್ನಾದರೂ ಸಾಕಿ ಬೆಳೆಸುತ್ತಾರೆ. ಪಶ್ಚಿಮದ ಕಡೆಯ ಪ್ರದೇಶದೊಳಗಿನ ದನಗಳನ್ನು ಬೆಳೆಯಿಸುವದಕ್ಕಾಗಿ ಅವುಗಳನ್ನು ಗೋವಿನ ಜೋಳದ ಪ್ರದೇಶದೊಳಗೆ ಕಳಿಸುತ್ತಾರೆ.

**ಮೀನುಹಿಡಿಯುವದು** :—ಪಶ್ಚಿಮ ದಂಡೆಯ ಮೇಲಿನ ಕೋಲಂಬಿಯಾ ಹೊಳೆಯ ಸುತ್ತಮುತ್ತಲೂ ಸಮನ್ ಎಂಬ ಜಾತಿಯ ಮೀನುಗಳನ್ನು ಹಿಡಿಯುವ ಉದ್ಯೋಗವು ಬಹು ದೊಡ್ಡ ಪ್ರಮಾಣದಿಂದ ಸಾಗುತ್ತದೆ. ಮತ್ತು ಈ ಮೀನುಗಳನ್ನು ಡಬ್ಬಿಗಳಲ್ಲಿ ತುಂಬಿ ಪರದೇಶಗಳಿಗೆ ಕಳಿಸುತ್ತಾರೆ.

**ಖನಿಜ ದ್ರವ್ಯಗಳು** :—ಸಂಯುಕ್ತ ಸಂಸ್ಥಾನವು ಖನಿಜಸಂಪತ್ತಿನಲ್ಲಿ ಅತಿಸಂಪನ್ನವಾಗಿರುತ್ತದೆ. ಕಲ್ಲಿದ್ದಲಿ, ಪೆಟ್ರೋಲಿಯಮ್ (ಕಲ್ಲೆಣ್ಣೆ), ಕಬ್ಬಿಣ, ತಾಮ್ರ, ಬಂಗಾರ ಮತ್ತು ಬೆಳ್ಳಿಗಳು ವಿಪುಲವಾಗಿ ಎಷ್ಟೋ ಕಡೆಗೆ ಸಿಗುತ್ತದೆ, ಆದರೆ ಮುಖ್ಯವಾದ ಖಣಿಗಳು ಕೆಳಗಿನಂತೆ ಇರುತ್ತವೆ.

(೧) ನ್ಯೂಯಾರ್ಕ ಪಟ್ಟಣದ ಪಶ್ಚಿಮದಲ್ಲಿ ಪೆನ್‌ಸಿಲ್ವ್ಹಾನಿಯಾ ಸಂಸ್ಥಾನದೊಳಗಿನ ಪಿಟ್ಸಬರ್ಗ ಪಟ್ಟಣವು ಎಲ್ಲಕ್ಕೂ ದೊಡ್ಡ ಖಣಿಗಳ ಕೇಂದ್ರವಾಗಿರುತ್ತದೆ. ಕಲ್ಲಿದ್ದಲಿಯ ಈ ಪ್ರದೇಶವು ದಕ್ಷಿಣದ ಕಡೆಗೆ ಅಲಾಬಾಮಾ ಸಂಸ್ಥಾನದೊಳಗಿನ ಬರ್ಮಿಂಗ್‌ಹಮ್ ಪಟ್ಟಣದ ವರೆಗೆ ಪಸರಿಸಿ

ದುತ್ತದೆ. (೨) ಇಲಿನಾಯಿ ಸಂಸ್ಥಾನವು ಮತ್ತು ಅದರ ಸುತ್ತಮುತ್ತಲಿನ ಭಾಗವು ಕಲ್ಲಿದ್ದಲಿಯ ಎರಡನೆಯ ಪ್ರದೇಶವಾಗಿದ್ದು, ಸೆಂಟಲೂಯಿ ಎಂಬ ಪಟ್ಟಣವು ಅದರೊಳಗೆ ಪ್ರಸಿದ್ಧವಿರುತ್ತದೆ. (೩) ಇದಲ್ಲದೆ ರಾಕೀ ಪರ್ವತ ದೊಳಗಿನ ಹಲವು ಸ್ಥಳಗಳಲ್ಲಿಯೂ ಇತರ ಸಂಸ್ಥಾನಗಳಲ್ಲಿಯೂ ಕಲ್ಲಿದ್ದಲಿಯ ಖಣಿಗಳಿರುತ್ತವೆ.

**ಪೆಟ್ರೋಲಿಯಮ್:**—ಕಲ್ಲೆಣ್ಣೆಯ ಖಣಿಗಳು ಈ ದೇಶದೊಳಗೆ ಎಷ್ಟೋಕಡೆಯಲ್ಲಿರುತ್ತವೆ. ಅವುಗಳೊಳಗಿನ ಎಲ್ಲಕ್ಕೂ ದೊಡ್ಡ ಕ್ಷೇತ್ರವು ಕೆಲಿಫೋರ್ನಿಯಾದ ದಕ್ಷಿಣಕ್ಕಿರುವ ಲಾಸ ಎಂಜಿಲಿಸ್ ಎಂಬ ಪಟ್ಟಣದ ಹತ್ತರ ಇರುತ್ತದೆ. ಓಕ್ಲಾಹೋಮಾ ಮತ್ತು ಟೆಕ್ಸಾಸ ಎಂಬ ಸಂಸ್ಥಾನ ದೊಳಗೆ ಇತರ ಕ್ಷೇತ್ರಗಳುಂಟು. ಸಂಯುಕ್ತ ಸಂಸ್ಥಾನದೊಳಗಿನ ಸುಮಾರು ೧೭ ಸಂಸ್ಥಾನಗಳಲ್ಲಿ ಈ ಎಣ್ಣೆಯು ಸಿಗುತ್ತದೆ. ಇದರ ಮೇಲಿಂದ ಈ ಎಣ್ಣೆಯ ಖಣಿಗಳ ವಿಸ್ತಾರದ ಬಗ್ಗೆ ಕಲ್ಪನೆಯಾಗಬಹುದು. ಈ ದೇಶ ದಲ್ಲಿ ಸದ್ಯಕ್ಕೆ ಸಿಗುವಷ್ಟು ಈ ಎಣ್ಣೆಯು ಜಗತ್ತಿನೊಳಗಿನ ಇತರ ಯಾವ ದೇಶದಲ್ಲಿಯೂ ಸಿಗುವದಿಲ್ಲ. ಖಣಿಗಳಿಂದ ಎಣ್ಣೆಯು ಪಂಪಿನಿಂದ ಮೇಲೆ ಎಳೆಯಲ್ಪಡುತ್ತದೆ; ಇಲ್ಲವೆ ತನ್ನಿಂದ ತಾನೇ ಕಸುವಿನಿಂದ ಮೇಲಕ್ಕೆ ಬರುತ್ತದೆ. ಅದನ್ನು ಎಷ್ಟೋ ಮೈಲು ದೂರದಲ್ಲಿರುವ ಪಟ್ಟಣಗಳಿಗೆ ನಳ ಗಳಿಂದ ಕಳಿಸುತ್ತಾರೆ.

**ಕಬ್ಬಿಣ:**—ಸುಪೀರಿಯರ್ ಸರೋವರದ ಸುತ್ತಮುತ್ತಲೂ ಕಬ್ಬಿ ಣದ ದೊಡ್ಡ ದೊಡ್ಡ ಖಣಿಗಳುಂಟು. ಹತ್ತರದಲ್ಲಿ ಕಲ್ಲಿದ್ದಲಿಯು ಸಿಗುವದಿಲ್ಲ. ಆದ್ದರಿಂದ ಅಶುದ್ಧರೂಪದಲ್ಲಿರುವ ಕಬ್ಬಿಣವನ್ನು ಕಲ್ಲಿದ್ದಲಿಯ ಖಣಿಗಳ ಹತ್ತರ ಇದ್ದ ಪಿಟ್ಸಬರ್ಗದಂಥ ಪಟ್ಟಣಗಳಿಗೆ ಹಡಗಗಳಿಂದಲೂ, ಉಗಿ ಬಂಡಿಗಳಿಂದಲೂ ಕಳಿಸಿಕೊಡುತ್ತಾರೆ. ಅಲಾಬಾಮಾ ಸಂಸ್ಥಾನದೊಳಗೆ ಕಬ್ಬಿಣವು ವಿಪುಲವಾಗಿ ಸಿಗುತ್ತದೆ. ಮತ್ತು ಹತ್ತರದಲ್ಲಿಯೇ ಕಲ್ಲಿದ್ದಲಿ ಯಾದರೂ ಸಾಕಷ್ಟು ಇರುತ್ತದೆ. ಆದ್ದರಿಂದ ಬರ್ಮಿಂಗಹಮ, ಶೇಫೀಲ್ಡ ಮುಂತಾದ ಪಟ್ಟಣಗಳು ಕಬ್ಬಿಣದ ಕಾರಖಾನೆಗಳ ಸಲುವಾಗಿ ಪ್ರಸಿದ್ಧವಾ ಗಿರುತ್ತವೆ. ಈ ಹೆಸರುಗಳು ಇಂಗ್ಲಂಡದೊಳಗಿನ ಅವೇ ಹೆಸರಿನ ಊರು ಗಳ ಮೇಲಿಂದ ಬಿದ್ದಿರುತ್ತವೆಂಬುದು ಸ್ಪಷ್ಟವಿದೆ.

**ಪಟ್ಟಣಗಳು:—ನ್ಯೂಯಾರ್ಕ** ಎಂಬ ಪಟ್ಟಣದ ಜನಸಂಖ್ಯೆಯು ೭೮ ಲಕ್ಷದ ಮೇಲೆ ಇರುತ್ತದೆ. ಅಂದರೆ ಪೂರ್ವ ದಂಡೆಯ ಮೇಲಿರುವ ಒಂದು ನಡುಗಡ್ಡೆಯ ಮೇಲೆ ಈ ಪಟ್ಟಣದ ಮುಖ್ಯವಾದ ಭಾಗವು ನೆಲೆಸಿ ರುತ್ತದೆ. ಜನಸಂಖ್ಯೆಯು ಬೆಳೆಯುತ್ತಿದ್ದದರಿಂದಲೂ, ಮನೆಗಳನ್ನು ಕಟ್ಟಲಿಕ್ಕೆ ದ್ವೀಪದ ಮೇಲೆ ಸ್ಥಳದ ಸಂಕೋಚವಿರುವದರಿಂದಲೂ ಇಲ್ಲಿಯ ಇಮಾರತು ಗಳನ್ನು ಬಹಳ ಎತ್ತರವಾಗಿ ಕಟ್ಟಬೇಕಾಗುತ್ತದೆ. ಹಲವು ಕಟ್ಟಡಗಳು ೪೦-೫೦ ಅಂತಸ್ತಿನವು ಇರುತ್ತವೆ. ಮತ್ತು ಇಂಥ ಒಂದೇ ಇಮಾರತಿಯಲ್ಲಿ



ನ್ಯೂಯಾರ್ಕ—ಪೂಲುಗಳ ಮೇಲಿನ ರೇಲುದಾರಿಯು

೧೫೦೦೦ ಜನರು ಕೂಡ ವಾಸಮಾಡುತ್ತಾರೆ. ಇಂಥ ಒಂದು ಇಮಾರತಿ ಯೆಂದರೆ ಒಂದು ಸಣ್ಣ ಪಟ್ಟಣವೆಂದೇ ಹೇಳಬಹುದು. ಇಂಥ ಅಗಾಧ ವಾದ ಜನ ಸಮೂಹಕ್ಕೆ ಓಡಾಡುವದರ ಸಲುವಾಗಿ ಭೂಮಿಯ ಮೇಲಿಂದ ಅದರಂತೆ ಭೂಗರ್ಭದೊಳಗಿಂದ ರೇಲುದಾರಿಗಳ ಜಾಳಿಗೆಗಳೇ ಆಗಿರುತ್ತವೆ. ಇವಲ್ಲದೆ ಅಸಂಖ್ಯವಾದ ಮೋಟಾರುಗಾಡಿಗಳಂತೂ ಇದ್ದೇ ಇರುತ್ತವೆ.

ನ್ಯೂಯಾರ್ಕ ಪಟ್ಟಣದ ಈ ಬೆಳವಣಿಗೆಗೆ ಹಲವು ಕಾರಣಗಳುಂಟು. ಯುರೋಪದೊಳಗಿನ ಎಲ್ಲ ಮುಖ್ಯ ಬಂದರಗಳಿಗೆ ಈ ಬಂದರವು ಸಮೀಪ

ವಾಗಿರುತ್ತದೆ ಮತ್ತು ಅದು ಎಂದೂ ಹೆಪ್ಪುಗಟ್ಟುವದಿಲ್ಲ. ಹೊಳೆಗಳಿಂದಲೂ ಕಾಲುವೆಗಳಿಂದಲೂ ಈ ಪಟ್ಟಣದಿಂದ ಉತ್ತರಕ್ಕೆ ಕಾನಡಾ ದೇಶದೊಳಗಿರುವ ಮಾಂಟ್ರಿಯಲ್ ಪಟ್ಟಣದ ಕಡೆಗೂ ಅಪಲೇಶಿಯನ್ ಪರ್ವತದ ಆಚೆಗಿರುವ ಪಿಟ್ಸಬರ್ಗ ಎಂಬ ಪಟ್ಟಣದ ಸುತ್ತಮುತ್ತಲಿನ ಸಮೃದ್ಧವಾದ ಪ್ರದೇಶದ ಕಡೆಗೂ ಹೋಗಲಿಕ್ಕೆ ನೈಸರ್ಗಿಕವಾದ ಮಾರ್ಗಗಳಿರುತ್ತವೆ. (ಹಡಸನ್ ಮೋಹಾಕ ಮಾರ್ಗ) ಈ ಮಾರ್ಗಗಳ ಮೇಲಿಂದ ಉಗಿಬಂಡಿಯ ಮಾರ್ಗ ವನ್ನು ಕಟ್ಟಿದ್ದರಿಂದ ನ್ಯೂಯಾರ್ಕ ಪಟ್ಟಣದಿಂದ ಉತ್ತರದ ಕಡೆಗಿರುವ ಸರೋವರಗಳ ಪ್ರದೇಶಕ್ಕೂ ಅದರಂತೆ ಪಶ್ಚಿಮದ ಕಡೆಗಿರುವ ಫಲವತ್ತಾದ ಪ್ರದೇಶಕ್ಕೂ ನಡುವೆ ಒಂದೇಸವನೆ ಬರುಹೋಗುವದು ಬಹುದೊಡ್ಡ ಪ್ರಮಾಣದಲ್ಲಿ ನಡೆಯುತ್ತಿರುತ್ತದೆ. ಸಂಯುಕ್ತ ಸಂಸ್ಥಾನಗಳೊಳಗಿನ ಆಮದು—ರಫ್ತಾಗುವ ಯಾವತ್ತೂ ಸರಕುಗಳ ಸುಮಾರು ಅರ್ಧದಷ್ಟು ಕೇವಲ ಇದೊಂದೇ ಬಂದರದೊಳಗಿಂದ ಹೋಗಿಬರುತ್ತವೆ. ಇದರ ಮೇಲಿಂದ ಈ ಬಂದರದ ಮಹತ್ವವೆಷ್ಟಿರುತ್ತದೆಂಬುದು ಸಹಜವಾಗಿ ಕಂಡು ಬರುತ್ತದೆ. ಈ ಪಟ್ಟಣದೊಳಗೆ ಎಷ್ಟೋ ತರದ ಕಾರಖಾನೆಗಳಾದರೂ ಇರುತ್ತವೆ; ಆದರೆ ಅವುಗಳಲ್ಲಿ ಅರಿವೆಯ ಗಿರಣಿಗಳು ಹೆಚ್ಚಾಗಿರುತ್ತವೆ.

**ಫಿಲಾಡೆಲ್ಫಿಯಾ:**—ಈ ಪಟ್ಟಣವು ನ್ಯೂಯಾರ್ಕದ ದಕ್ಷಿಣಕ್ಕಿರುತ್ತದೆ. ಈ ಪಟ್ಟಣವು ಕಾರಖಾನೆಗಳಿಂದ ತುಂಬಿತುಳುಕುತ್ತದೆ. ಇಲ್ಲಿ ಉಗಿಬಂಡಿಗೆ ಬೇಕಾಗುವ ಎಂಜಿನುಗಳನ್ನೂ ಉಗಿಹಡಗಗಳನ್ನೂ ತಯಾರಿಸುತ್ತಾರೆ. ಸಕ್ಕರೆಯ ಕಾರಖಾನೆಗಳೂ ಹೆಚ್ಚಾಗಿರುತ್ತವೆ. **ವಾಶಿಂಗ್ಟನ್** ಈ ಪಟ್ಟಣವು ಸಂಯುಕ್ತ ಸಂಸ್ಥಾನದ ರಾಜಧಾನಿಯಾಗಿರುತ್ತದೆ. ಸಂಯುಕ್ತ ಸಂಸ್ಥಾನದ ಮೊದಲನೇ ಪ್ರೆಸಿಡೆಂಟನಾದ ಜಾರ್ಜ ವಾಶಿಂಗ್ಟನ್ನನ ಹೆಸರನ್ನು ಈ ರಾಜಧಾನಿಗೆ ಕೊಟ್ಟಿದ್ದಾರೆ. ಇಲ್ಲಿ ಹೇಳಿಕೊಳ್ಳುವಂಥ ಕಾರಖಾನೆಗಳಿರುವದಿಲ್ಲ; ಆದರೆ ಸುಂದರವಾದ ಕಟ್ಟಡಗಳಿಂದಲೂ, ಅಗಲವಾದ ಮಾರ್ಗಗಳಿಂದಲೂ ದೊಡ್ಡ ದೊಡ್ಡ ಉದ್ಯಾನಗಳಿಂದಲೂ ಈ ಪಟ್ಟಣವು ಶೋಭಿಸುತ್ತದೆ. ಇಲ್ಲಿರುವ ಕಪಿಟಾಲ ಎಂಬ ಹೆಸರಿನ ಭವ್ಯವಾದ ಇಮಾರತಿಯಲ್ಲಿ ಕಾಂಗ್ರೆಸ (ಪಾರ್ಲಿಮೆಂಟ) ಸಭೆಯು ನೆರೆಯುವದು. ಮತ್ತು ವ್ಹಾಯಿಟ್‌ಹಾವುಸ ಎಂಬ ಸುಂದರವಾದ ಅರಮನೆಯಲ್ಲಿ ಪ್ರೆಸಿಡೆಂಟನು ವಾಸಿಸುತ್ತಾನೆ.

ಇದಲ್ಲದೆ ಈ ಬದಿಗೆ **ಬಾಲ್ಟಿಮೋರ** ಮತ್ತು **ರಿಚ್‌ಮಂಡ** ಎಂಬ ಪಟ್ಟಣಗಳಾದರೂ ಪ್ರಸಿದ್ಧವಾಗಿರುತ್ತವೆ. ರಿಚ್‌ಮಂಡಕ್ಕೆ 'ತಂಬಾಕಿನ ಪಟ್ಟಣ' ವೆಂದೆನ್ನುತ್ತಾರೆ. ಯಾಕಂದರೆ ಅಲ್ಲಿ ತಂಬಾಕಿನ ಕಾರಖಾನೆಗಳು ಬಹಳವಾಗಿರುತ್ತವೆ. ಫಿಲಾಡೆಲ್ಫಿಯಾ, ಬಾಲ್ಟಿಮೋರ, ವಾಶಿಂಗ್ಟನ್ ಮತ್ತು ರಿಚ್‌ಮಂಡ ಈ ನಾಲ್ಕು ಪಟ್ಟಣಗಳು ಬಂದರದ ಸ್ಥಳಗಳಾಗಿರು




ತ್ತವೆ. ಆದರೆ ಅವೆಲ್ಲ ಸಮುದ್ರದಿಂದ ದೂರವಲ್ಲಿದ್ದು ನದಿಗಳ ದಂಡೆಯ ಮೇಲಾಗಲಿ ಆಖಾತಗಳ ದಂಡೆಯ ಮೇಲಾಗಲಿ ನೆಲಿಸಿರುತ್ತವೆ. ಪರ್ವತದ ತಪ್ಪಲಿನ ಮೇಲಿಂದ ಪೂರ್ವಕ್ಕೆ ಅಟಲಾಂಟಿಕ ಮಹಾಸಾಗರದ ಕಡೆಗೆ ಎಷ್ಟೋ ಸಣ್ಣ ದೊಡ್ಡ ಹೊಳೆಗಳು ಹರಿದು ಬರುತ್ತವೆ. ಪರ್ವತದ ಬಿರು

ಸಾದ ಕಲ್ಲನ್ನು ದಾಟಿ ಕೆಳಗಿನ ತಗ್ಗು ಪ್ರದೇಶದೊಳಗಿನ ಮಿದುವಾದ ಕಲ್ಲು ಬರಲು, ಈ ಎಲ್ಲ ನದಿಗಳ ಮೇಲೆ ತಡಸಲುಗಳುಂಟಾಗಿರುತ್ತವೆ. ಪ್ರತಿಯೊಂದು ತಡಸಲಿನ ಹತ್ತಿರ ಒಂದೊಂದು ಪಟ್ಟಣವು ಸ್ಥಾಪಿತವಾಗಿದೆ. ಈ ಯಾವತ್ತೂ ಪಟ್ಟಣಗಳನ್ನು ಜೋಡಿಸುವ ರೇಖೆಗೆ 'ತಡಸಲುಗಳ ರೇಖೆ' ಅಥವಾ 'ಫಾಲ್‌ಲಾಯಿನ' ಎಂದೆನ್ನುತ್ತಾರೆ. ಈ ತಡಸಲುಗಳ ಶಕ್ತಿಯಿಂದ ವಿದ್ಯುತ್ತನ್ನು ಹುಟ್ಟಿಸಿ, ದೊಡ್ಡ ದೊಡ್ಡ ಕಾರಖಾನೆಗಳನ್ನು ನಡಿಸಲಿಕ್ಕೆ ಬರುತ್ತದೆ. ಆದ್ದರಿಂದ ಈ ಪಟ್ಟಣಗಳೊಳಗೆ ಕಾರಖಾನೆಗಳನ್ನು ನಡೆಯಿಸುವದು ಸುಲಭವಾಗಿರುತ್ತದೆ. ದಕ್ಷಿಣದಲ್ಲಿ ಅಲಾಬಾಮಾ ಹೊಳೆಯ ಮಾರ್ಗದ ಮೇಲಿರುವ ಮಾಂಟಗೋಮೇರೀ ಪಟ್ಟಣದಿಂದ ಉತ್ತರಕ್ಕೆ ನ್ಯೂಯಾ‌ರ್ಕದ ಹತ್ತಿರಿರುವ ಟ್ರೆಂಟನ್ ಎಂಬ ಪಟ್ಟಣದ ವರೆಗೆ ಸುಮಾರು ಹನ್ನೊಂದು ಸುಪ್ರಸಿದ್ಧವಾದ ಕಾರಖಾನೆಗಳುಳ್ಳ ಪಟ್ಟಣಗಳು ಈ ತಡಸಲಿನ ರೇಖೆಯಗುಂಟ ನೆಲಿಸಿರುತ್ತವೆ. ಮೇಲೆ ಹೇಳಿದ ನಾಲ್ಕೂ ಪಟ್ಟಣಗಳೂ ಇದೇ ರೇಖೆಯ ಮೇಲಿರುತ್ತವೆ. ನ್ಯೂಯಾ‌ರ್ಕ ಪಟ್ಟಣದ ಉತ್ತರಕ್ಕೆ **ಬೋಸ್ಟನ್** ಎಂಬ ಬಂದರವಿರುತ್ತದೆ. ಯುರೋಪ ಖಂಡದ ಸಂಗಡ ಇದರ ವ್ಯಾಪಾರವು ಚೆನ್ನಾಗಿ ಸಾಗುತ್ತದೆ. ಮತ್ತು ಅಲ್ಲಿ ಎಷ್ಟೋ ಕಾರಖಾನೆಗಳಾದರೂ ಇರುತ್ತವೆ.

ಏರೀ ಸರೋವರದ ಪೂರ್ವದ ತುದಿಯಲ್ಲಿ **ಬಫೆಲೋ** ಮತ್ತು ದಕ್ಷಿಣದ ದಂಡೆಯ ಮೇಲೆ **ಕ್ಲೀವ್ಹಲಂಡ** ಎಂಬ ಎರಡು ಪಟ್ಟಣಗಳು ಕಬ್ಬಿಣದ ಸಾಮಾನುಗಳನ್ನೂ ಯಂತ್ರಗಳನ್ನೂ ಮಾಡುವ ಕಾರಖಾನೆಗಳ ಸಲುವಾಗಿ ಪ್ರಸಿದ್ಧವಾಗಿರುತ್ತವೆ. ಬಫೆಲೋ ಪಟ್ಟಣವು ನಾಯಗಾರಾದ ತಡಸಲಿನಿಂದ ೮೦ ಮೈಲುಗಳ ಮೇಲಿರುತ್ತದೆ; ಆದರೆ ಈ ಧಬಧಬೆಯ ಮೇಲಿಂದ ಹುಟ್ಟಿಸಿದ ವಿದ್ಯುಚ್ಛಕ್ತಿಯಿಂದ ಈ ಪಟ್ಟಣದೊಳಗಿನ ಕಾರಖಾನೆಗಳು ನಡೆಯುತ್ತವೆ. ಸುಪೀರಿಯರ್ ಸರೋವರದ ಪಶ್ಚಿಮದ ತುದಿಯ ಹತ್ತಿರ **ಡುಲೂಥ** ಎಂಬ ಉತ್ತಮವಾದ ಪಟ್ಟಣವಿರುತ್ತದೆ. ಹ್ಯೂರಾನ್ ಮತ್ತು ಏರೀ ಎಂಬ ಸರೋವರಗಳನ್ನು ಜೋಡಿಸುವ ಒಂದು ಹೊಳೆಯ ದಂಡೆಯಲ್ಲಿ **ಡೆಟ್ರಾಯಿಟ** ಎಂಬ ಪಟ್ಟಣವಿರುತ್ತದೆ. ಸರೋವರಗಳ ಮೇಲಿಂದ ಬರುಹೋಗುವ ಸರಕುಗಳು ಈ ಪಟ್ಟಣದೊಳಗಿಂದಲೇ ಹೋಗು

ತ್ತವೆ. ಫೋರ್ಡ ಕಂಪನಿಯ ಮೋಟಾರಿನ ಪ್ರಚಂಡವಾದ ಕಾರಖಾನೆಯು ಇಲ್ಲಿ ಇರುತ್ತದೆ. ಈ ಮೋಟಾರುಗಳು ಹಿಂದುಸ್ತಾನದೊಳಗೆ ಎಷ್ಟೋ ಬರುತ್ತವೆ.

ಮಿಶಿಗನ್ ಸರೋವರದ ದಕ್ಷಿಣದ ತುದಿಗೆ **ಶಿಕಾಗೊ** ಎಂಬ ಪಟ್ಟಣವಿರುತ್ತದೆ. ಇದರ ಜನಸಂಖ್ಯೆಯು ೩೬ ಲಕ್ಷದ ಮೇಲೆ ಇದ್ದು ಅಮೇರಿಕೆಯೊಳಗೆ ನ್ಯೂಯಾರ್ಕದ ಕೆಳಗೆ ಇದೇ ಎರಡನೇ ದೊಡ್ಡ ಪಟ್ಟಣವಿರುತ್ತದೆ. ಒಂದು ಸಣ್ಣ ಸ್ಥಳವಿದ್ದ ಈ ಊರು ಒಂದೇ ಶತಕದೊಳಗೆ ಇಷ್ಟು ವಿಸ್ತಾರವಾದ ಮತ್ತು ಸುಸಂಪನ್ನವಾದ ಪಟ್ಟಣದೊಳಗೆ ರೂಪಾಂತರವಾಗಿದೆ. ನ್ಯೂಯಾರ್ಕದಂತೆಯೇ ಇಲ್ಲಿಯೂ ಭೂಮಿಯ ವಿಸ್ತಾರವು ತೀರ ಕಡಿಮೆಯಾಗಿರುವದರಿಂದ ಬಹು ಎತ್ತರವಾದ ಇಮಾರತುಗಳನ್ನು ಕಟ್ಟಬೇಕಾಗುತ್ತದೆ. ಶಿಕಾಗೊ ಪಟ್ಟಣವು ಜಗತ್ತಿನೊಳಗಿನ ಅತಿ ದೊಡ್ಡ ರೇಲ್ವೆ ಜಂಕ್ಶನ್ನದ ಸ್ಥಳವಾಗಿರುತ್ತದೆ. ಈ ಪಟ್ಟಣದಿಂದ ಹೊರಡುವಷ್ಟು ರೇಲು ಮಾರ್ಗಗಳು ಜಗತ್ತಿನೊಳಗಿನ ಇನ್ನಾವ ಪಟ್ಟಣದಿಂದಲೂ ಹೊರಡುವದಿಲ್ಲ. ಅದರಂತೆ ಪ್ರೇಅರೀ ಪ್ರದೇಶದೊಳಗಿನ ಗೋದಿಯು ಎರಡನೇ ಪಟ್ಟಣಗಳಿಗಾಗಲಿ ಪರದೇಶಗಳಿಗಾಗಲಿ ಇಲ್ಲಿಂದಲೇ ಹೋಗುತ್ತದೆ. ಆದ್ದರಿಂದ ಕಾಳಿನ ವ್ಯಾಪಾರವನ್ನು ಮಾಡುವಂಥ ಇಷ್ಟು ದೊಡ್ಡ ಪಟ್ಟಣವು ಜಗತ್ತಿನಲ್ಲಿ ಇನ್ನೊಂದಿಲ್ಲ. ಪಶ್ಚಿಮದ ದಂಡೆಯ ಹುಲ್ಲುಗಾವಲದ ಪ್ರದೇಶಕ್ಕೂ ಪೂರ್ವ ದಂಡೆಯ ಗೋವಿನ ಜೋಳದ ಪ್ರದೇಶಕ್ಕೂ ನಡುವೆ ಈ ಪಟ್ಟಣವಿರುವದರಿಂದ ಈ ಪಟ್ಟಣದೊಳಗೆ ಕೊಯ್ಯಲಿಕ್ಕೆ ಬರುವಷ್ಟು ದನಗಳು–ಆಕಳು, ಎತ್ತು, ಹಂದಿ ಮತ್ತು ಕುರಿಗಳು ಜಗತ್ತಿನೊಳಗಿನ ಬೇರೆ ಯಾವ ಪಟ್ಟಣದೊಳಗೂ ಬರುವದಿಲ್ಲ. ಆದ್ದರಿಂದ ಇಲ್ಲಿಯ ಕಟುಕರ ಮನೆಗಳಾದರೂ ಜಗತ್ತಿನೊಳಗೆ ಅತಿ ದೊಡ್ಡವಾಗಿರುತ್ತವೆ. ಮತ್ತು ಅಲ್ಲಿ ಮಾಂಸವನ್ನು ಡಬ್ಬಿಗಳಲ್ಲಿ ತುಂಬಿ ಪರದೇಶಗಳಿಗೆ ಕಳಿಸುವ ವ್ಯಾಪಾರವಾದರೂ ಬಹು ದೊಡ್ಡ ಪ್ರಮಾಣದಿಂದ ಸಾಗುತ್ತದೆಂದು ಬೇರೆ ಹೇಳುವ ಕಾರಣವಿಲ್ಲ. ಪಂಚಮಹಾಸರೋವರಗಳ ಮೇಲಿನ ಓಡಾಟಕ್ಕೂ

ಈ ಪಟ್ಟಣಕ್ಕೂ ಸಂಬಂಧವು ಬಂದೇ ಬರುತ್ತದೆ; ಇದಲ್ಲದೆ ಮಿಸೂರಿ ಮಿಸಿಸಿಪಿಗಳ ಜಲಮಾರ್ಗಕ್ಕೆ ಸಹ ಈ ಪಟ್ಟಣವು ಕಾಲುವೆಗಳಿಂದ ಜೋಡಿ ಸಲ್ಪಟ್ಟಿರುತ್ತದೆ. ಅಂದರೆ ಸರೋವರಗಳು, ನದಿಗಳು, ಕಾಲುವೆಗಳು ಮತ್ತು ರೇಲುಮಾರ್ಗ ಇವುಗಳಿಂದ ಈ ಪಟ್ಟಣವು ಸಂಯುಕ್ತ ಸಂಸ್ಥಾನ ದೊಳಗಿನ ಯಾವತ್ತೂ ದೊಡ್ಡ ದೊಡ್ಡ ಪಟ್ಟಣಗಳಿಗೆ ಸಂಬಂಧಿಸಲ್ಪಟ್ಟಿರು



ಶಿಕಾಗೊ—ಕಟುಕರ ಮನೆ

ತ್ತದೆ. ಹೊರಗಿನಿಂದ ಕಬ್ಬಿಣ-ಕಲ್ಲಿದ್ದಲಿಗಳನ್ನು ತಂದು ಈ ಪಟ್ಟಣದೊಳಗೆ ಕಬ್ಬಿಣದ ಸಾಮಾನುಗಳನ್ನು ತಯಾರಿಸುವ ಪ್ರಚಂಡವಾದ ಕಾರಖಾನೆಗಳು ಸ್ಥಾಪಿಸಲ್ಪಟ್ಟಿವೆ; ಮತ್ತು ಅವುಗಳಲ್ಲಿ ರೇಲ್ವೆಗೆ ಬೇಕಾಗುವ ಸರಕುಗಳನ್ನೂ ಒಕ್ಕಲತನಕ್ಕೆ ಬೇಕಾಗುವ ಯಂತ್ರ ಮತ್ತು ರಂಟೆಗಳನ್ನೂ, ಮೋಟಾರುಗ ಳನ್ನೂ ಬಹು ದೊಡ್ಡ ಪ್ರಮಾಣದಲ್ಲಿ ತಯಾರಿಸುತ್ತಾರೆ.

**ಪಿಟ್ಸಬರ್ಗ** ಎಂಬ ಪಟ್ಟಣವು ಕಲ್ಲಿದ್ದಲಿಯ ಖಣಿಗಳ ನಡುವೆ ಇರುತ್ತದೆ. ಸುಪೀರಿಯರ್ ಸರೋವರದ ಪಶ್ಚಿಮದ ಕಡೆಯಲ್ಲಿರುವ ಅಶುದ್ಧ ರೂಪದ ಕಬ್ಬಿಣವನ್ನು ಇಲ್ಲಿ ತಂದು, ಕಬ್ಬಿಣ ಉಕ್ಕುಗಳ ಯಂತ್ರಗಳನ್ನೂ ಬೇರೆ ಸರಕುಗಳನ್ನೂ ತಯಾರಿಸುವ ಅತಿ ದೊಡ್ಡ ಕಾರಖಾನೆಗಳು ಇಲ್ಲಿ ಇರುತ್ತವೆ. ಈ ಪಟ್ಟಣವು ಓಹಿಯೋ ಮತ್ತು ಅದಕ್ಕೆ ಬಂದು ಕೂಡುವ ಎರಡು ಬೇರೆ ಹೊಳೆಗಳ ಸಂಗಮದ ಮೇಲಿರುವದರಿಂದ ಅದು ಈ ಹೊಳೆಗಳ ಫಲವತ್ತಾದ ಕೊಳ್ಳಗಳೊಳಗಿನ ಬರುಹೋಗುವ ಮಾರ್ಗಗಳ ಕೇಂದ್ರವಾಗಿರುತ್ತದೆ. ಇದಲ್ಲದೆ ಇಲ್ಲಿ ಕಾಜಿನ ಒಡವೆಗಳನ್ನು ಮಾಡುವ ಎಷ್ಟೋ ಕಾರಖಾನೆಗಳಾದರೂ ಇರುತ್ತವೆ.

**ಸೆಂಟಲೂಯಿ** ಎಂಬ ಪಟ್ಟಣವು ಮಿಸೂರಿ ಮತ್ತು ಮಿಸಿಸಿಪಿ ಹೊಳೆಗಳ ಸಂಗಮದ ಮೇಲೆ ನೆಲಿಸಿರುವದರಿಂದ, ಮಧ್ಯಭಾಗದೊಳಗಿನ ಬೆಳೆಯುಳ್ಳ ಪ್ರದೇಶದೊಳಗಿನ ಹುಟ್ಟುವಳಿಗಳು ಈ ಪಟ್ಟಣದ ಮೇಲಿಂದ ಜಲಮಾರ್ಗವಾಗಿ ದಕ್ಷಿಣದ ಕಡೆಗೆ ಕಳಿಸಲ್ಪಡುತ್ತವೆ. ಗೋದಿ, ಗೋವಿನ ಜೋಳ, ಹತ್ತಿ, ತಂಬಾಕ ಮತ್ತು ದನಗಳು ಇಲ್ಲಿ ವ್ಯಾಪಾರ ಮಾಡುವದಕ್ಕಾಗಿ ಕೂಡ ಹಾಕಲ್ಪಡುತ್ತವೆ. ಇಲ್ಲಿ ಶಿಕಾಗೊ ಪಟ್ಟಣದಂತೆ ಕಬ್ಬಿಣದ ಸಾಮಾನುಗಳ ಕಾರಖಾನೆಗಳಿರುತ್ತವೆ; ಆದರೆ ತಂಬಾಕಿನ ಕಾರಖಾನೆಗಳ ಸಲುವಾಗಿ ಈ ಪಟ್ಟಣವು ವಿಶೇಷವಾಗಿ ಹೆಸರಾಗಿರುತ್ತದೆ.

**ನ್ಯೂ ಆರ್ಲಿನ್ಸ** ಈ ಪಟ್ಟಣವು ಮಿಸಿಸಿಪಿ ಹೊಳೆಯ ಮೇಲೆ ಮೆಕ್ಸಿಕೋದ ಆಖಾತದ ಹತ್ತರ ಇರುತ್ತದೆ. ಈ ಹೊಳೆಯ ಮುಖದ ಹತ್ತರದ ತ್ರಿಭುಜ ಪ್ರದೇಶದೊಳಗೆ ಸಮುದ್ರದಿಂದ ಸುಮಾರು ೧೦೦ ಮೈಲಿನ ಮೇಲೆ ಈ ಬಂದರವಿರುತ್ತದೆ. ಅಲ್ಲಿಯ ವರೆಗೆ ದೊಡ್ಡ ದೊಡ್ಡ ಸಾಗರಗಾಮೀ ಹಡಗಗಳು ಹೋಗುತ್ತವೆ. ಈ ಸಂದರ್ಭದಲ್ಲಿ ಈ ಬಂದರವನ್ನು ಕಲಕತ್ತೆಗೆ ಹೋಲಿಸಬಹುದು. ಹೊಳೆಯ ಪಾತ್ರದೊಳಗಿಂದ ಯಾವಾಗಲೂ ರೇವೆಯನ್ನು ತೆಗೆಯುತ್ತಿರುವದರಿಂದ, ಹಡಗಗಳ ಓಡಾಟಕ್ಕೆ ಆತಂಕವಾಗುವದಿಲ್ಲ. ಇಲ್ಲಿಂದ ಮುಂದೆ ಮಿಸಿಸಿಪಿ ಹೊಳೆಯೊಳಗಿಂದ ಹೋಗುವ ಹಡಗಗಳು ನೂರಾರು ಮೈಲಿನ ಮೇಲಿರುವ ಮಿನಿಯಾಪೋಲೀಸ್ ಎಂಬ ಪಟ್ಟಣದ ವರೆಗೆ ಹೋಗುತ್ತವೆ. ನ್ಯೂ ಆರ್ಲಿನ್ಸದೊಳಗಿನ ವಖಾರಗಳು

ಪರದೇಶಗಳಿಗೆ ಕಳಿಸುವದರ ಸಲುವಾಗಿ ತಂದ ಎಷ್ಟೋ ತರದ ಸರಕುಗಳಿಂದ ತುಂಬಿ ತುಳುಕುತ್ತಿರುತ್ತವೆ. ಈ ಸರಕುಗಳು ಯಾವವೆಂದರೆ:—ಸಕ್ಕರೆ, ತಂಬಾಕ, ಗೋದಿ, ಗೋವಿನಜೋಳ, ಮಾಂಸ, ತೊಗಲು ಮುಂತಾದವು ಗಳು. ಈ ಪಟ್ಟಣವು ಹತ್ತಿಯನ್ನು ರಫ್ತುಮಾಡುವ ಜಗತ್ತಿನೊಳಗಿನ ಎಲ್ಲಕ್ಕೂ ದೊಡ್ಡ ಬಂದರವಾಗಿರುತ್ತದೆ.

ಪೆಸಿಫಿಕ್ ಮಹಾಸಾಗರದ ದಂಡೆಯ ಮೇಲಿನ ಎಲ್ಲಕ್ಕೂ ದೊಡ್ಡ ಪಟ್ಟಣವೆಂದರೆ **ಸನ್‌ಫ್ರಾನ್ಸಿಸ್ಕೋ.** ಈ ಬಂದರದೊಳಗೆ ಹೋಗಲಿಕ್ಕೆ ಒಂದು ಕಿರಿಯುಗಲಾದ ಮಾರ್ಗವಿರುತ್ತದೆ. ಅದಕ್ಕೆ **ಗೋಲ್ಡನ್‌ಗೇಟ** (ಸುವರ್ಣದ್ವಾರ) ಎಂದೆನ್ನುತ್ತಾರೆ. ಈ ಪಟ್ಟಣದ ಸುತ್ತಲೂ ಕೆಲಿಫೋರ್ನಿಯಾದೊಳಗಿನ ಹಣ್ಣಿನದೋಟಗಳಿರುವದರಿಂದ ಇಲ್ಲಿ ಹಣ್ಣುಗಳನ್ನು ಡಬ್ಬಿಗಳಲ್ಲಿ ತುಂಬಿ ಕಳಿಸುವ ಬಹು ದೊಡ್ಡ ಉದ್ಯೋಗವು ನಡೆಯುತ್ತದೆ. ಅದರಂತೆ ಪೆಟ್ರೋಲಿಯಮ್ ಸಹ ಹೋಗುತ್ತದೆ. ಪೂರ್ವ ಪಶ್ಚಿಮ ಮಹಾಸಾಗರಗಳನ್ನು ಜೋಡಿಸುವ ರೇಲು ಮಾರ್ಗವು ಈ ಪಟ್ಟಣಕ್ಕೆ ಹೊಂದಿ ಇರುತ್ತದೆ. ಆದ್ದರಿಂದ ಪೂರ್ವದ ಕಡೆಯ ಪ್ರದೇಶಕ್ಕೂ ಈ ಪಟ್ಟಣಕ್ಕೂ ನಡುವೆ ಚೆನ್ನಾಗಿ ವ್ಯಾಪಾರವು ಸಾಗುತ್ತದೆ. ಪನಾಮಾ ಕಾಲುವೆಯಾದಂದಿನಿಂದ ಅಮೇರಿಕೆಯ ಪೂರ್ವ ದಂಡೆಯ ಮೇಲಿರುವ ಬಂದರಗಳ ಕೂಡ ಮತ್ತು ಯುರೋಪದ ಕೂಡ ಈ ಪಟ್ಟಣದ ವ್ಯಾಪಾರವು ಬಹಳವಾಗಿ ಬೆಳೆದಿರುತ್ತದೆ. ಅದರಂತೆ ಈ ಬಂದರದಿಂದ ದೊಡ್ಡ ದೊಡ್ಡ ಉಗಿಹಡಗಗಳು ದಕ್ಷಿಣ ಅಮೇರಿಕೆಯ ಪಶ್ಚಿಮ ದಂಡೆಯ ಮೇಲಿನ ಬಂದರಗಳಿಗೂ ಚೀನ, ಜಪಾನ, ಆಸ್ಟ್ರೇಲಿಯಾ ಮುಂತಾದ ದೇಶಗಳಿಗೂ ಯಾವಾಗಲೂ ಹೋಗಿ ಬರುತ್ತಿರುತ್ತವೆ.

**ಲಾಸ್ ಎಂಜೆಲಿಸ್** ಎಂಬ ಪಟ್ಟಣವು ಕೆಲಿಫೋರ್ನಿಯಾದೊಳಗಿನ ಒಂದು ಬಂದರವಾಗಿರುತ್ತದೆ. ಇಲ್ಲಿಂದ ಪೆಟ್ರೋಲಿಯಮ್ ಎಣ್ಣೆಯು ಪರದೇಶಗಳಿಗೆ ಕಳಿಸಲ್ಪಡುತ್ತದೆ. ಮತ್ತು ಸುತ್ತಮುತ್ತಲಿನ ಹಣ್ಣಿನದೋಟಗಳಿಂದ ಹಣ್ಣುಗಳಾದರೂ ಹೋಗುತ್ತವೆ. ಈ ಪಟ್ಟಣದ ಬೆಳವಣಿಗೆಯ ಕಾರಣವೇನೆಂದರೆ ಇದರ ಹತ್ತರದಲ್ಲಿಯೇ ಅಮೇರಿಕೆಯೊಳಗಿನ ಸಿನೇಮಾ

ವ್ಯವಸಾಯದ ಮುಖ್ಯವಾದ ಠಾಣ್ಯವಿರುತ್ತದೆ. ಅದಕ್ಕೆ "ಹಾಲಿವುಡ್" ಎಂದೆನ್ನುತ್ತಾರೆ. ನಿರಭ್ರವಾದ ಆಕಾಶವೂ, ಉತ್ತಮವಾದ ಸೂರ್ಯ ಪ್ರಕಾಶವೂ ಇರುವದರಿಂದ ಈ ಛಾಯಾ ಚಿತ್ರ ವ್ಯವಸಾಯಕ್ಕೆ ಈ ಸ್ಥಳವು ಬಹಳ ಅನುಕೂಲವಾಗಿರುತ್ತದೆ.

ಪಶ್ಚಿಮದ ಕಡೆಯ ಗುಡ್ಡಗಾಡು ತಪ್ಪಲಿನ ಮೇಲೆ ಅಷ್ಟು ಜನವಸತಿಯು ಇರುವದಿಲ್ಲ; ಆದರೆ ಇತ್ತಲಾಗಿ ಈ ಪ್ರದೇಶವು ತಾಮ್ರ, ಬಂಗಾರ, ಬೆಳ್ಳಿ, ತವರು ಮುಂತಾದ ಧಾತುಗಳ ಖಣಿಗಳ ಮೂಲಕ ಪ್ರಸಿದ್ಧಿಗೆ ಬಂದಿರುತ್ತದೆ. ಅಲ್ಲಿಯ ಪಟ್ಟಣದೊಳಗೆ **ಡೆನ್ವ್ಹರ** ಮತ್ತು **ಸಾಲ್ಟ ಲೇಕ ಸಿಟಿ** ಎಂಬ ಮಹತ್ವವಾದ ಪಟ್ಟಣಗಳಿರುತ್ತವೆ.

## ೯ನೇ ಪ್ರಕರಣ

# ಜಪಾನ

ಎರಡನೇ (೧೯೩೭-೪೫) ಮಹಾಯುದ್ಧದ ಸಮಾಪ್ತಿಯ ಮುಂಚೆ ಜಪಾನವು ಜಗತ್ತಿನಲ್ಲಿ ಒಂದು ಪ್ರಬಲವಾದ ಮತ್ತು ಸಂಪನ್ನವಾದ ರಾಷ್ಟ್ರ




ಜಪಾನ

ವಾಗಿದ್ದಿತು. ಜಪಾನ ನಡುಗಡ್ಡೆಯಲ್ಲದೇ ಏಶಿಯಾ ಖಂಡದ ಮುಖ್ಯ ಪ್ರದೇಶದಲ್ಲಿರುವ ಕೋರಿಯ, ಮಂಚೂರಿಯಾ (ಮಾಂಚೂ-ರಿ-ಅ) ಮತ್ತು

ಪೆಸಿಫಿಕ್ ಮಹಾಸಾಗರದ ಕೆಲ ನಡುಗಡ್ಡೆಗಳ ಈ ಪ್ರದೇಶಗಳಲ್ಲಿ ಜಪಾನ ಸಾಮ್ರಾಜ್ಯವು ಹಬ್ಬಿದ್ದಿತು. ಮಹಾಯುದ್ಧದ ಸಮಯದಲ್ಲಿ ಜಪಾನವು ಆಗ್ನೇಯ ಏಶಿಯದ ಬಹಳ ಪ್ರದೇಶವನ್ನು ತನ್ನ ಹಸ್ತಗತ ಮಾಡಿಕೊಂಡಿದ್ದಿತು; ಮತ್ತು ಭಾರತದ ಈಶಾನ್ಯ ಗಡಿಯ ಪರ್ಯಂತ ಜಪಾನೀ ಸೈನ್ಯವು ಬೀಡು ಬಿಟ್ಟಿತ್ತು. ಆದರೆ ೧೯೪೫ ರಲ್ಲಿ ಮಿತ್ರರಾಷ್ಟ್ರದವರು ಹಿರೋಶಿಮಾ ಮತ್ತು ನಾಗಾಸಾಕೀ ಪಟ್ಟಣಗಳ ಮೇಲೆ ಅಣುಬಾಂಬನ್ನು ಉಪಯೋಗಿಸಿ ಜಪಾನದೇಶವನ್ನು ಸಂಪೂರ್ಣ ಪರಾಭವಗೊಳಿಸಿದರು. ಆದ್ದರಿಂದ ಜಪಾನಿಯರು ಎಲ್ಲ ದಿಕ್ಕಿನಿಂದ ಹಿಂದೆಗೆಯಬೇಕಾಯಿತು. ಜಪಾನ ಸಾಮ್ರಾಜ್ಯವು ನಾಮಶೇಷವಾಗಿ ಮಿತ್ರರಾಷ್ಟ್ರದ ಸೈನಿಕದಳವು ಜಪಾನವನ್ನು ವಶಪಡಿಸಿಕೊಂಡಿತು. ಈಗ ಐದು-ಆರು ವರುಷಗಳಲ್ಲಿ ಜಪಾನದ ರಾಜ್ಯ



— ಸಾನ — ಜಪಾನ

ದಾಡಳಿತದಲ್ಲಿ ಬಹಳ ಬದಲಾವಣೆಯಾಗಿರುತ್ತದೆ. ಇದೀಗ ಜಪಾನಕ್ಕೆ ಎಷ್ಟೋ ರೀತಿಯಿಂದ ಸ್ವಾಯತ್ತತೆಯು ಸಿಕ್ಕು, ಅದು ಸ್ವತಂತ್ರ ರಾಷ್ಟ್ರವಾಗುತ್ತಿರುವದು ಎಂದು ಹೇಳಲಡ್ಡಿಯಿಲ್ಲ. ಇಂದು ಜಪಾನ ದೇಶವು ಮೊದಲಿನ ನಾಲ್ಕು ನಡುಗಡ್ಡೆಗಳಷ್ಟೇ ಉಳಿದಿರುವದು. ಆ ನಡುಗಡ್ಡೆಗಳಾವ

ವೆಂದರೆ **ಹೋಕೈಡೊ** (ಯೇಝೋ), ಹೊನ್ಶೂ, ಶಿಕೋಕೂ, ಮತ್ತು **ಕ್ಯೂಶೂ.** ಈ ನಡುಗಡ್ಡೆಗಳು ಏಶಿಯಾ ಖಂಡದ ಪೂರ್ವ ದಿಕ್ಕಿನ ಮೂಲೆಯಲ್ಲಿ ದಕ್ಷಿಣೋತ್ತರವಾಗಿ ಪಸರಿಸಿವೆ. ಅದರ ಪಶ್ಚಿಮಕ್ಕೆ ಸಮುದ್ರವು ಅತಿ ಆಳವಿರದೆ ಪೂರ್ವಕ್ಕೆ ಬಹು ಆಳವಾಗಿ ಪೆಸಿಫಿಕ್ ಮಹಾ ಸಾಗರವಿರುತ್ತದೆ. ಮೇಲೆ ಹೇಳಿದ ನಾಲ್ಕು ನಡುಗಡ್ಡೆಗಳಲ್ಲಿ **ಹೊನಸೂ** ನಡುಗಡ್ಡೆಯು ದೊಡ್ಡದಾಗಿದೆ. ಈ ನಾಲ್ಕೂ ನಡುಗಡ್ಡೆಗಳ ವಿಸ್ತಾರವು ೧,೪೨,೦೦೦ ಚೌ. ಮೈ. ಇದ್ದು ಜನಸಂಖ್ಯೆಯು ಸುಮಾರು ೮೩ ಕೋಟಿ ಇರುತ್ತದೆ.

ಜಪಾನದ ದ್ವೀಪಗಳ ಸ್ವಾಭಾವಿಕ ರಚನೆಯನ್ನು ನೋಡಿದರೆ, ಅಲ್ಲಿ ಪ್ರಾಚೀನ ಕಾಲದಲ್ಲಿ ಉನ್ನತವಾದ ಪರ್ವತದ ಒಂದು ಸಾಲು ಇತ್ತೆಂತಲೂ ಮುಂದೆ ಅದು ಸಮುದ್ರದೊಳಗೆ ಮುಳುಗಿ ನೀರಿನ ಮೇಲೆ ಉಳಿದ ಅದರ ಎತ್ತರವಾದ ಭಾಗಗಳೇ ಈಗಿನ ದ್ವೀಪಗಳ ರೂಪದಿಂದ ಕಾಣಿಸುತ್ತಿರಬೇಕೆಂತಲೂ ಅನಿಸುತ್ತದೆ. ಈ ರಚನೆಯಿಂದ ಈ ದ್ವೀಪಗಳ ಕರಾವಳಿಯು ತೀರ ಬಡಕಾಗಿದ್ದು, ಅಲ್ಲಲ್ಲಿ ಸುರಕ್ಷಿತವಾದ ಬಂದರಗಳಾಗಿರುತ್ತವೆ. ಆದರೆ ದ್ವೀಪಗಳ ಮಧ್ಯಭಾಗದಲ್ಲಿ ಗುಡ್ಡಗಾಡು ಪ್ರದೇಶವಿದ್ದು, ಕೇವಲ ಕೊಳ್ಳಗಳಲ್ಲಿಯೂ, ಸಮುದ್ರ ದಂಡೆಯ ಮೇಲಿನ ಪಟ್ಟಿಗಳಲ್ಲಿಯೂ ಒಕ್ಕಲತನಕ್ಕೆ ಯೋಗ್ಯವಾದ ಭೂಮಿಯು ಕಂಡುಬರುತ್ತದೆ. ಜನವಸತಿಯಾದರೂ ಇದೇ ಭಾಗದೊಳಗೆ ಹೆಚ್ಚಾಗಿ ಇರುವದು.

ಜಪಾನದೊಳಗೆ ಭೂಕಂಪಗಳು ಯಾವಾಗಲೂ ಆಗುತ್ತಿರುತ್ತವೆ. ಜ್ವಾಲಾಮುಖಿ ಪರ್ವತಗಳಾದರೂ ಹಲವು ಉಂಟು. **ಫೂಜೀ** ಎಂಬ ಹೆಸರಿನ ೧೨ ಸಾವಿರ ಅಡಿ ಎತ್ತರವಾದ ಪರ್ವತವು ಪೂರ್ವಕಾಲದಲ್ಲಿ ಜ್ವಾಲಾ ಮುಖಿಯಾಗಿತ್ತು. ಆದರೆ ಈಗ ಅದು ನಿದ್ರಾವಸ್ಥೆಯಲ್ಲಿರುತ್ತದೆ. ಅದು ಬಹು ರಮಣೀಯವಾಗಿದ್ದು, ಜಪಾನದ ಜನರು ಅದನ್ನು ಯಾತ್ರೆಯ ಸ್ಥಾನವೆಂದು ತಿಳಿಯುತ್ತಾರೆ.

ದಕ್ಷಿಣೋತ್ತರ ಮೂರು ಸಾವಿರ ಮೈಲುಗಳ ವರೆಗೆ ಹಬ್ಬಿದ ಜಪಾನೀ ದ್ವೀಪಗಳಲ್ಲಿ ಅತಿ ಶೀತವಾದ ಹವಾಮಾನದಿಂದ ಅತಿ ಉಷ್ಣ ಹವಾಮಾನದ ವರೆಗಿನ ಯಾವತ್ತೂ ತರದ ಹವಾಮಾನವು ಕಂಡುಬರುವದು ಸ್ವಾಭಾವಿಕ

ವಾಗಿರುತ್ತದೆ. ಈ ದ್ವೀಪದೊಳಗೆ ಉತ್ತರದ ಕಡೆಗೆ ಸೂಚಿಪರ್ಣಿವೃಕ್ಷಗಳೂ, ದಕ್ಷಿಣದ ಕಡೆಗೆ ಅಗಲಾದ ಎಲೆಗಳುಳ್ಳ ವೃಕ್ಷಗಳೂ ಕಂಡುಬರುತ್ತವೆ. ದ್ವೀಪಗಳ ದಕ್ಷಿಣದ ಕಡೆಯ ಬಹು ಭಾಗವು ಮಾನ್ಸೂನ ಗಾಳಿಗಳ ಮರ್ಯಾದೆಯಲ್ಲಿ ಬರುತ್ತದೆ. ಈ ಪ್ರದೇಶದೊಳಗೆ, ವಿಶೇಷತಃ ದಕ್ಷಿಣ ದಂಡೆಯ ಮೇಲೆ ಪೆಸಿಫಿಕ್ ಮಹಾಸಾಗರದ ಮೇಲಿಂದ ಬೀಸುವ ಗಾಳಿಗಳಿಂದ ಚೆನ್ನಾಗಿ ಮಳೆಯಾಗುತ್ತದೆ. ಚಳಿಗಾಲದೊಳಗೆ ಏಶಿಯಾ ಖಂಡದೊಳಗಿನ ತಂಪು ಪ್ರದೇಶದಿಂದ ಬರುವ ಗಾಳಿಗಳಿಂದ ಜಪಾನ ದ್ವೀಪಗಳ ಪಶ್ಚಿಮ ದಂಡೆಯ ಮೇಲೆ ಮಳೆಯೂ, ಹಿಮವೂ ಬೀಳುತ್ತದೆ. ಜಪಾನದ ದಕ್ಷಿಣದ ಮತ್ತು ಪೂರ್ವ ದಂಡೆಗಳ ಹತ್ತರದಿಂದ **ಕುರೋಸಿವೊ** ಎಂಬ ಹೆಸರಿನ ಉಷ್ಣ ನೀರಿನ ಪ್ರವಾಹವು ಹರಿಯುತ್ತದೆ. ಅದರದೇ ಒಂದು ಶಾಖೆಯು ಪಶ್ಚಿಮ ದಂಡೆಯ ಕಡೆಗೆ ಹೋಗುತ್ತದೆ. ಈ ಪ್ರವಾಹದಿಂದ ಜಪಾನದ ದಕ್ಷಿಣದ ಭಾಗದೊಳಗಿನ ಹವೆಯು ಅಷ್ಟು ಶೀತವಾಗಿರುವದಿಲ್ಲ; ಆದರೆ ಕುರಾಯಿಲ ಮತ್ತು ಯೇಝೋ ಎಂಬ ದ್ವೀಪಗಳ ಪೂರ್ವದಂಡೆಗುಂಟ ಶೀತ ಪ್ರವಾಹವು ಹರಿಯುತ್ತದೆ. ಆದ್ದರಿಂದ ಈ ದ್ವೀಪಗಳ ಉತ್ತರ ದಿಕ್ಕಿನ ಕಡೆಯ ಹವೆಯು ಅತಿ ಶೀತವಾಗಿದ್ದದ್ದು ಕಂಡುಬರುತ್ತದೆ.

**ಜನರು:**—ಜಪಾನದ ಜನರು ಅರಿಸಿಣ ಬಣ್ಣದವರಿದ್ದು ಮುಖ್ಯವಾಗಿ ಬೌದ್ಧಮತದವರಿರುತ್ತಾರೆ. ಜಪಾನ ದೇಶವು ಎಲ್ಲ ತರದ ಆಧುನಿಕ ಸುಧಾರಣೆಗಳಿಂದ ಪರಿಪೂರ್ಣವಾಗಿರುವದರಿಂದ, ಅದು ಏಶಿಯಾ ಖಂಡದೊಳಗೆ ಎಲ್ಲ ದೇಶಗಳಲ್ಲಿ ಶ್ರೇಷ್ಠತೆಯನ್ನು ಪಡೆದಿರುವದಲ್ಲದೆ ಇಂಗ್ಲಂಡ, ಫ್ರಾನ್ಸ, ಸಂಯುಕ್ತ ಸಂಸ್ಥಾನ ಮತ್ತು ಜರ್ಮನೀಗಳಂಥ ಮುಂದುವರಿದ ಪಾಶ್ಚಾತ್ಯ ರಾಜ್ಯಗಳ ಮಾಲಿಕೆಯಲ್ಲಿ ಅದು ಎಣಿಸಲ್ಪಡುತ್ತದೆ. ೭೦ ವರ್ಷಗಳ ಹಿಂದೆ ಈ ದೇಶದೊಳಗೆ ಪಾಶ್ಚಾತ್ಯ ದೇಶಗಳ ಸುಧಾರಣೆಗಳ ಹೆಸರು ಸಹ ಗೊತ್ತಿದ್ದಿಲ್ಲ; ಆದರೆ ೧೮೭೦ರ ಸುಮಾರಕ್ಕೆ ನಿದ್ರೆಯಿಂದ ಒಮ್ಮೆಲೆ ಎಚ್ಚತ್ತ ಹಾಗೆ ಜಪಾನ ಜನರು ಸಂಪೂರ್ಣವಾಗಿ ತಮ್ಮ ಉನ್ನತಿಯನ್ನು ಮಾಡಿಕೊಳ್ಳುವ ನಿಶ್ಚಯವನ್ನು ಮಾಡಿದರು. ಈ ಕಾರ್ಯಕ್ಕೆ ರಾಜನೂ ಪ್ರಜರೂ ಕೂಡಿಯೇ ಒಮ್ಮನಿಸ್ಸಿನಿಂದ ಆರಂಭಿಸಿದರು. ಸಾವಿರಾರು ಜನ ತರುಣರು ಯುರೋಪ ಮತ್ತು ಅಮೇರಿಕೆಗಳಿಗೆ ಹೋಗಿ ತರತರದ ವಿದ್ಯೆಗಳನ್ನೂ ಕಲೆಗಳನ್ನೂ ಕಲಿತು ಸ್ವದೇಶಕ್ಕೆ ಬಂದು, ಅಲ್ಲಿ ಜ್ಞಾನದ ಪ್ರಸಾರವನ್ನು ಬಹು ತೀವ್ರ

ವಾಗಿ ಮಾಡಿದರು. ಅದರಂತೆ ಪರದೇಶದೊಳಗಿನ ವಿದ್ವಾನ್ ಜನರನ್ನೂ ಕೈಗಾರಿಕೆಯಲ್ಲಿ ನಿಪುಣರಾದ ಜನರನ್ನೂ ನೌಕರರನ್ನಾಗಿ ಇಟ್ಟುಕೊಂಡು ಅವರ ಸಹಾಯದಿಂದ ಬೇರೆ ಬೇರೆ ಉದ್ಯೋಗ—ವ್ಯವಸಾಯಗಳನ್ನೂ ಕಾರ ಖಾನೆಗಳನ್ನೂ ನಡೆಸಲಿಕ್ಕೆ ತಮ್ಮ ಜನರನ್ನು ಸಮರ್ಥರನ್ನಾಗಿ ಮಾಡಿದರು. ಶಿಕ್ಷಣದ ಪ್ರಸಾರವನ್ನಂತೂ ಬಹು ತೀವ್ರವಾಗಿ ಮಾಡಿದರು. ಈಗ ಜಪಾ



ಜಪಾನದ ಹೆಂಗಸರೂ ಹುಡುಗರೂ

ನದೊಳಗೆ ನಿರಕ್ಷರರಾದ ಹೆಂಗಸರಾಗಲಿ ಗಂಡಸರಾಗಲಿ ಸಿಗುವದು ಅಪರೂಪ.

ಜಪಾನದ ದ್ವೀಪಗಳು ಬಹಳ ಗುಡ್ಡಗಾಡು ಇರುವದರಿಂದ ಜನವಸ ತಿಯು ಹೆಚ್ಚಾಗಿ ದಂಡೆಯ ಮೇಲಿರುವ ಸಪಾಟಾದ ಭಾಗದಲ್ಲಿ ಪಸರಿಸಿರು

ತ್ತದೆ. ದಂಡೆಯು ಒಡಕಾಗಿರುವದರಿಂದ ಜನರು ಮೊದಲಿನಿಂದಲೇ ಕುಶಲರಾದ ನಾವಿಕರಾಗಿರುತ್ತಾರೆ. ಹೊಸ ಸುಧಾರಣೆಯ ಸಂಗಡಲೇ ಜಪಾನವು ಉಗಿಹಡಗಗಳನ್ನೂ ಹಡಗು ಪಡೆಗಳನ್ನೂ ಸಾಕಷ್ಟು ಬೆಳೆಸಿತು. ಆದರೆ ಕಾಲನ ಮಹಿಮೆಯಿಂದ ಈಗ ಇದರ ಪ್ರಗತಿಯು ತಡೆದು ನಿಂತಿರುವದು.

ಸಮುದ್ರದ ಹತ್ತರ ಇರುವದರಿಂದ ಜಪಾನೀ ಜನರು ಮೀನು ಹಿಡಿಯುವ ಉದ್ಯೋಗದಲ್ಲಿ ಬಹು ಜಾಣರಾಗಿರುತ್ತಾರೆ. ಈ ಉದ್ಯೋಗದಿಂದ ಲಕ್ಷಾವಧಿ ಜನರು ಹೊಟ್ಟೆ ತುಂಬಿಕೊಳ್ಳುತ್ತಾರೆ. ಜಪಾನೀ ಜನರು ತಮ್ಮ ಆಹಾರದೊಳಗೆ ಅಕ್ಕಿಯ ಸಂಗಡ ಮೀನುಗಳನ್ನು ಬಹಳವಾಗಿ ಉಪಯೋಗಿಸುತ್ತಾರೆ. ಅದರಂತೆ ಗೊಬ್ಬರದ ಸಲುವಾಗಿ ಸಹ ಮೀನುಗಳನ್ನು ಬಹಳ ಉಪಯೋಗಿಸುತ್ತಾರೆ.

ಮೇಲಿಂದ ಮೇಲೆ ಸಂಭವಿಸುವ ಭೂಕಂಪಗಳಿಂದ ಜಪಾನೀ ಜನರ ಜೀವನದ ಮೇಲೆಯೂ ಅವರ ಇರುವಿಕೆಯ ಮೇಲೆಯೂ ಬಹಳ ಪರಿಣಾಮವಾದದ್ದು ಕಂಡುಬರುತ್ತದೆ. ಬೇಕಾದಂಥ ಸಂಕಟವು ಬಂದರೂ ಅದನ್ನು ಶಾಂತರೀತಿಯಿಂದ ಎದುರಿಸಲಿಕ್ಕೆ ಅವರು ಯಾವಾಗಲೂ ಸಿದ್ಧರಾಗಿರುತ್ತಾರೆ. ಮರಣಕ್ಕೆ ಅವರು ಅಂಜುವದಿಲ್ಲ. ಅವರು ಕಲ್ಲಿನಿಂದಾಗಲಿ ಇಟ್ಟಂಗಿಗಳಿಂದಾಗಲಿ ಮನೆಗಳನ್ನು ಕಟ್ಟುವದಿಲ್ಲ. ಈ ಕೆಲಸಕ್ಕೆ ಅವರು ಕಟ್ಟಿಗೆ, ಬಿದುರು, ಕಾಗದದ ದಪ್ಪಾದ ರಟ್ಟುಗಳನ್ನು ಉಪಯೋಗಿಸುತ್ತಾರೆ. ಭೂಕಂಪದಿಂದ ಇಂಥ ಮನೆಗಳು ಬಿದ್ದರೂ ಅದರಿಂದ ಅಷ್ಟು ಪ್ರಾಣಹಾನಿಯಾಗುವದಿಲ್ಲ; ಮತ್ತು ಅವುಗಳನ್ನು ಕಟ್ಟಲಿಕ್ಕೆ ಅಷ್ಟು ವೆಚ್ಚವೂ ತಗಲುವದಿಲ್ಲ.

ಜಪಾನೀ ಜನರು ಸ್ವಚ್ಛತೆಯನ್ನೂ, ಸೌಂದರ್ಯವನ್ನೂ, ಅಚ್ಚುಕಟ್ಟುತನವನ್ನೂ ಬಹು ಪ್ರೀತಿಸುತ್ತಾರೆ. ಸ್ತ್ರೀಪುರುಷರಿಗೂ ಹುಡುಗರಿಗೂ ಹೂಗಳು ವಿಶೇಷವಾಗಿ ಸೇರುತ್ತವೆ. ಜಪಾನೀ ಜನರು ಬಹಳ ಸಭ್ಯರಾಗಿರುತ್ತಾರೆ. ದೇಶಭಕ್ತಿಯೂ ರಾಜನಿಷ್ಠೆಯೂ ಅವರಲ್ಲಿ ವಿಶೇಷವಾಗಿ ಕಂಡುಬರುತ್ತವೆ.

ಜಪಾನದೊಳಗೆ ಆಕಳು, ಕುದುರೆ, ಕುರಿ, ಆಡು ಮುಂತಾದ ಸಾಕಿದ ಪಶುಗಳು ತೀರ ಕಡಿಮೆ ಇರುತ್ತವೆ. ಇದು ಈ ದೇಶದ ವೈಶಿಷ್ಟ್ಯವೆಂದು

ಹೇಳಬಹುದು. ಇದರ ಕಾರಣವೇನಂದರೆ, ಇಲ್ಲಿ ಹುಲ್ಲುಗಾವಲುಗಳು ತೀರ ಕಡಿಮೆಯಾಗಿರುತ್ತವೆ. ಸಿಕ್ಕಷ್ಟು ಭೂಮಿಯನ್ನೆಲ್ಲ ಒಕ್ಕಲತನದ ಸಲುವಾಗಿ ಉಪಯೋಗಿಸುತ್ತಾರೆ. ಇದರಿಂದ ಇಲ್ಲಿಯ ಜನರ ಆಹಾರದೊಳಗೆ ಹೈನಿನ ಪದಾರ್ಥಗಳಾಗಲಿ ಮಾಂಸವಾಗಲಿ ಅಪರೂಪವಾಗಿ ಕಂಡುಬರುತ್ತವೆ. ಬೂಟುಗಳನ್ನು ತೊಗಲಿನ ಬದಲು ಕಟ್ಟಿಗೆಗಳಿಂದ ಮಾಡುವರು. ಮತ್ತು ಈ ಕೆಲಸವನ್ನು ಬಹುತರವಾಗಿ ಬಡಿಗನೇ ಮಾಡುತ್ತಾನೆ. ಸರಕುಗಳನ್ನು ಹೊತ್ತೊಯ್ಯುವದನ್ನು ಅಥವಾ ನಮ್ಮ ಧೇಶದಲ್ಲಿ ಕುದುರೆ, ಎತ್ತುಗಳು ಮಾಡುವ ಬೇರೆ ಕೆಲಸಗಳನ್ನು ಜಪಾನದಲ್ಲಿ ಮನುಷ್ಯರೇ ಮಾಡುತ್ತಾರೆ. 'ಜಿನಿ–ರಿಕಿ–ಶಾ' ಇದರ ಅರ್ಥವು ಮನುಷ್ಯನು ಜಗ್ಗುವ ಗಾಡಿ ಎಂದಾಗುತ್ತದೆ. ಇದಕ್ಕೆ 'ರಿಕ್‌ಶಾ' ಎಂತಲೂ ಅನ್ನುತ್ತಾರೆ. ಇಂಥ ಗಾಡಿಗಳಲ್ಲಿ ಜನರು ಕೂತು ಓಡಾಡುವದನ್ನು ಪಟ್ಟಣಗಳಲ್ಲಿ ನೋಡಬಹುದು. ಎಷ್ಟೋ ಕಡೆಯಲ್ಲಿ ಒಕ್ಕಲುತನದ ಕೆಲಸವನ್ನು ಸಹ ಜನರೇ ದುಡಿದು ಮಾಡುತ್ತಾರೆ. ರಂಟೆಗಳ ಬದಲಾಗಿ ಸಲಿಕೆ–ಗುದ್ದಲಿಗಳನ್ನು ಉಪಯೋಗಿಸುತ್ತಾರೆ. ಜಪಾನದೊಳಗೆ ಹೊಲಗಳು ತೀರ ಸಣ್ಣವಾಗಿರುತ್ತವೆ. ಜಪಾನದ ಒಕ್ಕಲಿಗನಷ್ಟು ಕಷ್ಟಮಾಡುವವನೂ, ಚತುರನೂ ಆದ ಇನ್ನೊಬ್ಬ ಒಕ್ಕಲಿಗನು ಜಗತ್ತಿನೊಳಗೆ ಯಾವ ದೇಶದಲ್ಲಿಯೂ ಇರುವದಿಲ್ಲೆಂದು ಹೇಳಬಹುದು.

**ಪಟ್ಟಣಗಳು :**—ರಾಜಧಾನಿಯ ಸ್ಥಳವಾದ **ಟೋಕಿಯೋ** ಎಂಬ ಪಟ್ಟಣವು ಜಪಾನದೊಳಗಿನ ಎಲ್ಲಕ್ಕೂ ದೊಡ್ಡ ಬೈಲು ಪ್ರದೇಶದ ಮಧ್ಯದಲ್ಲಿರುತ್ತದೆ. ಸುಮಾರು ೬೦–೭೦ ವರುಷಗಳ ಹಿಂದೆ ಕಿಯೋಟೋದಿಂದ ರಾಜಧಾನಿಯನ್ನು ಇಲ್ಲಿ ತಂದಾಗಿನಿಂದ ಜಪಾನದ ವೈಭವದ ಸಂಗಡಲೇ ಈ ಪಟ್ಟಣವಾದರೂ ಬೆಳವಣಿಗೆಯನ್ನು ಹೊಂದಿತು. ಟೋಕಿಯೋ ಇದು ಬಂದರವೂ ಇರುತ್ತದೆ; ಆದರೆ ಈಗ ಅದು ರೇವೆಯಿಂದ ತುಂಬಿ ಬಂದದ್ದರಿಂದ ದೊಡ್ಡ ದೊಡ್ಡ ಹಡಗಗಳು ಇಲ್ಲಿ ಬರುವದಿಲ್ಲ. ಇಲ್ಲಿಂದ ಸಮೀಪದಲ್ಲಿಯೇ ಇಪ್ಪತ್ತು ಮೈಲಿನ ಮೇಲೆ **ಯೋಕೋಹಾಮಾ** ಎಂಬ ದೊಡ್ಡ ಬಂದರವಿರುತ್ತದೆ. ಟೋಕಿಯೋದ ವ್ಯಾಪಾರಕ್ಕೆ ಈ ಬಂದರದ ಉಪಯೋಗವು ಬಹಳವಾಗಿರುತ್ತದೆ. ಪರದೇಶಗಳ ಸಂಗಡ ಜಪಾನದ ದೊಡ್ಡ ವ್ಯಾಪಾರವು ಈ ಬಂದರದೊಳಗಿಂದಲೇ ನಡೆಯುತ್ತದೆ. ಜಗತ್ತಿ

ನೊಳಗಿನ ಎಷ್ಟೋ ರಾಷ್ಟ್ರಗಳ ಉಗಿಹಡಗಗಳು ಈ ಬಂದರದೊಳಗೆ ಕಾಣಿಸುತ್ತವೆ. ೧೯೨೩ ನೇ ವರುಷದಲ್ಲಾದ ಭೂಕಂಪದಿಂದ ಟೋಕಿಯೋ ಮತ್ತು ಯೋಕೋಹಾಮಾ ಇವೆರಡೂ ಪಟ್ಟಣಗಳಿಗೆ ಬಹು ದೊಡ್ಡ ಹಾನಿ ತಟ್ಟಿತು; ಆದರೆ ಅವು ತಮ್ಮ ಪೂರ್ವದ ವೈಭವವನ್ನು ಪುನಃ ಪಡೆದಿರುತ್ತವೆ.

**ಓಸಾಕಾ:**—ಈ ಪಟ್ಟಣವು ಜಪಾನದೊಳಗೆ ಎಲ್ಲಕ್ಕೂ ದೊಡ್ಡ ಕಾರಖಾನೆಗಳ ಪಟ್ಟಣವಾಗಿರುತ್ತದೆ. ಇಲ್ಲಿ ಹತ್ತಿಯ ಎಷ್ಟೋ ಗಿರಣಿಗಳು ಇರುತ್ತವೆ. ಆದ್ದರಿಂದ ಇದಕ್ಕೆ ಜಪಾನದ ಮಂಚೆಸ್ಟರ ಎಂದು ಅನ್ನುವದುಂಟು. ಆದರೆ ಈ ಪಟ್ಟಣದ ಬಂದರವು ಅಷ್ಟು ಸುರಕ್ಷಿತವಾಗಿರುವದಿಲ್ಲ. ಆದ್ದರಿಂದ ಇಲ್ಲಿಂದ ಹನ್ನೆರಡು ಮೈಲಿನ ಮೇಲಿರುವ **ಕೋಬೇ** ಎಂಬ ಬಂದರದಿಂದ ಅದಕ್ಕೆ ಬಹಳ ಉಪಯೋಗವಾಗುತ್ತದೆ. ಓಸಾಕಾ ಮತ್ತು ಕೋಬೇ ಪಟ್ಟಣಗಳು ನೂಲು, ಉಣ್ಣೆ ಮತ್ತು ರೇಶಿಮೆಯ ಅರಿವೆಗಳ ಗಿರಣಿಗಳಿಂದ ತುಂಬಿತುಳುಕುತ್ತವೆ. ಇವಲ್ಲದೆ ಈ ಎರಡೂ ಪಟ್ಟಣಗಳೊಳಗೆ ಕಾಗದ, ಕಡ್ಡಿಪೆಟ್ಟಿಗೆ, ಸಾಬಣ ಮುಂತಾದ ಪದಾರ್ಥಗಳನ್ನು ತಯಾರಿಸುವ ಕಾರಖಾನೆಗಳಾದರೂ ಎಷ್ಟೋ ಇರುತ್ತವೆ.

ಓಸಾಕಾ ಪಟ್ಟಣದ ಉತ್ತರಕ್ಕೆ ಸುಮಾರು ೩೦ ಮೈಲಿನ ಮೇಲೆ **ಕಿಯೋಟೋ** ಎಂಬ ಪಟ್ಟಣವಿರುತ್ತದೆ. ಇದು ಜಪಾನದ ಹಳೇ ರಾಜಧಾನಿಯಾಗಿತ್ತು. ಆದ್ದರಿಂದ ಇಲ್ಲಿ ದೇವಾಲಯಗಳೂ ಅರಮನೆಗಳೂ ಬಹಳ ಉಂಟು. ಜಪಾನದ ಪ್ರಾಚೀನ ಕಾಲದ ವೈಭವವು ಇಲ್ಲಿ ಕಂಡುಬರುತ್ತದೆ. ಎಷ್ಟೋ ತರದ ಕೈಗಾರಿಕೆಯ ಕೆಲಸಗಳು ಇಲ್ಲಿ ನಡೆಯುತ್ತವೆ. ಹೊಸ ಮತ್ತು ಹಳೇ ರಾಜಧಾನಿಗಳ ನಡುವೆ **ನಾಗಾಯೋ** ಎಂಬ ದೊಡ್ಡ ಪಟ್ಟಣವಿರುತ್ತದೆ. ಅಲ್ಲಿ ಸಹ ನಾನಾ ತರದ ದೊಡ್ಡ ದೊಡ್ಡ ಕಾರಖಾನೆಗಳಿರುತ್ತವೆ. ಚೀನೀ ಮಣ್ಣಿನ ಪಾತ್ರೆಗಳ ಸಲುವಾಗಿ ಅದು ವಿಶೇಷವಾಗಿ ಪ್ರಸಿದ್ಧವಾಗಿರುತ್ತದೆ. ಈ ಪಟ್ಟಣದ ಬಂದರವು ಈಗ ರೇವೆಯಿಂದ ತುಂಬಿರುವದರಿಂದ ದೊಡ್ಡ ದೊಡ್ಡ ಹಡಗಗಳು ಬರುವದಿಲ್ಲ.

ಕ್ಯೂಶೂ ದ್ವೀಪದ ಪಶ್ಚಿಮ ದಂಡೆಯ ಮೇಲೆ **ನಾಗಾಸಾಕೀ** ಎಂಬ ಹೆಸರಿನ ಉತ್ಕೃಷ್ಟವಾದ ಬಂದರವಿರುತ್ತದೆ. ಇಲ್ಲಿಂದ ಚೀನದೇಶದ ಸಂಗಡ

ಬಹು ದೊಡ್ಡ ವ್ಯಾಪಾರವು ಸಾಗುತ್ತಿತ್ತು. ಇದರ ಹತ್ತರ ಕಲ್ಲಿದ್ದಲಿಯ ಖಣಿಗಳಿರುವವರಿಂದ, ಹಡಗಗಳಿಗೆ ಇಲ್ಲಿಂದ ಕಲ್ಲಿದ್ದಲಿಯನ್ನು ತೆಗೆದುಕೊಳ್ಳಲಿಕ್ಕೆ ಬಹಳ ಅನುಕೂಲವಾಗುತ್ತಿತ್ತು. ಆದರೆ ಅಣುಬಾಂಬಿನ ದಾಳಿಯಿಂದ ಈ ಪಟ್ಟಣವೆಲ್ಲ ಹಾಳಾಗಿ ಹೋಗಿ ಇಂದಿಗೆ ಅದರ ಮಹತ್ವವು ಹೇಳಿಕೊಂಬುವಷ್ಟಿಲ್ಲ. ಇಲ್ಲಿ ದೊಡ್ಡ ಹಡಗಗಳನ್ನು ಕಟ್ಟುವ ಕಾರಖಾನೆಗಳಿದ್ದವು. ಇದಲ್ಲದೆ ಇದು ಜಪಾನ ದೇಶದ ಹಡಗು ಪಡೆಯ ಮಹತ್ವವಾದ ಒಂದು ಠಾಣ್ಯವಾಗಿದ್ದಿತು.

**ಒಕ್ಕಲತನವು:**—ಜಪಾನೀ ನಡುಗಡ್ಡೆಗಳ ಬಹುತರ ಎಲ್ಲ ಭಾಗವು ಗುಡ್ಡಗಳಿಂದ ತುಂಬಿರುತ್ತದೆ. ಯಾವತ್ತೂ ಭೂಮಿಯ ಎಂಟನೇ ಪಾಲು ಮಾತ್ರ ಒಕ್ಕಲತನಕ್ಕೆ ಉಪಯೋಗವುಳ್ಳದ್ದಿರುತ್ತದೆ. ಜಪಾನ ದೇಶದೊಳಗೆ ಜನವಸತಿಯು ದಟ್ಟಾಗಿರುವದರಿಂದ ಸಾಗುಮಾಡಲಿಕ್ಕೆ ಶಕ್ಯವಿದ್ದ ಭೂಮಿಯಲ್ಲಿ ಒಕ್ಕಲತನವು ಸಾಗುತ್ತದೆ. ಇಂಥ ಭೂಮಿಯು ಸಮುದ್ರದ ಸಮೀಪಕ್ಕೆ ಮತ್ತು ಗುಡ್ಡಗಳ ದರಿಗಳಲ್ಲಿ ತುಸುಮಟ್ಟಿಗೆ ಇರುತ್ತದೆ. ದಕ್ಷಿಣದ ಬದಿಗೆ ಮಳೆಯು ಸಾಕಷ್ಟು ಆಗುವದಲ್ಲದೆ ಉಷ್ಣತೆಯಾದರೂ ಸಾಕಷ್ಟು ಇರುತ್ತದೆ. ಆದ್ದರಿಂದ ಇಲ್ಲಿ ಮುಖ್ಯವಾಗಿ ಅಕ್ಕಿಯನ್ನು ಬೆಳೆಯುತ್ತಾರೆ. ಉತ್ತರದ ಬದಿಗೆ ಮಳೆಯ ಪ್ರಮಾಣವು ಕಡಿಮೆಯಾಗಿರುತ್ತದೆ. ಮತ್ತು ಚಳಿಯಾದರೂ ಇರುತ್ತದೆ; ಆದ್ದರಿಂದ ಆ ಭಾಗದೊಳಗೆ ಗೋದಿ, ಜವೆಗೋದಿ, ರಾಯ ಮತ್ತು ಸೋಯಾಬೀನ್ ಎಂಬ ಹೆಸರಿನ ಬಿಳೇ ಬಣ್ಣದ ಬಟಗಡಲೆಯ ಹಾಗೆ ಕಾಣುವ ಒಂದು ಪ್ರಕಾರದ ಧಾನ್ಯಗಳನ್ನು ವಿಶೇಷವಾಗಿ ಬೆಳೆಯುತ್ತಾರೆ. ಎಷ್ಟೋ ಕಡೆಯಲ್ಲಿ ಬೇಸಿಗೆಯಲ್ಲಿ ಅಕ್ಕಿಯನ್ನೂ ಚಳಿಗಾಲದೊಳಗೆ ಗೋದಿಯನ್ನೂ ಬೆಳೆಯುತ್ತಾರೆ. ಸೋಯಾ ಎಂಬ ಧಾನ್ಯವು ಮನುಷ್ಯರಿಗೂ ದನಗಳಿಗೂ ಉಪಯೋಗವಾಗುತ್ತದೆ; ಮತ್ತು ಅದರ ಎಣ್ಣೆಯಿಂದ ಮೇಣಬತ್ತಿಗಳನ್ನೂ, ಸಾಬಣಗಳನ್ನೂ ತಯಾರಿಸುತ್ತಾರೆ. ಜಪಾನದೊಳಗೆ ಸಾಗುಮಾಡಲ್ಪಟ್ಟ ಭೂಮಿಯಲ್ಲಿ ಹೆಚ್ಚಾಗಿ ಆಹಾರ ಧಾನ್ಯಗಳನ್ನು ಬೆಳೆಸುವರು. ಜಪಾನದ ದಟ್ಟಾದ ಮತ್ತು ನಿಬಿಡ ಜನವಸತಿಗಳೊಳಗೆ ಬೆಳೆಯುವ ಧಾನ್ಯಗಳು ಸಾಕಾಗದ್ದರಿಂದ ಪರದೇಶಗಳಿಂದ ಅಕ್ಕಿಯನ್ನು ಹೆಚ್ಚಾಗಿ ತರಿಸಬೇಕಾಗುತ್ತದೆ.

ಜಪಾನದೊಳಗೆ ರೇಶಿಮೆಯು ವಿಪುಲವಾಗಿ ಹುಟ್ಟುತ್ತದೆ. ರೇಶಿ ಮೆಯ ಹುಳಗಳು ತುತ್ತೀ ಗಿಡಗಳ ಎಲೆಗಳ ಮೇಲೆ ಜೀವಿಸುತ್ತವೆ. ಗುಡ್ಡ ಗಾಡಿನ ಭಾಗದೊಳಗೆ ಈ ಗಿಡಗಳನ್ನು ಹಚ್ಚುತ್ತಾರೆ. ಹೋನಶೂ ದ್ವೀಪದ ನಡುವಿನ ಭಾಗದೊಳಗಿನ ಗುಡ್ಡಗಾಡು ಪ್ರದೇಶದೊಳಗೆ ಈ ವ್ಯವಸಾಯದ ಕೇಂದ್ರವಿರುತ್ತದೆ. ಈ ಉದ್ಯೋಗದಲ್ಲಿ ಇಡೀ ಜಗತ್ತಿನೊಳಗೆ ಜಪಾನವು ಮೊದಲನೇ ನಂಬರನ್ನು ಪಡೆಯುತ್ತದೆ.

ಗುಡ್ಡಗಳ ಇಳುಕಲುಗಳ ಮೇಲೆ ಚಹವನ್ನು ವಿಪುಲವಾಗಿ ಬೆಳೆಸು ತ್ತಾರೆ. ಚಹವು ಜಪಾನೀ ಜನರ ಮುಖ್ಯವಾದ ಪೇಯವಾಗಿರುತ್ತದೆ. ಜಪಾನೀ ಚಹವು ಹಸರು ಬಣ್ಣದ್ದಿರುತ್ತದೆ. ಮತ್ತು ಅದರ ರುಚಿಯಾದರೂ ನಮ್ಮ ಕಡೆಯ ಕರೇ ಚಹಕ್ಕಿಂತ ತೀರ ಭಿನ್ನವಾಗಿರುತ್ತದೆ. ಈ ಚಹವು ಸಂಯುಕ್ತ ಸಂಸ್ಥಾನದೊಳಗಿನ ಜನರಿಗೆ ಬಹಳ ಸೇರುತ್ತದೆ.

ಜಪಾನದೊಳಗಿನ ಗಿಡಗಳ ಉಪಯೋಗವನ್ನಾದರೂ ಉದ್ಯೋಗ ವ್ಯವಸಾಯಗಳಲ್ಲಿ ಬಹಳವಾಗಿ ಮಾಡಿಕೊಳ್ಳುತ್ತಾರೆ. ಅರಗು ದೊರೆಯುವ ಗಿಡಗಳು ಜಪಾನದ ಹಳವುಗಳಲ್ಲಿ ಬಹಳ ಇರುತ್ತವೆ. ಅದರಂತೆ ಕಪ್ಪುರದ ಗಿಡಗಳಾದರೂ ವಿಪುಲವಾಗಿರುತ್ತವೆ. ಅರಗು ಮತ್ತು ಕಪ್ಪುರ ಇವುಗಳ ಮಿಶ್ರಣದಿಂದ ಉತ್ತಮವಾದ ಬಣ್ಣವನ್ನು ತಯಾರಿಸಿ, ಅದರಿಂದ ಕಟ್ಟಿಗೆಯ ಸಾಮಾನುಗಳಿಗೆ ಸುಂದರವಾದ ಬಣ್ಣವನ್ನು ಕೊಡುತ್ತಾರೆ. ಈ ತರದ ಬಣ್ಣದ ಕಟ್ಟಿಗೆ ಸಾಮಾನುಗಳನ್ನು ಅಲ್ಲಿಯ ಕುಶಲರಾದ ಕೈಗಾರಿಕೆಯ ಕೆಲಸಗಳನ್ನು ಮಾಡುವವರು ತಯಾರಿಸಿ, ಅವುಗಳನ್ನು ಪರದೇಶಗಳಿಗೆ ಹೇರಳವಾಗಿ ಕಳಿಸಿಕೊಡುತ್ತಾರೆ. ಜಪಾನದೊಳಗೆ ಕಡ್ಡೀಪೆಟ್ಟಿಗೆಗಳ ಕಾರ ಖಾನೆಗಳು ಎಷ್ಟೋ ಇರುತ್ತವೆ. ಈ ಸರಕಾದರೂ ಪರದೇಶಗಳಿಗೆ ರಫ್ತಾ ಗುತ್ತದೆ. ಹಳವುಗಳೊಳಗಿನ ಮಿದುವಾದ ಜಾತಿಯ ಕಟ್ಟಿಗೆಯು ಈ ಉದ್ಯೋಗದಲ್ಲಿ ಬಹಳ ಉಪಯೋಗವಾಗುತ್ತದೆ. ಅದರಂತೆ ಜ್ವಾಲಾಮುಖಿ ಗಳಿಂದ ಹೊರ ಹೊರಡುವ ಶಿಲಾರಸದಿಂದ ಗಂಧಕವು ಸಿಗುತ್ತದೆ. ಅದಾ ದರೂ ಕಡ್ಡೀಪೆಟ್ಟಿಗೆಗಳನ್ನು ಮಾಡಲಿಕ್ಕೆ ಉಪಯೋಗವಾಗುತ್ತದೆ. ಹಲವು ಜಾತಿಯ ಕಟ್ಟಿಗೆಗಳಿಂದ ಮುದ್ದೆಯನ್ನು ತಯಾರಿಸಿ ಅದರಿಂದ ಕಾಗದ ವನ್ನು ಮಾಡುವ ಎಷ್ಟೋ ಕಾರಖಾನೆಗಳಿರುತ್ತವೆ. ಈ ಕೆಲಸಕ್ಕೆ ಬಿದುರು ಗಳನ್ನಾದರೂ ಉಪಯೋಗಿಸುತ್ತಾರೆ. ಜಪಾನೀ ಜನರು ಕಾಗದವನ್ನು

ಎಷ್ಟೋ ರೀತಿಯಿಂದ ಉಪಯೋಗಿಸುತ್ತಾರೆ. ದಪ್ಪಾದ ರಟ್ಟುಗಳನ್ನು ಮಾಡಿ ಅವುಗಳನ್ನು ಗೋಡೆಯಂತೆ ಉಪಯೋಗಿಸುತ್ತಾರೆ. ಹಗ್ಗ, ಮೊಚ್ಚೆ, ಟೊಪ್ಪಿಗೆ, ಝುಗ ಮುಂತಾದ ಒಡವೆಗಳನ್ನು ಕಾಗದದಿಂದಲೇ ಮಾಡುತ್ತಾರೆ. ಕಾಗದದ ಲಾಂದರುಗಳೂ, ಬೀಸಣಿಕೆಗಳೂ, ಬಿದುರಿನ ಬೇರೆ ಬೇರೆ ಬಣ್ಣದ ಪರದೆಗಳೂ ಜಪಾನದಿಂದ ನಮ್ಮ ದೇಶದೊಳಗೆ ಬಹಳ ಬರುತ್ತವೆ. ಅದ ರಂತೆ ಒಂದು ಜಾತಿಯ ಮಿದುವಾದ ಹುಲ್ಲಿನಿಂದ ಮಾಡಿದ ಜಪಾನೀ ಬಣ್ಣದ ಚಾಪೆಗಳು ನಮ್ಮ ದೇಶದೊಳಗೆ ತರಿಸಿಕೊಳ್ಳುತ್ತೇವೆ. ಚೀನೀ ಮಣ್ಣಿನ ಸುಂದರವಾದ ಪಾತ್ರೆಗಳ ಬಗ್ಗೆ ಜಪಾನವು ಪ್ರಸಿದ್ಧವಾಗಿರುತ್ತದೆ. ಮತ್ತು ಈ ಸರಕುಗಳು ಜಗತ್ತಿನಲ್ಲೆಲ್ಲ ಕಡೆಗೆ ಮಾರಲ್ಪಡುತ್ತವೆ.

ಮೇಲೆ ಹೇಳಿದ ಸಂಗತಿಗಳ ಮೇಲಿಂದ ಜಪಾನೀ ಜನರು ತಮ್ಮ ದೇಶ ದೊಳಗಿನ ಭೂಮಿಯನ್ನೂ ಹಳವುಗಳನ್ನೂ ಉದ್ಯೋಗ-ವ್ಯವಸಾಯಗಳ ಸಲುವಾಗಿ ಹೇಗೆ ಉಪಯೋಗ ಮಾಡಿಕೊಂಡಿರುತ್ತಾರೆಂಬುದು ಚೆನ್ನಾಗಿ ಲಕ್ಷದಲ್ಲಿ ಬರುವದು. ಆದರೆ ಜಪಾನೀ ಜನರೊಳಗೆ ಇನ್ನೊಂದು ವಿಶೇಷ ವಾದ ಸಂಗತಿಯುಂಟು. ಅದೇನಂದರೆ ಅವರು ತಮ್ಮ ದೇಶದೊಳಗೆ ಸಿಗದ ಕಚ್ಚಾ ಮಾಲುಗಳನ್ನು ಪರದೇಶಗಳಿಂದ ತಂದು, ಅದರಿಂದ ತಮ್ಮ ಕಾರಖಾನೆಗಳೊಳಗೆ ಪಕ್ಕಾ ಮಾಲುಗಳನ್ನು ಮಾಡಿ ಅವುಗಳನ್ನು ಪರದೇ ಶಗಳಿಗೆ ಮಾರಾಟಕ್ಕೆ ಕಳಿಸಿಕೊಡುತ್ತಾರೆ. ಕೆಲಸದೊಳಗೆ ಹತ್ತಿಯ ಗಿರಣಿಗಳು ಎಲ್ಲಕ್ಕೂ ಶ್ರೇಷ್ಠವಾಗಬಹುದು. ಜಪಾನದೊಳಗೆ ಕುರಿಗಳಿಲ್ಲದ್ದ ರಿಂದ ಅಲ್ಲಿ ಉಣ್ಣೆಯು ಅಪರೂಪವಾಗಿರುತ್ತದೆ; ಆದರೆ ಆಸ್ಟ್ರೇಲಿಯಾದಿಂದ ಉಣ್ಣೆಯನ್ನು ತಂದು, ಅದರಿಂದ ಕಾರಖಾನೆಗಳಲ್ಲಿ ಅರಿವೆಯನ್ನು ತಯಾರಿಸಿ ಜಪಾನೀ ಜನರು ಅದನ್ನು ಪರದೇಶಗಳಿಗೆ ಸಹ ಕಳಿಸುತ್ತಿದ್ದರು.

ಜಪಾನದೊಳಗೆ ಕಲ್ಲಿದ್ದಲಿಯು ಸಿಗುತ್ತದೆ. ಆದರೆ ಅದು ವಿಪುಲವಾಗಿ ಸಿಗುವದಿಲ್ಲ. ಉತ್ತರದ ಕಡೆಯ ಯೇಝೋ ದ್ವೀಪದೊಳಗೆ ಮತ್ತು ದಕ್ಷಿ ಣದ ಕಡೆಯ ಕ್ಯೂಶೂ ದ್ವೀಪದೊಳಗೆ(ನಾಗಾಸಾಕೀಯ ಹತ್ತರ) ಕಲ್ಲಿದ್ದಲಿಯ ಖಣಿಗಳಿರುತ್ತವೆ. ಜಪಾನದೊಳಗೆ ಸಾಕಷ್ಟು ಕಬ್ಬಿಣವು ಸಿಗುವದಿಲ್ಲ; ಮತ್ತು ಸಿಗುವ ಕಬ್ಬಿಣವು ಕಲ್ಲಿದ್ದಲಿಯ ಖಣಿಗಳ ಹತ್ತರ ಸಿಗುವದಿಲ್ಲ. ಆದರೂ ಸಿಗುವಷ್ಟು ಎಲ್ಲ ಕಬ್ಬಿಣದ ಉಪಯೋಗವನ್ನು ಸಂಪೂರ್ಣವಾಗಿ ಮಾಡಿಕೊಂಡು ಜಪಾನೀ ಜನರು ಹಲವು ಕಬ್ಬಿಣ-ಉಕ್ಕುಗಳ ಕಾರಖಾನೆ

ಗಳನ್ನು ನಡೆಸಿದ್ದಾರೆ. ಜಪಾನದೊಳಗಿನ ಹಲವು ಕಾರಖಾನೆ, ರೇಲ್ವೆ, ಉಗಿಹಡಗ ಮುಂತಾದವುಗಳಿಗೆ ಬೇಕಾಗುವ ಕಬ್ಬಿಣದ ಸ್ವರಕುಗಳನ್ನು ಮತ್ತು ಯಂತ್ರಸಾಮುಗ್ರಿಗಳನ್ನು ಈ ಕಾರಖಾನೆಗಳಲ್ಲಿ ತಯಾರಿಸುತ್ತಾರೆ.

ದೊಡ್ಡ ದೊಡ್ಡ ಕಾರಖಾನೆಗಳಿಗೂ ಗಿರಣಿಗಳಿಗೂ ಬೇಕಾಗುವ ಶಕ್ತಿಯನ್ನು ತಯಾರಿಸಲಿಕ್ಕೆ ಕಲ್ಲಿದ್ದಲಿಯ ಉಪಯೋಗವಾಗುತ್ತದೆ; ಆದರೆ ಜಪಾನದೊಳಗೆ ಸಾಕಷ್ಟು ಕಲ್ಲಿದ್ದಲಿಯು ಸಿಗದ್ದರಿಂದ, ಅಲ್ಲಿ ನಿಸರ್ಗದತ್ತವಾದ ಇನ್ನೊಂದು ಸಾಧನದ ಉಪಯೋಗವನ್ನು ಬಹು ದೊಡ್ಡ ಪ್ರಮಾಣದಲ್ಲಿ ಮಾಡಿಕೊಳ್ಳುತ್ತಾರೆ. ಉಗಿಯಂತೆ ವಿದ್ಯುತ್ತಿನಿಂದಲೂ ಕಾರಖಾನೆಗಳನ್ನು ನಡಿಸಲಿಕ್ಕೆ ಬರುತ್ತದೆ. ಜಪಾನದೊಳಗೆ ಸಣ್ಣವಾದರೂ ಅತಿ ಭರದಿಂದ ಹರಿಯುವ ನೂರಾರು ಹೊಳೆಗಳುಂಟು. ಅವುಗಳಿಂದ ವಿಪುಲವಾಗಿ ವಿದ್ಯುಚ್ಛಕ್ತಿಯನ್ನು ಹುಟ್ಟಿಸುತ್ತಾರೆ. ಜಪಾನದೊಳಗೆ ಎಲ್ಲ ಕಡೆಯಲ್ಲಿಯೂ ಸಾಕಷ್ಟು ಮಳೆಯಾಗುತ್ತದೆ; ಆದ್ದರಿಂದ ಹೊಳೆಗಳ ಪ್ರವಾಹಗಳಿಂದಾಗಲಿ ದರಿಗಳಲ್ಲಿ ಕಟ್ಟಿ ಸಂಗ್ರಹಿಸಿಟ್ಟ ನೀರಿನ ಪ್ರವಾಹಗಳಿಂದಾಗಲಿ ವಿದ್ಯುತ್ತನ್ನು ಹುಟ್ಟಿಸುತ್ತಾರೆ. ಈ ರೀತಿಯಿಂದ ಕಲ್ಲಿದ್ದಲಿಯ ಕೊರತೆಯನ್ನು ವಿದ್ಯುಚ್ಛಕ್ತಿಯಿಂದ ದೂರ ಮಾಡಿ ಅಲ್ಲಿಯ ಕಾರಖಾನೆಗಳೂ ಗಿರಣಿಗಳೂ ನಡಿಸಲ್ಪಡುತ್ತವೆ. ಈ ವಿದ್ಯುಚ್ಛಕ್ತಿಯಿಂದ ದೊಡ್ಡ ದೊಡ್ಡ ಪಟ್ಟಣಗಳೊಳಗಿನ ಕಾರಖಾನೆಗಳು ನಡೆಯುವವಲ್ಲದೆ, ಸಣ್ಣ ಸಣ್ಣ ಹಳ್ಳಿಗಳೊಳಗಿನ ಸಣ್ಣಪುಟ್ಟ ಉದ್ಯೋಗ-ವ್ಯವಸಾಯಗಳಿಗೆ ಸಹ ಅದರ ಉಪಯೋಗವಾಗುತ್ತದೆ. ವಿದ್ಯುತ್ತಿನ ಯಂತ್ರಸಾಮುಗ್ರಿಗಳಲ್ಲಿ ತಾಮ್ರದ ತಂತಿಯ ಉಪಯೋಗವನ್ನು ಹೆಚ್ಚಾಗಿ ಮಾಡಬೇಕಾಗುತ್ತದೆ. ಜಪಾನದೊಳಗೆ ತಾಮ್ರವು ಬಹಳ ಸಿಗುತ್ತದೆ. ಜಪಾನದಿಂದ ತಾಮ್ರವು ಪರದೇಶಗಳಿಗೂ ಹೋಗುತ್ತದೆ. ಚೀನೀ ಮಣ್ಣಿನ ಪಾತ್ರೆಗಳನ್ನು ತಯಾರಿಸುವದಕ್ಕೂ ತಾಮ್ರದ ಉಪಯೋಗವಾಗುತ್ತದೆ. ಜಪಾನದೊಳಗೆ ಬಂಗಾರ, ಬೆಳ್ಳಿ, ಸೀಸ ಮತ್ತು ಕಲ್ಲೆಣ್ಣೆಗಳ ಖಣಿಗಳಾದರೂ ಇರುತ್ತವೆ. ಗಂಧಕ ಮತ್ತು ಚೀನೀ ಮಣ್ಣಿನ ಬಗ್ಗೆ ಈ ಮೊದಲೇ ಹೇಳಿರುತ್ತದೆ.

## ೧೦ ನೇ ಪ್ರಕರಣ

# ಭಾರತದಲ್ಲಿಯ ಹುಟ್ಟುವಳಿಗಳು

ಆಗಸ್ಟ ೧೯೪೭ನೇ ಇಸವಿಯ ಮುಂಚೆ ಹಿಂದುಸ್ತಾನವು ಅಖಂಡವಾಗಿದ್ದಿತು. ಆದರೆ ಆಗಸ್ಟ ೧೫ನೇ ದಿನಾಂಕ ೧೯೪೭ನೇ ಇಸವಿ ದಿವಸ ಹಿಂದುಸ್ತಾನವು ವಿಭಾಗಿಸಲ್ಪಟ್ಟು, ಭಾರತ ಮತ್ತು ಪಾಕಿಸ್ತಾನ ಎಂಬ ಎರಡು ಸ್ವತಂತ್ರ ರಾಷ್ಟ್ರಗಳು ಸ್ಥಾಪಿಸಲ್ಪಟ್ಟವು. ಈ ಕೆಳಗೆ ಕೊಟ್ಟ ಮಾಹಿತಿಯು ಸ್ವತಂತ್ರ ಭಾರತದ್ದಿರುವದು. ಇದರಲ್ಲಿ ಪಾಕಿಸ್ತಾನ ದೇಶದ ವಿಚಾರ ಮಾಡಿರುವದಿಲ್ಲ, ಯಾಕಂದರೆ ಆ ದೇಶವು ಭಾರತದಿಂದ ವಿಂಗಡಿಸಲ್ಪಟ್ಟಿರುವದು.

### ಮುಖ್ಯವಾದ ಬೆಳೆಗಳು

**ಅಕ್ಕಿ:**—ಭಾರತದೊಳಗೆ ಬೆಳೆಯುವಷ್ಟು ಅಕ್ಕಿಯು ಜಗತ್ತಿನೊಳಗಿನ ಇನ್ನಾವ ದೇಶದಲ್ಲಿಯೂ ಬೆಳೆಯುವದಿಲ್ಲ. ಈ ಬೆಳೆಗೆ ಸಾಕಷ್ಟು ಉಷ್ಣತೆಯೂ ನೀರಿನ ಪೂರೈಕೆಯೂ ಅವಶ್ಯವಾಗಿರುತ್ತವೆ. ೪೦ ಇಂಚಿಗಿಂತ ಹೆಚ್ಚು ಮಳೆಯಾಗುವ ಪ್ರದೇಶಗಳಲ್ಲಿ ಭತ್ತದ ಬೆಳೆಯು ಚೆನ್ನಾಗಿ ಬರುತ್ತದೆ. ಭತ್ತವನ್ನು ಬೆಳೆಯುವ ಪ್ರದೇಶಗಳು ಯಾವವೆಂದರೆ:—(೧) ಕೊಂಕಣ ಪಟ್ಟಿ ಮತ್ತು ಮಲಬಾರ. (೨) ಪೂರ್ವ ದಂಡೆಯ ಪ್ರದೇಶಗಳು; ವಿಶೇಷವಾಗಿ ಹೊಳೆಗಳ ಮುಖಗಳ ಪ್ರದೇಶಗಳು. (೩) ಪಶ್ಚಿಮ ಬಂಗಾಲ, ಆಸಾಮು, ಬಿಹಾರ, ಓರಿಸಾ, ಉತ್ತರ ಪ್ರದೇಶ (ಲಖನೌದ ಪೂರ್ವದ ಕಡೆಯ ಭಾಗವು), ಮಧ್ಯ ಪ್ರದೇಶ (ನಾಗಪೂರದ ಪೂರ್ವದ ಕಡೆಯ ಭಾಗವು). ಇವಲ್ಲದೆ ಪೂರ್ವ ಪಂಜಾಬ, ಉತ್ತರ ಪ್ರದೇಶದೊಳಗಿನ ಪಶ್ಚಿಮದ ಕಡೆಯ ಭಾಗದಲ್ಲಿಯೂ ಕಾಲುವೆಗಳ ನೀರಿನಿಂದ ಭತ್ತವನ್ನು ಬೆಳೆಯುತ್ತಾರೆ.

**ಗೋಧಿ:**—ಭಾರತದೊಳಗೆ ಅಕ್ಕಿಯ ಕೆಳಗೆ ಎರಡನೆಯ ಮಹತ್ವವಾದ ಬೆಳೆಯೆಂದರೆ ಗೋಧಿಯು. ಗೋಧಿಗೆ ೩೦ ಇಂಚಿಗಿಂತ ಹೆಚ್ಚು ಮಳೆಯು ಇರಕೂಡದು; ಮತ್ತು ಆರಂಭಕ್ಕೆ ಹವೆಯು ತಂಪಾಗಿರಬೇಕಾಗುವದು. ಪೂರ್ವ ಪಂಜಾಬ, ಉತ್ತರ ಪ್ರದೇಶ (ಲಖನೌದ ಪಶ್ಚಿಮಕ್ಕೆ)




ರಾಜಸ್ಥಾನ, ಮಧ್ಯ ಭಾರತ, ಮಧ್ಯ ಪ್ರದೇಶ (ನಾಗಪೂರದ ಪಶ್ಚಿಮಕ್ಕೆ) ಮತ್ತು ಹೈದರಾಬಾದ ಪ್ರದೇಶಗಳಲ್ಲಿ ಗೋಧಿಯು ಚೆನ್ನಾಗಿ ಬೆಳೆಯುತ್ತದೆ. ಮುಂಬಯಿ ರಾಜ್ಯದಲ್ಲಿ ಭಡೋಚ, ಖಾನದೇಶ, ನಾಸೀಕ, ಅಹಮದನಗರ, ವಿಜಾಪೂರ, ಬೆಳಗಾಂವ ಮತ್ತು ಧಾರವಾಡ ಜಿಲ್ಹೆಗಳಲ್ಲಿ ಗೋಧಿಯು ಬೆಳೆಯುತ್ತದೆ.

**ಜೋಳ, ಸಜ್ಜೆ ಮುಂತಾದವುಗಳು:**—ಈ ತರದ ಕಾಳುಗಳಿಗೆ ಇಂಗ್ಲೀಶಿನಲ್ಲಿ 'ಮಿಲೆಟ್ಸ್' ಎಂದೆನ್ನುತ್ತಾರೆ. ಗೋದಿಯು ಬೆಳೆಯುವ ಭೂಮಿಯಲ್ಲಿ ಈ ಬೆಳೆಗಳು ಬಂದೇ ಬರುತ್ತವೆ. ಆದರೆ ಗೋದಿಗೆ ಸಾಕಷ್ಟು ನೀರಿಲ್ಲದ ಸಾಧಾರಣವಾದ ಒಣ ಪ್ರದೇಶಗಳಲ್ಲಿ ಸಹ ಈ ಬೆಳೆಗಳು ಬರುತ್ತವೆ. ಬಹಳ ಮಳೆಯಾಗುವ ಪ್ರದೇಶಗಳಲ್ಲಿ ಈ ಬೆಳೆಗಳು ಬರುವದಿಲ್ಲ. ಉತ್ತರ ಪ್ರದೇಶ, ಮಧ್ಯಪ್ರದೇಶ ಮತ್ತು ಮದ್ರಾಸ ರಾಜ್ಯಗಳಲ್ಲಿ ಈ ಬೆಳೆಗಳು ಚೆನ್ನಾಗಿ ಬರುತ್ತವೆ. ಮುಂಬಯಿ ರಾಜ್ಯದಲ್ಲಿರುವ ವಿಜಾಪೂರ, ಸೊಲ್ಲಾಪೂರ ಜಿಲ್ಹೆಗಳಲ್ಲಿ ಜೋಳವು ವಿಪುಲವಾಗಿ ಬೆಳೆಯುತ್ತದೆ. ಅಹಮ್ಮದಾಬಾದ, ಉತ್ತರ ಮತ್ತು ದಕ್ಷಿಣ ಸಾತಾರಾ, ಬೆಳಗಾಂವ, ಕೊಲ್ಹಾಪೂರ ಜಿಲ್ಹೆಗಳಲ್ಲಿ ಸಹ ಜೋಳವು ಚೆನ್ನಾಗಿ ಬೆಳೆಯುತ್ತದೆ.

**ಗೋವಿನ ಜೋಳ:**—ಈ ಧಾನ್ಯದ ಮೂಲ ದೇಶವು ಅಮೇರಿಕೆಯು. ಪೋರ್ತುಗೀಜ ಜನರು ಅದನ್ನು ಇಲ್ಲಿ ತಂದರು. ಬಿಹಾರ ಉತ್ತರ ಪ್ರದೇಶ ಮತ್ತು ಪೂರ್ವಪಂಜಾಬ ರಾಜ್ಯಗಳಲ್ಲಿ ಗೋವಿನ ಜೋಳವು ಚೆನ್ನಾಗಿ ಬೆಳೆಯುತ್ತದೆ. ಮುಂಬಯಿ ಮತ್ತು ಮದ್ರಾಸ ರಾಜ್ಯಗಳಲ್ಲಿ ಸಹ ಹಲಕೆಲವು ಕಡೆಯಲ್ಲಿ ಈ ಬೆಳೆಯು ಬರುತ್ತದೆ.

**ಅಡಗಾಳುಗಳು:**—ಕಡಲೆ, ಬಟಗಡಲೆ, ತೊಗರಿ, ಚೆನ್ನಂಗಿ, ಉದ್ದು, ಅಲಸಂದಿ, ಅವರೆ, ಮುಂತಾದ ಧಾನ್ಯಗಳಿಗೆ ಅಡಗಾಳುಗಳೆಂಬ ಹೆಸರು. ಭಾರತದೊಳಗಿನ ಯಾವತ್ತೂ ಭಾಗಗಳಲ್ಲಿ ಇವುಗಳೊಳಗಿನ ಒಂದಿಲ್ಲೊಂದು ಧಾನ್ಯವು ಬೆಳೆದೇ ಬೆಳೆಯುತ್ತದೆ. ಕಡಲೆಯು ವಿಶೇಷವಾಗಿ ಪೂರ್ವ ಪಂಜಾಬ ಮತ್ತು ಉತ್ತರ ಪಂಜಾಬಗಳೊಳಗೆ ವಿಪುಲವಾಗಿ ಬೆಳೆಯುತ್ತದೆ. ಭಾರತದ ಜನರ ಆಹಾರದೊಳಗೆ ಮಾಂಸವು ಕಡಿಮೆ ಪ್ರಮಾಣದಲ್ಲಿರುವದರಿಂದ ಅದರ ಬದಲು ಅವರು ಅಡಗಾಳುಗಳನ್ನು ವಿಶೇಷವಾಗಿ ಉಪಯೋಗಿಸುತ್ತಾರೆ.

**ಕಬ್ಬು:**—ನಮ್ಮ ದೇಶದಲ್ಲಿ ತುಸು ಹೆಚ್ಚು ಕಡಿಮೆ ಪ್ರಮಾಣದಲ್ಲಿ ಕಬ್ಬನ್ನು ಎಲ್ಲ ರಾಜ್ಯಗಳಲ್ಲಿ ಬೆಳೆಯುತ್ತಾರೆ. ಅರ್ಧಕ್ಕಿಂತ ಹೆಚ್ಚು ಬೆಳೆಯು ಉತ್ತರ ಪ್ರದೇಶ ರಾಜ್ಯದಲ್ಲಿಯೇ ಬರುತ್ತದೆ. ಅದರ ಕೆಳಗೆ ಮುಂಬಯಿ ಮತ್ತು ಮದ್ರಾಸ ರಾಜ್ಯಗಳು ಬರುತ್ತವೆ. ಬಿಹಾರ ಮತ್ತು ಪೂರ್ವ ಪಂಜಾಬ

ರಾಜ್ಯಗಳಲ್ಲಿಯೂ ಕಬ್ಬಿನ ಬೆಳೆಯು ಚನ್ನಾಗಿ ಬರುತ್ತದೆ. ಉತ್ತರ ಪ್ರದೇಶ, ಪೂರ್ವ ಪಂಜಾಬ ಮತ್ತು ಬಿಹಾರ ರಾಜ್ಯಗಳಲ್ಲಿ ಕಬ್ಬಿನ ಬೆಳೆಯನ್ನು ಕಾಲುವೆ ನೀರಿನ ಸಹಾಯದಿಂದ ಬೆಳೆಯುತ್ತಾರೆ. ಮುಂಬೈಯ ರಾಜ್ಯದಲ್ಲಿ ನಾಸೀಕ, ಪುಣೆ, ಅಹಮದನಗರ, ಸೊಲ್ಲಾಪೂರ ಮತ್ತು ಕೊಲ್ಹಾಪೂರ ಜಿಲ್ಹೆಗಳಲ್ಲಿ ನದಿಗಳಿಗೆ ಒಡ್ಡುಗಳನ್ನು ಹಾಕಿ ಅದರ ನೀರಿನಿಂದ ಕಬ್ಬನ್ನು ಬೆಳೆಯುತ್ತಾರೆ. ಮುಂಬಯಿ ಮತ್ತು ಮದ್ರಾಸ ರಾಜ್ಯಗಳಲ್ಲಿ ಈಗ ೧೦ ವರುಷಗಳಿಂದ ಕಬ್ಬಿನ ಬೆಳೆಯು ಹೆಚ್ಚಾಗಿ ಬರಹತ್ತಿರುವದು.

ಉತ್ತರ ಭಾರತದ ಕಬ್ಬಿನಗಿಂತ ದಕ್ಷಿಣ ಭಾರತದ ಕಬ್ಬಿನಿಂದ ಸಕ್ಕರೆಯು ಚನ್ನಾಗಿ ಬರುತ್ತದೆ. ಅದಕ್ಕೆ ಕಾರಣವೇನಂದರೆ ದಕ್ಷಿಣದಲ್ಲಿಯ ಉಷ್ಣ ಹವೆಯು ಕಬ್ಬಿಗೆ ಪುಷ್ಟಿಕರವಾಗಿರುವದು.

ನಮ್ಮ ದೇಶದಲ್ಲಿ ಹುಟ್ಟುವ ಕಬ್ಬಿನ ಮತ್ತು ಅದರಲ್ಲಿರುವ ಸಕ್ಕರೆಯ ಪ್ರಮಾಣವು ಪ್ರತಿಯೊಂದು ಎಕರೆಗೆ ಎರಡನೇ ದೇಶಗಳಲ್ಲಿರುವ ಪ್ರಮಾಣದಕ್ಕಿಂತ ಕಡಿಮೆ ಇರುತ್ತದೆ. ಉದಾಹರಣೆಗಾಗಿ ಜಾವಾ ನಡುಗಡ್ಡೆಯಲ್ಲಿ ಪ್ರತಿಯೊಂದು ಎಕರೆಗೆ ೬·೪ ಟನ್ ಕಬ್ಬು ಹುಟ್ಟುತ್ತದೆ. ಆದರೆ ನಮ್ಮ ದೇಶದಲ್ಲಿ ಅದೇ ಪ್ರಮಾಣದಲ್ಲಿ ಸಾಮಾನ್ಯವಾಗಿ ೧·೬ ಟನ್ ಬೆಳೆಯುವದು. ಜಾವಾ ನಡುಗಡ್ಡೆಗಳಲ್ಲಿ ಒಂದು ಟನ್ ಕಬ್ಬಿನಿಂದ ಎಷ್ಟು ಸಕ್ಕರೆಯನ್ನು ತೆಗೆಯುವರೋ ಅದರ ಒಂದು ನಾಲ್ಕು ಅಂಶದಷ್ಟು ಸಕ್ಕರೆಯು ನಮ್ಮಲ್ಲಿ ತೆಗೆಯುತ್ತಾರೆ. ಆದರೆ ಇತ್ತೀಚಿನ ಸಂಶೋಧನದಿಂದ ಕಬ್ಬಿನ ಬೆಳೆಯಲ್ಲಿ ವಿಶೇಷ ಬದಲಾವಣೆಯುಂಟಾದ್ದರಿಂದ ಸಕ್ಕರೆಯ ಉತ್ಪಾದನೆಯು ಹೆಚ್ಚಾಗಹತ್ತಿರುವದು ಕಂಡುಬರುತ್ತದೆ.

ಕಬ್ಬಿನಿಂದ ಮಾಡುವ ಸಕ್ಕರೆಯ ಅರ್ಧದಷ್ಟು ಬೆಲ್ಲವನ್ನು ತಯಾರಿಸುತ್ತಾರೆ. ಕಬ್ಬಿನ ಬೆಳೆಯು ಚನ್ನಾಗಿ ಬರದ್ದರಿಂದ ಎಲ್ಲಿ ಸಕ್ಕರೆ ಕಾರಖಾನೆಗಳನ್ನು ಸ್ಥಾಪಿಸುವದು ದುಸ್ತರವೊ ಅಂಥ ಪ್ರದೇಶಗಳಲ್ಲಿ ಬೆಲ್ಲ ತಯಾರಿಸುತ್ತಾರೆ. ಅದಕ್ಕೆ ಯಂತ್ರಗಳ ಸಾಮಗ್ರಿಯು ಅಷ್ಟು ಅವಶ್ಯವಿರುವದಿಲ್ಲ.

**ಎಣ್ಣೀ ಕಾಳುಗಳು:**—ಅಗಸೆ, ಎಳ್ಳು, ನೆಲಗಡಲೆ, ಸಾಸಿವೆ, ಔಡಲ, ಕುಸಿಬೆ ಮುಂತಾದವುಗಳಿಂದ ಎಣ್ಣೆಯನ್ನು ತೆಗೆಯುತ್ತಾರೆ.

ಆದ್ದರಿಂದ ಅವುಗಳಿಗೆ ಎಣ್ಣೇ ಕಾಳುಗಳೆಂದೆನ್ನುತ್ತಾರೆ. ಭಾರತದೊಳಗಿನ ಜನರು ಎಣ್ಣೆಯನ್ನು ಬಹಳ ಉಪಯೋಗಿಸುತ್ತಾರೆ. ಆದ್ದರಿಂದ ಈ ದೇಶದ ಲ್ಲಿಯೇ ಈ ಧಾನ್ಯಗಳ ಮಾರಾಟವು ಹೆಚ್ಚಾಗಿ ಆಗುತ್ತದೆ. ಮತ್ತು ಸಾಕಾಗಿ ಉಳಿದ ಧಾನ್ಯಗಳನ್ನು ತುಸು ಪ್ರಮಾಣದಲ್ಲಿ ಪರದೇಶಗಳಿಗೆ ಕಳಿಸುತ್ತಾರೆ. ಮಧ್ಯಪ್ರದೇಶ ಮತ್ತು ಮುಂಬಯಿ ರಾಜ್ಯದ ನಾಸೀಕ, ವಿಜಾಪೂರ ಜಿಲ್ಹೆಗಳಲ್ಲಿ ಅಗಸೆಯು ವಿಪುಲವಾಗಿ ಬೆಳೆಯುತ್ತದೆ. ಮದ್ರಾಸ ರಾಜ್ಯದಲ್ಲಿ ಮತ್ತು ಮುಂಬಯಿ ಇಲಾಖೆಯೊಳಗಿನ ಸೊಲ್ಲಾಪೂರ, ಸಾತಾರಾ ಮತ್ತು ಬೆಳಗಾಂವ ಜಿಲ್ಹೆಗಳಲ್ಲಿ ನೆಲಗಡಲೆಯು ಚೆನ್ನಾಗಿ ಬೆಳೆಯುತ್ತದೆ.

**ತೆಂಗು:**—ಸಮುದ್ರದ ದಂಡೆಯ ಮೇಲಿರುವ ಉಷ್ಣ ಪ್ರದೇಶಗಳೊಳಗೆ ಈ ಗಿಡಗಳು ಬೆಳೆಯುತ್ತವೆ. ಪಶ್ಚಿಮ ದಂಡೆಯ ಮೇಲೆ ಕಾಠೇವಾಡದ ದಕ್ಷಿಣದ ಕಡೆಯ ಭಾಗದಿಂದ ಈ ಗಿಡಗಳು ಕಾಣಲಾರಂಭಿಸುತ್ತವೆ; ಅಲ್ಲಿಂದ ದಕ್ಷಿಣಕ್ಕೆ ಕನ್ಯಾಕುಮಾರಿಯ ವರೆಗೂ ಅಲ್ಲಿಂದ ಪೂರ್ವದಂಡೆಯ ಗುಂಟ ಕಲಕತ್ತೆಯ ವರೆಗೂ ತೆಂಗಿನ ಬನಗಳು ದೃಷ್ಟಿಗೆ ಬೀಳುತ್ತವೆ. ಮಲಬಾರ ಪ್ರಾಂತವಂತೂ ತೆಂಗಿನ ಆಗರವೇ ಆಗಿರುತ್ತದೆ.

**ತಂಬಾಕ:**—ಭಾರತದಲ್ಲಿ ಅನೇಕ ಕಡೆಯಲ್ಲಿ ತಂಬಾಕ ಬೆಳೆಯುತ್ತದೆ. ಪಶ್ಚಿಮ ಬಂಗಾಲ, ಬಿಹಾರ, ಉತ್ತರ ಪ್ರದೇಶ ಮತ್ತು ಮದ್ರಾಸ ರಾಜ್ಯಗಳಲ್ಲಿ, ಮುಂಬಯಿ ರಾಜ್ಯದೊಳಗಿನ ಬೆಳಗಾಂವ ಜಿಲ್ಲೆಯಲ್ಲಿಯೂ ತಂಬಾಕ ವಿಶೇಷವಾಗಿ ಬೆಳೆಯುತ್ತದೆ.

**ಚಹ:**—ಗುಡ್ಡಗಳ ಇಳುಕಲುಗಳ ಮೇಲೆ ಚಹದ ತೋಟಗಳನ್ನು ಮಾಡುತ್ತಾರೆ. ಯಾಕಂದರೆ ಚಹದ ಗಿಡಗಳಿಗೆ ಮಳೆಯು ಹೆಚ್ಚು ಬೇಕಾದರೂ ಅವುಗಳ ಬೇರುಗಳ ಹತ್ತರ ನೀರು ನಿಲ್ಲಕೂಡದು. ಉಷ್ಣವಾದ ಹವೆಯು ಬೇಕು. ಆಸಾಮ ಪ್ರಾಂತದೊಳಗೆ ಚಹವು ಬಹಳವಾಗಿ ಬೆಳೆಯುತ್ತದೆ. ಅದರ ಕೆಳಗೆ ಪಶ್ಚಿಮ ಬಂಗಾಲ (ದಾರ್ಜಿಲಿಂಗ), ಪೂರ್ವ ಪಂಜಾಬ (ಕಾಂಗ್ರಾ), ಮದ್ರಾಸ ರಾಜ್ಯದೊಳಗಿನ ನೀಲಗಿರಿ ಪರ್ವತದ ಮೇಲೆಯೂ, ತ್ರಾವಣಕೋರದಲ್ಲಿಯೂ ಚಹವು ಬೆಳೆಯುತ್ತದೆ.

**ಕಾಫೀ** (ಬುಂದು):—ಮೈಸೂರು, ಕೂರ್ಗ, ನೀಲಗಿರಿ ಮತ್ತು ತ್ರಾವಣಕೋರಗಳಲ್ಲಿ ಬುಂದಿನ ತೋಟಗಳು ಇರುತ್ತವೆ.

**ಮುಸಾಲೆಯ ಸಾಮಾನುಗಳು:**—ಮೆಣಸು, ಲವಂಗ, ಯಾಲಕ್ಕಿ, ದಾಲಚಿನ್ನಿ, ಅಲ್ಲ (ಖಾರ ಗೆಣಸು), ಸುಂಠಿ, ಮೆಣಸಿನಕಾಯಿ ಮುಂತಾದ ಮುಸಾಲೆಯ ಸಾಮಾನುಗಳು ಮಲಬಾರದ ದಂಡೆಯ ಮೇಲಿನ ಪ್ರದೇಶ ಗಳಲ್ಲಿ, ವಿಶೇಷತಃ ತ್ರಾವಣಕೋರ ಕೋಚೀನ ರಾಜ್ಯದಲ್ಲಿ ಬೆಳೆಯುತ್ತವೆ.

**ಹತ್ತಿ:**—ಹತ್ತಿಯ ಬೆಳೆಯಲ್ಲಿ, ಇಡೀ ಜಗತ್ತಿನೊಳಗೆ ಭಾರತದ ಕ್ರಮಾಂಕವು ಎರಡನೆಯದಿರುತ್ತದೆ. ಭಾರತದಲ್ಲಿಯ ಎಷ್ಟೋ ಪ್ರದೇಶ ಗಳಲ್ಲಿ ಹತ್ತಿಯು ಬೆಳೆಯುತ್ತದೆ. 'ಹತ್ತಿಯ ಕರೇ ನೆಲ' ಅಥವಾ ಕರೇ ಎರೆಮಣ್ಣಿನ ಭೂಮಿಯು ಇದ್ದ ಪ್ರದೇಶಗಳಲ್ಲೆಲ್ಲ ಹತ್ತಿಯು ಬೆಳೆಯುತ್ತದೆ. ಈ ಕರೇ ಮಣ್ಣು ಜ್ವಾಲಾಮುಖೀ ಪರ್ವತಗಳಿಂದ ಹೊರಹೊರಟ ಶಿಲಾ ರಸದಿಂದ ನಿರ್ಮಾಣವಾಗಿರುವದರಿಂದ, ಅದು ಫಲವತ್ತಾಗಿರುತ್ತದೆ. ಗುಜ ರಾಥ ಮತ್ತು ವರ್ಹಾಡ ಪ್ರಾಂತಗಳಲ್ಲಿಯೂ, ಖಾನದೇಶ, ಸೊಲ್ಲಾಪೂರ, ಬೆಳಗಾಂವ ಮತ್ತು ಧಾರವಾಡ ಜಿಲ್ಹೆಗಳಲ್ಲಿಯೂ ಇಂಥ ಭೂಮಿಯು ಹಲವು ಕಡೆಯಲ್ಲಿರುವದರಿಂದ ಅಲ್ಲಿ ಹತ್ತಿಯ ಬೆಳೆಯು ಚೆನ್ನಾಗಿ ಬರುತ್ತದೆ. ಇದ ಲ್ಲದೆ ಮಧ್ಯ ಭಾರತ, ಉತ್ತರ ಪ್ರದೇಶ, ಮಧ್ಯಪ್ರದೇಶ, ಪೂರ್ವ ಪಂಜಾಬ ಮತ್ತು ಮದ್ರಾಸ ರಾಜ್ಯಗಳಲ್ಲಿಯೂ ಹತ್ತಿಯು ಬೆಳೆಯುತ್ತದೆ.

**ಗೋಣಿ (ಜ್ಯೂಟ):**—ಗಂಗಾನದಿಯ ಮುಖದ ಪ್ರದೇಶದೊಳಗೆ ಗೋಣಿಯು ಬೆಳೆಯುತ್ತದೆ. ಪಶ್ಚಿಮ ಬಂಗಾಲ ಮತ್ತು ಬಿಹಾರ ರಾಜ್ಯಗ ಳಲ್ಲಿ ಉತ್ಪಾದನೆಯಾಗುವ ಗೋಣಿಯು ನಮ್ಮ ದೇಶದಲ್ಲಿಯ ಗಿರಣಿಗಳಿಗೆ ಸಾಕಾಗುವಷ್ಟಾಗದ್ದರಿಂದ ನಮಗೆ ಪಾಕಿಸ್ತಾನದಲ್ಲಿಯ ಪೂರ್ವ ಬಂಗಾಲ ಪ್ರದೇಶದಿಂದ ಆಯಾತ ಮಾಡಬೇಕಾಗುತ್ತದೆ. ಗೋಣಿ ಹುಟ್ಟುವಳಿಗೆ ಬಹಳ ಉಷ್ಣವೂ, ನೀರೂ, ಮತ್ತು ಗೊಬ್ಬರ ಬೇಕಾಗುತ್ತದೆ. ಗೋಣಿಯ ಸಸಿಗಳ ತೊಗಟೆಯಿಂದ ಎಳೆಗಳನ್ನು ತೆಗೆಯುತ್ತಾರೆ; ಮತ್ತು ಅವುಗಳಿಂದ ತಟ್ಟುಗಳನ್ನೂ ಚೀಲಗಳನ್ನೂ ಮಾಡುತ್ತಾರೆ

**ರಬ್ಬರ:**—ಈ ಗಿಡಗಳನ್ನು ಪರದೇಶದಿಂದ ತಂದು ಅದನ್ನು ಮಂಗ ಳೂರಿಂದ ದಕ್ಷಿಣದಕಡೆ ಮಲಬಾರ ವಿಶೇಷತಃ ತ್ರಾವಣಕೋರ ಪ್ರದೇಶ ದಲ್ಲಿ ಬೆಳೆಸುತ್ತಾರೆ. ಮೈಸೂರು, ಮತ್ತು ಕೂರ್ಗ ಪ್ರದೇಶಗಳಲ್ಲಿಯೂ ಈ ಗಿಡಗಳನ್ನು ಬೆಳೆಸಿದ್ದಾರೆ.

## ಪ್ರಾಣಿಗಳೂ ಅವುಗಳಿಂದ ಬರುವ ಹುಟ್ಟುವಳಿಗಳೂ

ಭಾರತವು ಒಕ್ಕಲತನದ ದೇಶವಾಗಿರುತ್ತದೆ. ಹೊಲಗೆಲಸಕ್ಕೆ ಎತ್ತು ಮತ್ತು ಕೋಣಗಳನ್ನು ಉಪಯೋಗಿಸುತ್ತಾರೆ. ಆಕಳು, ಎಮ್ಮೆ ಮತ್ತು ಆಡುಗಳನ್ನು ಹೈನಿನ ಸಲುವಾಗಿ ಸಾಕುತ್ತಾರೆ. ಉಸುಕಿನ ಪ್ರದೇಶಗಳೊಳಗೆ ಒಂಟೆಗಳು ಉಪಯೋಗಿಸಲ್ಪಡುತ್ತವೆ. ಕುದುರೆ, ಕತ್ತೆ ಮುಂತಾದ ಸಾಕು ಪಶುಗಳಾದರೂ ಹೇರಳವಾಗಿರುತ್ತವೆ. ಪಶುಗಳ ತೊಗಲಿನ ವ್ಯಾಪಾರವು ಪರದೇಶಗಳ ಸಂಗಡ ಬಹು ದೊಡ್ಡ ಪ್ರಮಾಣದಲ್ಲಿ ಸಾಗುತ್ತದೆ; ಮತ್ತು ಕುರಿಗಳಿಂದ ಉಣ್ಣೆಯು ಸಿಗುತ್ತದೆ. ರೇಶಿಮೆಯ ಹುಳಗಳಿಂದ ರೇಶಿಮೆಯು ಸಿಗುತ್ತದೆ. ಪಶ್ಚಿಮ ಬಂಗಾಲ ಮತ್ತು ಆಸಾಮ ರಾಜ್ಯದೊಳಗೆ ರೇಶಿಮೆಯು ಹುಟ್ಟುತ್ತದೆ.

## ಹಳವುಗಳೂ ಅವುಗಳಿಂದ ಬರುವ ಹುಟ್ಟುವಳಿಗಳೂ

ಭಾರತದೊಳಗೆ ಹಳವುಗಳುಳ್ಳ ಪ್ರದೇಶಗಳು ಬಹಳವಿರುವವು. ಹಿಮಾಲಯ, ವಿಂಧ್ಯಾದ್ರಿ, ಸಾತಪುಡಾ, ಸಹ್ಯಾದ್ರಿ, ದಕ್ಷಿಣ ಮಲಬಾರ ಮುಂತಾದ ಗುಡ್ಡಗಾಡು ಪ್ರದೇಶಗಳಲ್ಲಿ ಎಷ್ಟೋ ಹಳವುಗಳಿದ್ದು ಅವುಗಳಲ್ಲಿ ಇಮಾರತಿಯ ಕಟ್ಟಿಗೆಯು ವಿಪುಲವಾಗಿ ಸಿಗುತ್ತದೆ. ತೇಗಿನ ಕಟ್ಟಿಗೆಯು ಬಹು ಗಟ್ಟಿಯಾಗಿದ್ದು ಬಹು ದಿವಸ ತಾಳುತ್ತದೆ. ಅದನ್ನು ಇಮಾರತಿಗಳಿಗೂ ರೇಲುದಾರಿಯನ್ನು ಕಟ್ಟಲಿಕ್ಕೂ ಉಪಯೋಗಿಸುತ್ತಾರೆ. ಮಲಬಾರದಲ್ಲಿ ತೇಗಿನ ಹುಟ್ಟುವಳಿಯು ದೊಡ್ಡದಾಗಿರುತ್ತದೆ. ಮಲಬಾರ ಮತ್ತು ಮೈಸೂರು ಸಂಸ್ಥಾನಗಳಲ್ಲಿ ಗಂಧದ ಗಿಡಗಳು ಬೆಳೆಯುತ್ತವೆ. ಇತ್ತಲಾಗಿ ಬಿದುರುಗಳನ್ನು ಕಾಗದ ಮಾಡಲಿಕ್ಕೆ ಉಪಯೋಗ ಮಾಡಹತ್ತಿದ್ದಾರೆ. ಭಾರತದ ಹಳವುಗಳಲ್ಲಿ ಸಿಗುವ ಪದಾರ್ಥಗಳೊಳಗೆ ಅರಗು ಅತಿ ಮಹತ್ವದ್ದಾಗಿರುತ್ತದೆ. ಯಾಕಂದರೆ ಈ ದೇಶದೊಳಗೆ ಅದು ವಿಪುಲವಾಗಿ ಸಿಗುತ್ತದೆ. ಆದ್ದರಿಂದ ವ್ಯಾಪಾರದ ದೃಷ್ಟಿಯಿಂದ ಅದಕ್ಕೆ ಬಹಳ ಮಹತ್ವವು ಬಂದಿರುತ್ತದೆ. ಈ ಅರಗು ಒಂದು ಜಾತಿಯ ಹುಳದಿಂದ ಅರಣ್ಯದೊಳಗೆ ಗಿಡಗಳ ಮೇಲೆ ಹುಟ್ಟುತ್ತದೆ. ಓರಿಸಾ ಪ್ರಾಂತದೊಳಗಿನ ಅರಣ್ಯಗಳಲ್ಲಿ

ಅರಗು ಬಹಳ ಸಿಗುತ್ತದೆ. ಇದಲ್ಲದೆ ಆಸಾಮು ರಾಜ್ಯದಲ್ಲಿ ಕೆಲಮಟ್ಟಿಗೆ ಅರಗು ತಯಾರಾಗುತ್ತದೆ. ಅರಗಿನಿಂದ ಒಂದು ತರದ ಬಣ್ಣವನ್ನೂ ವ್ಹಾರ್ನಿಶವನ್ನೂ ತಯಾರು ಮಾಡುತ್ತಾರೆ.

## ಖಣಿಗಳೂ, ಖನಿಜ ದ್ರವ್ಯಗಳೂ

**ಕಲ್ಲಿದ್ದಲಿ:**—ಪಶ್ಚಿಮ ಬಂಗಾಲದಲ್ಲಿ ರಾಣಿಗಂಜದಲ್ಲಿಯೂ, ಬಿಹಾರ ಮತ್ತು ಓರಿಸಾ ರಾಜ್ಯಗಳಲ್ಲಿ ಗಿರಿಢೀ ಮತ್ತು ಝರಿಯಾ ಎಂಬಲ್ಲಿಯೂ ಕಲ್ಲಿದ್ದಲಿಯ ದೊಡ್ಡ ದೊಡ್ಡ ಖಣಿಗಳಿರುತ್ತವೆ. ಮಧ್ಯಪ್ರದೇಶ ಮತ್ತು ಹೈದರಾಬಾದಗಳಲ್ಲಿಯೂ (ಸಿಂಗರಾಣಿಯಲ್ಲಿ) ಸಹ ಕಲ್ಲಿದ್ದಲಿಯು ಸಿಗುತ್ತದೆ.

**ಕಲ್ಲೆಣ್ಣೆ (ಪೆಟ್ರೋಲಿಯಮ್):**—ಭೂಮಿಯಲ್ಲಿ ಆಳವಾದ ಬಾವಿಗಳನ್ನು ಅಗಿದು ಈ ಎಣ್ಣೆಯನ್ನು ತೆಗೆಯುತ್ತಾರೆ. ಭಾರತದಲ್ಲಿ ಆಸಾಮುದೊಳಗೆ ಪೂರ್ವದ ಕಡೆಯಲ್ಲಿ ಹಿಮಾಲಯದ ಅಡಿಯಲ್ಲಿ ಈ ಎಣ್ಣೆಯ ಖಣಿಗಳುಂಟು.

**ಕಬ್ಬಿಣ:**—ಭಾರತದಲ್ಲಿ ಕಬ್ಬಿಣವು ಎಷ್ಟೋ ಕಡೆಯಲ್ಲಿ ಸಿಗುತ್ತದೆ. ಆದರೆ ಪಶ್ಚಿಮ ಬಂಗಾಲ, ಬಿಹಾರ, ಮತ್ತು ಓರಿಸಾ ರಾಜ್ಯಗಳೊಳಗೆ ಅದರ ದೊಡ್ಡ ದೊಡ್ಡ ಖಣಿಗಳಿರುತ್ತವೆ. ಇದೇ ಭಾಗದಲ್ಲಿ ಕಲ್ಲಿದ್ದಲಿಯ ಖಣಿಗಳಾದರೂ ಇರುವದರಿಂದ, ಕಬ್ಬಿಣದ ದೊಡ್ಡ ದೊಡ್ಡ ಕಾರಖಾನೆಗಳು ಸ್ಥಾಪಿಸಲ್ಪಟ್ಟಿರುತ್ತವೆ; ಮತ್ತು ಅಲ್ಲಿ ಸಾವಿರಾರು ಜನರು ದುಡಿಯುತ್ತಿರುತ್ತಾರೆ. ಕಬ್ಬಿಣದ ಅದುರಿನಿಂದ ಶುದ್ಧವಾದ ಕಬ್ಬಿಣವನ್ನು ದೊರಕಿಸಲಿಕ್ಕೂ ಅದರಿಂದ ಉಕ್ಕನ್ನು ತಯಾರಿಸಲಿಕ್ಕೂ, ಅದರಂತೆ ಕಬ್ಬಿಣವನ್ನು ಕರಗಿಸಿ ಅದರಿಂದ ಬೇರೆ ಬೇರೆ ವಸ್ತುಗಳನ್ನು ತಯಾರಿಸಲಿಕ್ಕೂ ಬೇಕಾಗುವ ಉಷ್ಣತೆಯನ್ನು ಹೊರಡಿಸಲಿಕ್ಕೆ ಕಲ್ಲಿದ್ದಲಿಯು ಬಹಳ ಉಪಯೋಗವಾಗುತ್ತದೆ. ಬಿಹಾರ ರಾಜ್ಯದೊಳಗಿನ ಜಮಶೇದಪುರ (ಟಾಟಾ ನಗರ) ಎಂಬಲ್ಲಿ ಟಾಟಾ ಕಂಪನಿಯ ಅತಿ ವಿಸ್ತಾರವಾದ ಕಬ್ಬಿಣದ ಕಾರಖಾನೆಯುಂಟು.

**ಮೆಂಗನೀಜ:**—ಈ ಧಾತುವಿನ ಮಿಶ್ರಣದಿಂದ ಉಕ್ಕಿಗೆ ಬಿರುಸು ತನವು ಬರುತ್ತದೆ. ಇದಕ್ಕೆ ಪರದೇಶಗಳಿಂದ ಬಹು ದೊಡ್ಡ ಪ್ರಮಾಣದಲ್ಲಿ ಬೇಡಿಕೆಯು ಇರುತ್ತದೆ. ಮದ್ರಾಸ ರಾಜ್ಯದಲ್ಲಿ, ಮೈಸೂರು ಮತ್ತು ವಿಶೇಷ ವಾಗಿ ಮಧ್ಯಪ್ರದೇಶದೊಳಗೆ ಮೆಂಗನೀಜದ ಖಣಿಗಳಿರುತ್ತವೆ.

**ಬಂಗಾರ:**--ಮೈಸೂರು ರಾಜ್ಯದೊಳಗೆ ಬಂಗಾರದ ಖಣಿಗಳು ಪ್ರಸಿದ್ಧವಾಗಿರುತ್ತವೆ. ಮದ್ರಾಸ ರಾಜ್ಯದಲ್ಲಿ ಅನಂತಪೂರ ಜಿಲ್ಹೆಯಲ್ಲಿ ಮತ್ತು ಹೈದರಾಬಾದದಲ್ಲಿ ತುಸು ಬಂಗಾರವು ಸಿಗುತ್ತದೆ.

**ಅಭ್ರಕ:**—ಈ ಪದಾರ್ಥವು ಕಾಜಿನ ಹಾಗೆ ಪಾರದರ್ಶಕವಿದ್ದರೂ ಅದರಂತೆ ಪೆಡಸಾಗಿರುವದಿಲ್ಲ. ಆದ್ದರಿಂದ ಇತ್ತಲಾಗಿ ಇದರ ಉಪಯೋಗ ವನ್ನು ವಿದ್ಯುತ್ತಿನ ಯಂತ್ರಗಳಲ್ಲಿ ಬಹಳ ಮಾಡುತ್ತಾರೆ. ಬಿಹಾರ ಮತ್ತು ಓರಿಸಾ ರಾಜ್ಯಗಳಲ್ಲಿ (ಹಜಾರಿಬಾಗದ ಹತ್ತರ) ಮದ್ರಾಸ ರಾಜ್ಯದೊಳಗಿನ ನೆಲ್ಲೋರದ ಹತ್ತರದಲ್ಲಿಯೂ ಅಭ್ರಕವು ವಿಪುಲವಾಗಿ ಸಿಗುತ್ತದೆ.

**ಉಪ್ಪು:**—ಸಮುದ್ರ ನೀರಿನಿಂದ ಎಷ್ಟೋ ಕಡೆಗೆ ಸರಕಾರದ ವಿಚಾ ರಣೆಯ ಕೆಳಗೆ ಉಪ್ಪನ್ನು ತಯಾರಿಸುತ್ತಾರೆ. ಪೂರ್ವ ಪಂಜಾಬದೊಳಗೆ ಖಣಿಗಳಿಂದ ತುಸು ಉಪ್ಪನ್ನು ತೆಗೆಯುತ್ತಾರೆ. ರಜಪೂತಸ್ಥಾನದೊಳಗಿನ ಸಾಂಬರ ಎಂಬ ಸರೋವರದ ನೀರಿನಿಂದಲೂ ಉಪ್ಪನ್ನು ತಯಾರಿಸುತ್ತಾರೆ.



೧೧ನೇ ಪ್ರಕರಣ

# ಭಾರತದೊಳಗಿನ ಉದ್ಯೋಗಗಳೂ ಮತ್ತು ಕಾರಖಾನೆಗಳೂ

ಭಾರತದೊಳಗಿನ ಜನರ ಮುಖ್ಯ ಉದ್ಯೋಗವು ಒಕ್ಕಲತನವಾಗಿರುತ್ತದೆ. ನೂರಕ್ಕೆ ಸುಮಾರು ೮೦ ರಷ್ಟು ಜನರು ಒಕ್ಕಲತನವನ್ನಾಗಲಿ ಇಲ್ಲವೆ ಅದಕ್ಕೆ ಸಂಬಂಧಿಸಿದ ಉದ್ಯೋಗಗಳನ್ನಾಗಲಿ ಮಾಡುತ್ತಾರೆ. ದೇಶದೊಳಗೆ ಇನ್ನೂ ಕಾರಖಾನೆಗಳು ಬಹಳವಿರದ್ದರಿಂದ ಪರದೇಶಗಳಿಂದ ಪಕ್ಕಾಮಾಲನ್ನು ದೊಡ್ಡ ಪ್ರಮಾಣದಲ್ಲಿ ಆಮದು ಮಾಡಬೇಕಾಗುತ್ತದೆ. ಈ ದೇಶವು ಪುರಾತನಕಾಲದಿಂದ ಕಲಾ-ಕುಸುರಿನ ಕೆಲಸದ ಬಗ್ಗೆ ಪ್ರಸಿದ್ಧವಾಗಿರುತ್ತದೆ. ನೂಲಿನ ಜಿನುಗಾದ ಬಟ್ಟೆಯೂ, ರೇಶಿಮೆಯ ಮತ್ತು ಜರದ ವಸ್ತ್ರಗಳೂ, ಅದರಂತೆ ಉಣ್ಣೆಯ ಮೇಲಾದ ಶಾಲುಗಳೂ ಈಗಲೂ ಈ ದೇಶದೊಳಗೆ ಹಲಕೆಲವು ಕಡೆಯಲ್ಲಿ ಆಗುತ್ತವೆ. ಕಲಾ-ಕುಸುರಿನ ಬೆಳ್ಳಿ-ಬಂಗಾರದ ಪಾತ್ರೆಗಳೂ, ಕಟ್ಟಿಗೆಯ ಸಾಮಾನುಗಳೂ ಹಲವು ಕಡೆಯಲ್ಲಿ ತಯಾರಾಗುತ್ತವೆ. ಮತ್ತು ಅವುಗಳಿಗೆ ಪರದೇಶಗಳಿಂದ ಸಹ ಬೇಡಿಕೆಯು ಬರುತ್ತದೆ. ಗಿರಣಿಗಳಿಂದ ಮತ್ತು ಕೈಮಗ್ಗಗಳಿಂದ ಸಾಕಷ್ಟು ವಸ್ತ್ರ ತಯಾರಾಗುತ್ತದೆ. ಪಾತ್ರೆಗಳನ್ನು ತಯಾರಿಸುವ ಸಣ್ಣ ಪುಟ್ಟ ಕಾರಖಾನೆಗಳು ದೇಶದ ತುಂಬ ಪಸರಿಸಿರುತ್ತವೆ. ಆದರೆ ಅವುಗಳಿಗೆ ಬೇಕಾಗುವ ತಾಮ್ರ-ಹಿತ್ತಾಳಿಗಳ ತಗಡುಗಳನ್ನು ಮಾತ್ರ ಪರದೇಶಗಳಿಂದ ತರಿಸಬೇಕಾಗುತ್ತದೆ.

ಇತ್ತಲಾಗಿ ಕಾರಖಾನೆಗಳು ದೊಡ್ಡ ಪ್ರಮಾಣದಲ್ಲಿ ಸ್ಥಾಪಿಸಲ್ಪಟ್ಟಿರುವವು. ಸದ್ಯಕ್ಕೆ ದೇಶದೊಳಗಿರುವ ಕಾರಖಾನೆಗಳು ಮುಂದೆ ಕೊಟ್ಟಂತಿವೆ.

೧೨ನೇ ಪ್ರಕರಣ

# ಪರದೇಶಗಳ ಸಂಗಡ ನಡೆಯುವ ಭಾರತದ ವ್ಯಾಪಾರವು

ಪರದೇಶಗಳ ಸಂಗಡ ನಡೆಯುವ ಭಾರತದ ವ್ಯಾಪಾರದ ವೈಶಿಷ್ಟ್ಯವೇ ನಂದರೆ, ಇಲ್ಲಿಂದ ಕಚ್ಚಾಮಾಲು ಪರದೇಶಗಳಿಗೆ ಹೋಗುತ್ತದೆ; ಮತ್ತು ಅದರ ಬದಲು ಪಕ್ಕಾಮಾಲು ಹೊರಗಿನಿಂದ ಬರುತ್ತದೆ. ಹತ್ತು ಹನ್ನೆರಡು ವರುಷಗಳ ಪೂರ್ವದಲ್ಲಿ (೧೯೩೮-೩೯) ಅಖಂಡ ಹಿಂದುಸ್ತಾನದ ಪರದೇಶ ಗಳೊಂದಿಗೆ ಆದ ವ್ಯಾಪಾರದ ಕಿಮ್ಮತ್ತಿನಲ್ಲಿ ಯಾವ ಬದಲಾವಣೆಯೂ ಕಂಡುಬರುವದಿಲ್ಲ. ೧೬೩ ಕೋಟಿ ರೂಪಾಯಿಗಳ ನಿರ್ಯಾತವೂ, ಮತ್ತು ೧೫೭ ಕೋಟಿ ರೂಪಾಯಿಗಳ ಆಯಾತವೂ ಇದ್ದಿತು. ೧೯೫೦ನೇ ಇಸವಿ ಸಾಲಿನಲ್ಲಿ ಆದ ಪರದೇಶಗಳೊಂದಿಗಿನ ವ್ಯಾಪಾರದ ನಿರ್ಯಾತವು ೪೫೦ ಕೋಟಿ ರೂಪಾಯಿ ಇದ್ದು, ಆಯಾತವು ೫೫೦ ಕೋಟಿ ರೂಪಾಯಿಗಳ ದ್ದಾಗಿದೆ.

ಹೋದ (೧೯೩೯-೪೬) ಮಹಾಯುದ್ಧದ ಕಾಲದಲ್ಲಿ ಮತ್ತು ಅದರ ನಂತರ ಆಯಾತ-ನಿರ್ಯಾತಗಳಲ್ಲಿ ಎಲ್ಲ ದೃಷ್ಟಿಯಿಂದ ಬದಲಾವಣೆಯು ಉಂಟಾಯಿತು. ೧೯೪೭ರಲ್ಲಿ ಹಿಂದುಸ್ತಾನವು ವಿಭಾಗಿಸಲ್ಪಟ್ಟಿತು. ಆದ್ದ ರಿಂದ ಭಾರತದೇಶದಿಂದ ಪಾಕಿಸ್ತಾನ ದೇಶವು ಪರಕೀಯವಾಗಿ ಗಣಿಸಲ್ಪಡು ತ್ತದೆ. ಇದಕ್ಕೆ ಮುಂಚೆ ಭಾರತ ದೇಶದ ಕೂಡ ಪಾಕಿಸ್ತಾನ ದೇಶಗಳಲ್ಲಿ ಆಗುವ ವ್ಯಾಪಾರವು ಅಂತರ ಪ್ರಾಂತಿಯ ಸ್ವರೂಪದ್ದಾಗಿದ್ದಿತು. ಆದರೆ ಈಗ ಅಂತರ ರಾಷ್ಟ್ರೀಯ ಸ್ವರೂಪ ತಾಳಿದೆ. ಮತ್ತು ಪಾಕಿಸ್ತಾನದೊಡನೆ ನಡೆಯುವ ವ್ಯಾಪಾರವು ಪರದೇಶದೊಡನೆ ನಡೆಯುವ ವ್ಯಾಪಾರದಂತೆ ಎಣಿಸ ಲ್ಪಡುವದು. ಆದ್ದರಿಂದ ಕ್ರಯಗಳ ಅಂಕೆ ಸಂಖ್ಯೆಗಳಲ್ಲಿ ಬಹಳ ಹೆಚ್ಚು ಕಡಿಮೆಯು ಕಂಡುಬರುವದು. ೧೯೩೮-೩೯ ಮತ್ತು ೧೯೪೯-೫೦ ವರುಷ

ದಲ್ಲಿಯ ಅಂಕೆಗಳನ್ನು ತುಲನಾತ್ಮಕ ದೃಷ್ಟಿಯಿಂದ ನೋಡಿದರೆ ನಿರ್ಯಾತ ಮತ್ತು ಆಯಾತಗಳ ದರಗಳ ಅಂಕೆಗಳಲ್ಲಿ ಹೆಚ್ಚಾದ ಏರಿಕೆಯು ಕಂಡು ಬರುವದು. ಅದರ ಒಂದು ಕಾರಣವೆಂದರೆ ಪಾಕಿಸ್ತಾನದೊಡನೆ ಆಗುವ ವ್ಯಾಪಾರದ ಅಂಕೆ-ಸಂಖ್ಯೆಗಳನ್ನೂ ಇದರಲ್ಲಿ ಕೂಡಿಸಲಾಗಿದೆ. ಪ್ರತಿಯೊಂದು ಸರಕಿನ ಬೆಲೆಯು ತೀವ್ರವಾಗಿ ಹೆಚ್ಚಾದದ್ದೂ ಮುಖ್ಯ ಕಾರಣವಾಗಿದೆ. ಸರಾಸರಿ ರೀತಿಯಿಂದ ನೋಡಿದರೆ ಪ್ರತಿಯೊಂದು ಸರಕಿನ ಬೆಲೆಯು ಮೂರು ಅಥವಾ ನಾಲ್ಕು ಪಟ್ಟಿನಷ್ಟು ಹೆಚ್ಚಾಗಿದೆ. ಇದಕ್ಕೆ ಕಾರಣವು ಮಾಲು ಹೆಚ್ಚಾಗಿ ನಿರ್ಯಾತ ಅಥವಾ ಆಯಾತ ವಾಗುವದೆಂದಿರದೆ, ಅದರ ಬೆಲೆಯು ಹೆಚ್ಚಾಗಿ ಏರಿದ್ದರಿಂದ ಅಂಕೆ ಸಂಖ್ಯೆಗಳು ಈ ರೀತಿ ಬೆಳೆದು ಬಿಟ್ಟಿರುವವು.

ಕೆಳಗೆ ಕೊಟ್ಟ ಕೋಷ್ಟಕದಲ್ಲಿ ಕೆಲವು ದೇಶಗಳೊಂದಿಗೆ ನಿರ್ಯಾತ ಮತ್ತು ಆಯಾತ ವಾಗುವ ಸರಕುಗಳ ಹೆಸರುಗಳನ್ನು ಕೊಟ್ಟಿರುವದು. (೧೯೫೦ ನೇ ಇಸವಿಯಲ್ಲಾದ ವ್ಯಾಪಾರ).

| ದೇಶದ ಹೆಸರು | ನಿರ್ಯಾತವಾಗುವ ಸರಕು | ಆಯಾತವಾಗುವ ಸರಕು |
|---|---|---|
| ಗ್ರೇಟ ಬ್ರಿಟನ್ (ಸಂಯುಕ್ತ ರಾಷ್ಟ್ರ) | ಚಹಾ, ತಂಬಾಕ, ನಾರು ಮತ್ತು ನಾರಿನ ಬಟ್ಟೆ, ಹತ್ತಿ, ಸಣಬು, ಕಾಜು ಮತ್ತು ಅದರಿಂದ ತಯಾರಿಸಿದ ಮಾಲು, ಉಣ್ಣೆ ಮತ್ತು ಉಣ್ಣೆಯಬಟ್ಟೆ, ಗಾಲಿಚಾ, ಎಣ್ಣೆಯ ಕಾಳು ಮತ್ತು ಎಣ್ಣೆ, ಮೆಂಗನೀಜ, ಅಭ್ರಕ, ಮಸಾಲೆಯ ಪದಾರ್ಥಗಳು. | ಯಂತ್ರಸಾಮಗ್ರಿ, ಕಬ್ಬಿಣ ಮತ್ತು ಉಕ್ಕಿನ ಸಾಮಾನು, ಮೋಟರ, ಸಾಯಕಲ್, ರಸಾಯನಿಕ ದ್ರವ್ಯ, ಔಷಧ, ನೂಲಿನ ಮತ್ತು ಉಣ್ಣೆಯ ಬಟ್ಟೆಗಳು, ಕಾಜು ಮತ್ತು ಕಾಜಿನ ಸಾಮಾನುಗಳು. |
| ಜರ್ಮನೀ (ಪಶ್ಚಿಮ) | ನಾರು, ಎಣ್ಣೆಯ ಕಾಳು, ಕಾಜು | ಲೋಹ ಸಾಮಗ್ರಿಗಳು, ಉಣ್ಣೆಯ ಬಟ್ಟೆ, ಯಂತ್ರಗಳು. |
| ಇಟಲೀ | ಅರಗು. | ಉಣ್ಣೆಯ ಸಾಮಾನು, ರೇಶಿಮೆ ಮತ್ತು ಅನ್ನಧಾನ್ಯ. |

| ದೇಶದ ಹೆಸರು | ನಿರ್ಯಾತವಾಗುವ ಸರಕು | ಆಯಾತವಾಗುವ ಸರಕು |
|---|---|---|
| ಲ್ಜಿಯಮ್ | ನಾರು ಮತ್ತು ಹತ್ತಿ | ಯಂತ್ರಗಳ ಸರಕು ಮತ್ತು ಲೋಹಗಳ ಸರಕು. |
| ಾಲಂಡ | ಹತ್ತಿ ಮತ್ತು ಎಣ್ಣೆಯಕಾಳು. | ಯಂತ್ರಗಳು ಮತ್ತು ಲೋಹಗಳ ಸರಕು. |
| ತ್ಝರ್ಲಂಡ | ... | ಘಡಿಯಾಳ, ವಿದ್ಯುಚ್ಛಕ್ತಿಯ ಯಂತ್ರಗಳು, ಬಣ್ಣ ಮತ್ತು ಔಷಧಗಳು. |
| ೀಡನ್ ಮತ್ತು ನಾರ್ವೆ | ... | ಕಾಗದ. |
| ಯು. ಎಸ್. ಎಸ್. ಆರ್. (ಸೋವ್ಹಿಯಟ್ ರಶಿಯಾ) | ಚಹಾ, ನಾರು, ನಾರಿನಬಟ್ಟೆ ಮತ್ತು ಅರಗು. | ಅನ್ನಧಾನ್ಯಗಳು. |
| ಯು. ಎಸ್. ಎ. (ಸಂಯುಕ್ತ ಸಂಸ್ಥಾನ) | ಚಹಾ, ಅರಗು, ಮಸಾಲೆಯ ಸಾಮಾನುಗಳು, ಸಣಬು, ನಾರು ಮತ್ತು ನಾರಿನಬಟ್ಟೆಗಳು, ಜಮಖಾನೆ, ಮೆಂಗನೀಜ, ಕಾಜಿನ ಪದಾರ್ಥಗಳು. | ಯಂತ್ರಗಳು, ಕಬ್ಬಿಣದ ಸಾಮಾನು, ಔಷಧ, ರಸಾಯನಿಕ ದ್ರವ್ಯಗಳು, ವಿದ್ಯುಚ್ಛಕ್ತಿಯ ಸಾಮಾನುಗಳು, ಮೋಟರು, ಖನಿಜ ಪದಾರ್ಥ, ಕಾಗದ, ಕಾಜು ಮತ್ತು ಕಾಜಿನ ಸಾಮಾನು, ಅನ್ನಧಾನ್ಯಗಳು. |
| ಕೆನಡಾ | ಚಹಾ, ಗಾಲಿಚಾ, ನೂಲಿನಬಟ್ಟೆಗಳು, ಮಸಾಲೆಯ ಸಾಮಾನು. | ಮೋಟರು, ಲೋಹ ಮತ್ತು ಲೋಹ ಸಾಮಾನುಗಳು, ಕಾಗದ, ಅನ್ನಧಾನ್ಯ. |
| ಆರ್ಜೆಂಟಿನಾ, ಬ್ರಾಝೀಲ, ಕ್ಯೂಬಾ, ಚೀಲೀ, ಪೇರೂ. | ನಾರಿನ ಬಟ್ಟೆ ಮತ್ತು ತಟ್ಟು. | ಅನ್ನಧಾನ್ಯ. |

| ದೇಶದ ಹೆಸರು | ನಿರ್ಯಾತವಾಗುವ ಸರಕು | ಆಯಾತವಾಗುವ ಸರಕು |
|---|---|---|
| ಇಜಿಪ್ತ ಮತ್ತು ಸುದಾನ | ಚಹಾ, ತಂಬಾಕ, ನಾರಿನಬಟ್ಟೆ, ನೂಲಿನಬಟ್ಟೆ. | ಹತ್ತಿ, ಅನ್ನಧಾನ್ಯ. |
| ಕೋರಿಯಾ | ನಾರಿನ ಬಟ್ಟೆ, ನೂಲಿನ ಬಟ್ಟೆ, ಚಹಾ. | ಲವಂಗ, ಹತ್ತಿ, ಉಣ್ಣೆ. |
| ಆಸ್ಟ್ರೇಲಿಯಾ | ಚಹಾ, ಅರಗು, ನೂಲಿನಬಟ್ಟೆ, ನಾರಿನ ಬಟ್ಟೆ ಮತ್ತು ತಟ್ಟು, ಎಣ್ಣೆ ಮತ್ತು ಕಲ್ಲಿದ್ದಲಿ. | ಉಣ್ಣೆ ಮತ್ತು ಅನ್ನಧಾನ್ಯ. |
| ಪಾಕಿಸ್ತಾನ | ಚಹಾ, ತಂಬಾಕ, ಕಲ್ಲಿದ್ದಲಿ, ನಾರಿನ ಬಟ್ಟೆ, ನೂಲು ಮತ್ತು ರೇಶಿಮೆ ಬಟ್ಟೆ, ಎಣ್ಣೆ. | ಹಣ್ಣುಹಂಪಲು, ಹತ್ತಿ, ನಾರು, ಅನ್ನಧಾನ್ಯ. |
| ಇರಾಣ ಮತ್ತು ಬೆಹರೀನ ನಡುಗಡ್ಡೆ. | ... | ಹಣ್ಣು, ಕಲ್ಲೆಣ್ಣೆ, ಪೆಟ್ರೋಲ ಮತ್ತು ಖನಿಜ ಎಣ್ಣೆ. |
| ಸಿಲೋನ | ತಂಬಾಕ, ಕಲ್ಲಿದ್ದಲಿ, ನೂಲು ವ ರೇಶಿಮೆಯ ಬಟ್ಟೆ, ಎಣ್ಣೆ. | ಅಡಿಕೆ, ಮಸಾಲೆಯ ಸಾಮಾನು, ಎಣ್ಣೆ, (ಕೊಬ್ಬರಿಯದು) |
| ಬ್ರಹ್ಮದೇಶ | ತಂಬಾಕ, ಕಲ್ಲಿದ್ದಲಿ, ನೂಲು ವ ರೇಶಿಮೆಬಟ್ಟೆ, ವನಸ್ಪತಿ ಎಣ್ಣೆ. | ಕಟ್ಟಿಗೆ, ಖನಿಜ ಎಣ್ಣೆ, ಅನ್ನಧಾನ್ಯ. |
| ಸಾಯಮ, ಮಲಯಾ ಮತ್ತು ಚೀನ. | ನೂಲು ಮತ್ತು ನಾರಿನ ಬಟ್ಟೆಗಳು. | ಅನ್ನಧಾನ್ಯ. |
| ಜಪಾನ | ಹತ್ತಿ. | ನೂಲಿನಬಟ್ಟೆ, ಯಂತ್ರಗಳು, ಧಾತು ಸಾಮಾನುಗಳು. |

**ಅನ್ನ ಧಾನ್ಯಗಳ ಆಯಾತ:**—ಇಂದು ಭಾರತಕ್ಕೆ ಎಲ್ಲಿಂದಲಾದರೂ ಎಷ್ಟು ಬೆಲೆಗೂ ಅನ್ನ ಧಾನ್ಯಗಳನ್ನು ಪರದೇಶದಿಂದ ತರಬೇಕಾಗುತ್ತದೆ. ಅನ್ನ ಧಾನ್ಯದ ಪೂರೈಕೆಯ ಇಂತಹ ಬಿಕ್ಕಟ್ಟಿನ ಪ್ರಸಂಗ ಉದ್ಭವಿಸಲು ಕಾರಣಗಳು ಅನೇಕ ಇರುವವು. ಅವುಗಳಲ್ಲಿ ಮುಖ್ಯವಾದ ಕಾರಣಗಳು:—(೧) ಹೆಚ್ಚಾಗಿ ಬೆಳೆಯುತ್ತಿರುವ ಜನಸಂಖ್ಯೆ (೨) ಹಿಂದುಸ್ತಾನದ ವಿಭಜನೆಯಿಂದ ಹೆಚ್ಚು ಧಾನ್ಯ ಬೆಳೆಯುವ ಪ್ರದೇಶಗಳು ಪಾಕಿಸ್ತಾನದಲ್ಲಿ ಸಮಾವೇಶವಾದದ್ದರಿಂದ (೩) ನಿರ್ವಾಸಿತರ ಆಗಮನ (೪) ಬ್ರಹ್ಮದೇಶದಿಂದ ಮೊದಲಿನಂತೆ ಅಕ್ಕಿಯು ದೊರಕದೇ ಇರುವದು. ೧೯೪೯-೫೦ ರಲ್ಲಿ ಭಾರತಕ್ಕೆ ಒಂದು ನೂರು ಕೋಟಿ ರೂಪಾಯಿಗಳ ಅನ್ನ ಧಾನ್ಯ ಆಮದು ಮಾಡಲ್ಪಟ್ಟಿರುವದು. ಯಾವ ದೇಶದಿಂದ ತರಿಸಲ್ಪಟ್ಟಿರುವದೋ ಆ ದೇಶಗಳ ಹೆಸರು ಮುಂದೆ ಕೊಟ್ಟಂತಿರುತ್ತವೆ. ಆಸ್ಟ್ರೇಲಿಯಾ, ಯು. ಎಸ್. ಎ., ಬ್ರಹ್ಮದೇಶ, ಯು. ಎಸ್. ಎಸ್. ಆರ್., ಸಯಾಮು, ಆರ್ಜೆಂಟಿನಾ, ಇಜಿಪ್ತ, ಪಾಕಿಸ್ತಾನ, ಕಾನಡಾ, ಮತ್ತು ಇಟಲೀ. ಇದಲ್ಲದೆ ಬೇರೆ ದೇಶಗಳಿಂದಲೂ ಅನ್ನಧಾನ್ಯ ತರಿಸಲ್ಪಟ್ಟಿದೆ.

## ೧೩ ನೇ ಪ್ರಕರಣ

# ಬ್ರಿಟಿಶ ರಾಷ್ಟ್ರಕೂಟ

(ಬ್ರಿಟಿಶ್ ಕಾಮನವೆಲ್ಥ್ ಆಫ್ ನೇಶನ್ಸ)

[ಕಾಮನವೆಲ್ಥ್ ಎಂಬ ಇಂಗ್ಲೀಷ ಶಬ್ದಗಳಲ್ಲಿ 'ವೆಲ್ಥ್' ಈ ಶಬ್ದದ ಅರ್ಥವು 'ಹಿತ' ಅಥವಾ 'ಕಲ್ಯಾಣ'ವೆಂದು ಇರುತ್ತದೆ. ಕಾಮನವೆಲ್ಥ್ ಅಂದರೆ ಪರಸ್ಪರ ಹಿತಸಾಧನೆಗಾಗಿ ಒಕ್ಕೂಟವಾದ ರಾಷ್ಟ್ರ ಇಲ್ಲವೇ ದೇಶಗಳು. ಕಾಮನ್‌ವೆಲ್ಥ್ ಎಂಬುದರ ಅರ್ಥವನ್ನು ಇಲ್ಲಿ ರಾಷ್ಟ್ರಕುಲ ಅಥವಾ ರಾಷ್ಟ್ರಕುಟುಂಬ ಎಂದು ಮಾಡಲಾಗಿದೆ].

ಹೋದ (೧೯೩೯-೪೬) ಮಹಾಯುದ್ಧದ ಪ್ರಾರಂಭದಲ್ಲಿ ಬ್ರಿಟಿಶ ಸಾಮ್ರಾಜ್ಯದ ವಿಸ್ತಾರವು ಜಗತ್ತಿನ ೧/೪ ಭಾಗದಷ್ಟಿತ್ತು. ಮತ್ತು ಜಗತ್ತಿನ ಒಟ್ಟು ಜನಸಂಖ್ಯೆಯ ೧/೪ ಭಾಗದಷ್ಟು ಜನಸಂಖ್ಯೆಯು ಬ್ರಿಟಿಶ ಸಾಮ್ರಾಜ್ಯದಲ್ಲಿತ್ತು. ಮಹಾ ಯುದ್ಧದ ಮುಗಿತಾಯದ ನಂತರ "ಸಾಮ್ರಾಜ್ಯ" ಈ ಶಬ್ದವು ಮಾಯವಾಗಿ ಅದರ ಬದಲು "ರಾಷ್ಟ್ರಕೂಟ" ಎಂಬ ಶಬ್ದವು ರೂಢಿಯಲ್ಲಿ ಬಂದಿತು. ಬ್ರಿಟಿಶ ಸಾಮ್ರಾಜ್ಯದ ಅಧೀನದಲ್ಲಿದ್ದ ಎಷ್ಟೋ ರಾಷ್ಟ್ರಗಳು ಸ್ವತಂತ್ರವಾದವು, ಮತ್ತು ೧೯೪೭ ರಲ್ಲಿ ಹಿಂದುಸ್ತಾನವೂ ಸ್ವಾತಂತ್ರ್ಯವನ್ನು ಪಡೆಯಿತು. ಮತ್ತು "ಭಾರತ" ವ "ಪಾಕಿಸ್ತಾನ" ಎಂಬ ಎರಡು ಸ್ವತಂತ್ರ ರಾಷ್ಟ್ರಗಳು ಜನ್ಮವೆತ್ತಿದವು. "ಭಾರತವು" ಪ್ರಜಾಸತ್ತಾತ್ಮಕ ರಾಷ್ಟ್ರವಾಯಿತು. ಪಾಕಿಸ್ತಾನವು ಮಾತ್ರ ಇನ್ನೂ ಬ್ರಿಟಿಶ ಸಾಮ್ರಾಜ್ಯದ ಸಂಬಂಧವನ್ನು ಕಡಿದುಕೊಂಡಿರುವದಿಲ್ಲ. ಬ್ರಿಟಿಶ ವಸಾಹತು (ಡೋಮಿನಿಯನ್) ದೇಶವೆಂದು ಅದು ಇನ್ನೂ ಬ್ರಿಟಿಶ ರಾಷ್ಟ್ರಕೂಟದಲ್ಲಿಯೇ ಉಳಿದಿರುತ್ತದೆ. ಭಾರತವು ಸರ್ವಸ್ವತಂತ್ರ ರಾಷ್ಟ್ರವಾಗಿದ್ದರೂ ಬ್ರಿಟಿಶ ರಾಷ್ಟ್ರಕೂಟದಲ್ಲಿ ಅದು ಸ್ವಖುಶಿಯಿಂದ ಉಳಿದಿರುವದು. ಈ ಸಂಬಂಧವು ಔಪಚಾರಿಕವಾಗಿರುವದಲ್ಲದೆ ಬೇರೇನು ಇಲ್ಲ. ಬ್ರಹ್ಮ

ದೇಶವು ೧೯೪೮ ನೇ ಇಸವಿಯಲ್ಲಿ ಸ್ವತಂತ್ರ ಪ್ರಜಾಸತ್ತಾತ್ಮಕ ರಾಷ್ಟ್ರವಾಯಿತು, ಮತ್ತು ಅದು ಈಗ ಬ್ರಿಟಿಶ ರಾಷ್ಟ್ರಕೂಟದಲ್ಲಿರುವದಿಲ್ಲ. ೧೯೪೮ ರಲ್ಲಿ ಸಿಲೋನ ದೇಶವೂ ಬಹುಮಟ್ಟಿಗೆ ರಾಜಕೀಯ ಸ್ವಾತಂತ್ರ್ಯ ಪಡೆಯಿತು. ಆದರೆ ಈ ರಾಷ್ಟ್ರವು ಮಾತ್ರ ಬ್ರಿಟಿಶ ರಾಷ್ಟ್ರಕೂಟದಲ್ಲಿ ನಿಜವಾದ ಘಟಕವಾಗಿ ಇರುತ್ತದೆ. ಮೇಲೆ ಹೇಳಿದ ಏಶಿಯಾ ಖಂಡದಲ್ಲಿಯ ದೇಶಗಳೂ ಮತ್ತು ಬ್ರಿಟಿಶ ನಡುಗಡ್ಡೆಗಳನ್ನೂ ಬಿಟ್ಟು, ಬ್ರಿಟಿಶ ಜನಾಂಗದಲ್ಲಿ, ಬೇರೆ ಬೇರೆ ರೀತಿಯಲ್ಲಿಯ ರಾಜಕೀಯ ಬಂಧನಕ್ಕೊಳಪಟ್ಟ ಬೇರೆ ಬೇರೆ ಮಹತ್ವದ ದೇಶಗಳು ಕೆಳಗೆ ಕೊಟ್ಟಂತ್ತಿರುತ್ತವೆ.

**ಅಮೇರಿಕಾ:**—ಕ್ಯಾನಡಾ, ಬ್ರಿಟಿಶ ಗಿಯಾನಾ, ಬ್ರಿಟಿಶ ಹೊಂಡುರಾಸ, ವೆಸ್ಟ ಇಂಡೀಜ ನಡುಗಡ್ಡೆಗಳು.

**ಆಸ್ಟ್ರೇಲಿಯಾ ಮತ್ತು ಓಶಿಯಾನಾ :**—ಕ್ಯಾಮನವೆಲ್ಥ ಆಫ್ ಆಸ್ಟ್ರೇಲಿಯಾ, ನ್ಯೂಝೀಲಂಡ, ಕೊಹೀ ನಡುಗಡ್ಡೆಗಳು.

**ಏಶಿಯಾ:**—(ಭಾರತ, ಪಾಕಿಸ್ತಾನ, ಮತ್ತು ಸಿಲೋನ ಇವುಗಳ ವಿಷಯ ಮೇಲೆ ಹೇಳಿರುತ್ತದೆ) ಮಲಯಾಸಂಘ, ಸಿಂಗಾಪೂರ, ಬೋರ್ನಿಯೊ, ಹಾಂಗಕಾಂಗ ವಗೈರೆ.

**ಯುರೋಪ:**—(ಬ್ರಿಟಿಶ ನಡುಗಡ್ಡೆಗಳ ವಿಷಯುವಾಗಿ ಈಗಾಗಲೇ ಹೇಳಿದೆ) ಜಿಬ್ರಾಲ್ಟರ, ಮಾಲ್ಟಾ, ಸಾಯಪ್ರಸ್.

ಕ್ಯಾಮನವೆಲ್ಥದೊಳಗಿನ ರಾಷ್ಟ್ರಕೂಟದೊಳಗಿರುವ ಘಟಕ ದೇಶಗಳು ಒಂದಕ್ಕೊಂದು ಹೇಗೆ ನೆರವಾಗುತ್ತವೆ; ಮತ್ತು ಒಂದರಮೇಲೊಂದು ಹೇಗೆ ಅವಲಂಬಿಸಿರುತ್ತವೆಂಬುದನ್ನು ನಾವು ನೋಡುವಾ. ಯಾವದಾದರೊಂದು ಪ್ರದೇಶದಲ್ಲಿ ಜನವಸತಿಯು ಹೆಚ್ಚು ದಟ್ಟಾದರೆ, ಅಲ್ಲಿಯ ಜನರು ಹೆಚ್ಚು ವಿರಲವಾದ ಜನವಸತಿಯುಳ್ಳ ಪ್ರದೇಶದೊಳಗೆ ಹೋಗಿ ನಿಲ್ಲಲು ಬರುತ್ತದೆ. ಕೆಲವು ಪ್ರದೇಶಗಳೊಳಗೆ ಗೋದಿ, ಅಕ್ಕಿ, ಮಾಂಸ ಮುಂತಾದ ಖಾದ್ಯ ಪದಾರ್ಥಗಳು ಅವಶ್ಯವಿರುವದಕ್ಕಿಂತ ಹೆಚ್ಚಾಗಿ ಬೆಳೆಯುತ್ತವೆ. ಅದರಂತೆ ಗಿರಣಿಗಳಿಗೆ ಬೇಕಾಗುವ ಹತ್ತಿ, ಉಣ್ಣೆ ಮುಂತಾದ ಪದಾರ್ಥಗಳಾ

ದರೂ ಹುಟ್ಟುತ್ತವೆ. ಇಂಥ ದೇಶಗಳು ಈ ಪ್ರಕಾರ ಹೆಚ್ಚಾದ ಪದಾರ್ಥ ಗಳನ್ನು ಗ್ರೇಟ ಬ್ರಿಟನಕ್ಕೆ ಕಳಿಸುತ್ತವೆ. ಮತ್ತು ಅವುಗಳ ಬದಲು ತಮಗೆ ಬೇಕಾಗುವ ಯಂತ್ರಗಳನ್ನೂ, ಅರಿವೆ ಮುಂತಾದ ಸರಕುಗಳನ್ನೂ ಕೊಂಡು ಕೊಳ್ಳುತ್ತವೆ. ಈ ರೀತಿಯಿಂದ ಸರಕುಗಳ ವಿನಿಮಯವಾಗುತ್ತದೆ. ಅದ ರಂತೆ ಬೇರೆ ಬೇರೆ ದೇಶಗಳ ಜನರ ನಡುವೆ ಹೆಚ್ಚು ಬಳಕೆಯಾಗಿ ಸಂಘ ಶಕ್ತಿಯು ಹೆಚ್ಚಾಗುತ್ತದೆ. ಇತ್ತಲಾಗಿ ಬರುಹೋಗುವ ಸುಲಭವಾದ ಸಾಧನಗಳು ಹೆಚ್ಚೆಚ್ಚು ಉಪಯೋಗಿಸಲ್ಪಡಹತ್ತಿದ್ದರಿಂದ ಈ ಬಳಕೆಯು ಸುಲಭಸಾಧ್ಯವಾಗಿರುತ್ತದೆ. ಘಟಕ ದೇಶಗಳ ಮುತ್ಸದ್ದಿಗಳೂ ಮುಂದಾಳು ಗಳೂ ಸುಲಭವಾಗಿ ಒಬ್ಬರನ್ನೊಬ್ಬರು ಮೇಲಿಂದ ಮೇಲೆ ಕಂಡುಕೊಂಡು, ತಮ್ಮ ಹಿತಾಹಿತಗಳನ್ನು ಚರ್ಚಿಸಲು ಅವರಿಗೆ ಅನುಕೂಲವಾಗುತ್ತದೆ. ಇದಾದರೂ ಮಹತ್ವದ ಸಂಗತಿಯಾಗಿರುತ್ತದೆ.

ಕಾಮನ್‌ವೆಲ್ಥದೊಳಗಿನ ಹಲವು ಭಾಗಗಳು ಕೇವಲ ಅವು ಬ್ರಿಟಿಶ ರಿಂದ ಶೋಧಿಸಲ್ಪಟ್ಟದ್ದರಿಂದ ಅವರ ವಶಕ್ಕೆ ಬಂದವು. ಬೇರೆ ಕೆಲವು ಪ್ರದೇಶಗಳು ಅವರು ಅಲ್ಲಿ ಹೋಗಿ ನೆಲೆಸಿದ್ದರಿಂದ ಅವರಿಗೆ ಸಿಕ್ಕವು. ಇನ್ನೂ ಕೆಲವು ಪ್ರದೇಶಗಳನ್ನು ಯುದ್ಧಮಾಡಿ ಜಯಿಸಿಕೊಂಡರು. ಮತ್ತು ಮೊದಲನೇ (೧೯೧೪–೧೮) ಮಹಾಯುದ್ಧದ ನಂತರ ಕೆಲವು ಪ್ರದೇಶಗಳ ಮೇಲ್ವಿಚಾರಣೆಯನ್ನು ಮಾಡುವ ಅಧಿಕಾರವು ಬ್ರಿಟಿಶರಿಗೆ ಪ್ರಾಪ್ತವಾಯಿತು. ಈ ರೀತಿಯಿಂದ ಇದರೊಳಗಿನ ಬೇರೆ ಬೇರೆ ಭಾಗಗಳು ಬ್ರಿಟಿಶರ ಆಧೀನ ದಲ್ಲಿ ಬಂದವು.

ಇದರೊಳಗಿನ ಹಲ್ಲವು ಭಾಗಗಳು ದಕ್ಷಿಣ ಗೋಲಾರ್ಧದಲ್ಲಿಯೂ, ಬೇರೆ ಕೆಲವು ಭಾಗಗಳು ಉತ್ತರ ಗೋಲಾರ್ಧದಲ್ಲಿಯೂ ಇರುವವು. ಇದ ರಿಂದ ಒಂದೇ ವೇಳೆಯಲ್ಲಿ ಈ ಸಾಮ್ರಾಜ್ಯದೊಳಗೆ ಪರಸ್ಪರ ವಿರುದ್ಧವಾದ ಋತುಮಾನಗಳು ಕಂಡುಬರುತ್ತವೆ. ಅದರಂತೆ ಈ ಪ್ರದೇಶಗಳು ಬೇರೆ ಬೇರೆ ಕಟಿಬಂಧದಲ್ಲಿರುವದರಿಂದ ಅವುಗಳಲ್ಲಿ ಬೇರೆ ಬೇರೆ ಹುಟ್ಟುವಳಿಗಳಂತೂ ಬಂದೇ ಬರುತ್ತದೆ. ಇದಲ್ಲದೆ ಒಂದೇ ತರದ ಹುಟ್ಟುವಳಿಯು ಬೇರೆ ಬೇರೆ ಪ್ರದೇಶಗಳಲ್ಲಿ ಅದೇ ಕಾಲಕ್ಕೆ ಬರುತ್ತಿರುತ್ತವೆ. ಇದರಿಂದ ಗ್ರೇಟಬ್ರಿಟನ್ನಕ್ಕೆ ಬಹು ಅನುಕೂಲವಾಗಿರುತ್ತದೆ. ಗ್ರೇಟಬ್ರಿಟನ್ನಕ್ಕೆ ಗೋದಿಯು ಇಡೀ

ವರುಷದಲ್ಲೆಲ್ಲ ಬೇಕಾಗುತ್ತದೆ. ಇದರ ಪೂರೈಕೆಯು ಪ್ರತಿ ತಿಂಗಳಲ್ಲಿ ಕೆಲವೊಂದು ಭಾಗದೊಳಗೆ ಬೆಳೆಯುವ ಹೊಸ ಗೋದಿಯಿಂದ ಆಗುತ್ತಿರುತ್ತದೆ.

ಆದರೆ ಈ ಎಲ್ಲ ಘಟಕ ದೇಶಗಳು ಒಂದಕ್ಕೊಂದು ಹೊಂದಿಕೊಂಡಿರುವದಿಲ್ಲ. ಆವು ಸಮುದ್ರಗಳಿಂದಲೂ ಮಹಾಸಾಗರಗಳಿಂದಲೂ ಒಂದರಿಂದೊಂದು ವಿಂಗಡಿಸಲ್ಪಟ್ಟಿರುತ್ತವೆ. ಅವುಗಳ ನಡುವೆ ವ್ಯಾಪಾರದ ಸಲುವಾಗಿ ಹೋಗುಬರುವದಕ್ಕೆ ಅನುಕೂಲವಾಗಬೇಕೆಂದು ಅಲ್ಲಲ್ಲಿ ಕಲ್ಲಿದ್ದಲಿಯ ಸಂಗ್ರಹವನ್ನು ಮಾಡುವದಕ್ಕೋಸ್ಕರ ಠಾಣ್ಯಗಳನ್ನು ಮಾಡಿಡಬೇಕಾಗಿದೆ. ಅದರಂತೆ ವ್ಯಾಪಾರದ ಮಾರ್ಗಗಳನ್ನು ಸುರಕ್ಷಿತವಾಗಿ ಇಡುವದಕ್ಕೋಸ್ಕರ ಹಡಗುಪಡೆಯನ್ನಾದರೂ ಸಿದ್ಧವಾಗಿಡಬೇಕಾಗುತ್ತದೆ. ಬ್ರಿಟಿಶ ರಾಷ್ಟ್ರಕೂಟದಲ್ಲಿರುವ ಕೆಲ ಮಹತ್ವವುಳ್ಳ ಘಟಕಗಳ ಭೌಗೋಲಿಕ ವಿಚಾರವನ್ನು ಮುಂದಿನ ಪ್ರಕರಣದಲ್ಲಿ ಕೊಟ್ಟಿದೆ.

೧೪ನೇ ಪ್ರಕರಣ

# ಸಿಲೋನ, ಬ್ರಿ. ಮಲಾಯಾ ಬೋರ್ನಿಯೊ, ಹಾಂಗಕಾಂಗ, ಫಿಜೀ ಮತ್ತು ಪಾಪುಅ.

## ಸಿಲೋನ

ನಮ್ಮ ದೇಶದ ದಕ್ಷಿಣಕ್ಕಿರುವ ಈ ನಡುಗಡ್ಡೆಗೆ ಸಿಂಹಲದ್ವೀಪ ಅಥವಾ ಸಿಲೋನವೆಂಬ ಹೆಸರು. ಭಾರತ ಸಿಲೋನಗಳ ನಡುವಿನ ಸಮುದ್ರವು ಕಿರಿಯಾಳಾಗಿದ್ದು, ಇವೆರಡೂ ದೇಶಗಳನ್ನು ಜೋಡಿಸುವ ರಾಮನ ಸೇತುವೆ ಅಥವಾ ಆಡಮನ ಪೂಲು ಹವಳದ ಬಂಡೆಯಿಂದಲೂ ಉಸುಕಿನಿಂದಲೂ ನಿರ್ಮಾಣವಾಗಿರುತ್ತದೆ. ಇದರ ಮೇಲಿಂದ ಒಂದಾನೊಂದು ಕಾಲದಲ್ಲಿ ಈ ದ್ವೀಪವು ನಮ್ಮ ದೇಶಕ್ಕೆ ಹೊಂದಿಕೊಂಡಿರಬೇಕೆಂದು ಕಂಡುಬರುತ್ತದೆ.

ಪ್ರಾಚೀನ ಕಾಲದಿಂದ ಈ ನಡುಗಡ್ಡೆಯೊಳಗೆ ವೆದ್ಧವೆಂಬ ಹೆಸರಿನ ಜನರು ವಾಸಿಸುತ್ತಿದ್ದರು. ಕ್ರಿ. ಶ. ಪೂರ್ವದಲ್ಲಿ ೫೫೦ನೇ ವರುಷ ವಿಜಯನೆಂಬ ಹೆಸರಿನ ರಾಜಪುತ್ರನು ತನ್ನ ಏಳುನೂರು ಅನುಯಾಯಿಗಳೊಂದಿಗೆ ಬಂಗಾಲದಿಂದ ಇಲ್ಲಿ ಮನೆ ಮಾಡಿಕೊಂಡಿರಲಿಕ್ಕೆ (ವಸಾಹತು ಮಾಡಲಿಕ್ಕೆ) ಹಡಗದಿಂದ ಹೋದನು. ಇಲ್ಲಿಂದ ಮುಂದೆ ಕಾಲಕಾಲಕ್ಕೆ ಆರ್ಯ ಜನರು ಇಲ್ಲಿ ಹೋಗಿ ನಿಂತರು. ಸಿಂಹಲೀ ಜನರು ಆರ್ಯ ಭಾಷೆಯನ್ನು ಆಡುತ್ತಾರೆ; ಮತ್ತು ಬೌದ್ಧಧರ್ಮದವರಿರುತ್ತಾರೆ. ಈ ದ್ವೀಪದ ಜನಸಂಖ್ಯೆಯು ಸುಮಾರು ೭೦ ಲಕ್ಷ ಇರುತ್ತದೆ.

ಈ ದ್ವೀಪದ ದಕ್ಷಿಣ ಭಾಗದೊಳಗಿನ ಮಧ್ಯದಲ್ಲಿ ಎತ್ತರವಾದ ಗುಡ್ಡಗಳ ಪ್ರದೇಶವಿದ್ದು ಅದು ನಾಲ್ಕೂ ಕಡೆಗೆ ಇಳಿಜಾರಾಗುತ್ತ ಹೋಗಿ, ಸಮುದ್ರ ದಂಡೆಯ ಮೇಲಿರುವ ಸಪಾಟಾದ ಬೈಲಿನೊಳಗೆ ಕೂಡಿ ಹೋಗಿರುತ್ತದೆ. ಉತ್ತರ ಭಾಗವೆಲ್ಲ ಬೈಲಾಗಿರುತ್ತದೆ. ಗುಡ್ಡಗಾಡು ಭಾಗದೊಳಗಿನ ಅತಿ ಉನ್ನತವಾದ ಒಂದು ಶಿಖರವು ೭೦೦೦ ಫೂಟು ಎತ್ತರವಾಗಿರುತ್ತದೆ. ಬೌದ್ಧ ಧರ್ಮದವರು ಅದನ್ನು ಪವಿತ್ರಸ್ಥಾನವೆಂದು ತಿಳಿಯುತ್ತಾರೆ. ಅದಕ್ಕೆ ಆಡಮನ ಶಿಖರವೆಂತಲೂ ಅನ್ನುತ್ತಾರೆ. ಈ ನಡುಗಡ್ಡೆಯಲ್ಲಿ ಎಲ್ಲ ಹೊಳೆಗಳು ಗುಡ್ಡಗಾಡು ಪ್ರದೇಶದಲ್ಲಿ ಉಗಮವಾಗಿ ಅಲ್ಲಿಂದ ಕೆಳಗೆ ಹರಿದು ಬರುವದರಿಂದ ಅವು ಅಷ್ಟು ಉದ್ದವಾಗಿರುವದಿಲ್ಲ. ಮತ್ತು ಓಡಾಡುವದಕ್ಕೆ ಸಹ ಉಪಯೋಗವಾಗಿರುವದಿಲ್ಲ.

ನೈಋತ್ಯದ ಕಡೆಯಿಂದಲೂ ಈಶಾನ್ಯದ ಕಡೆಯಿಂದಲೂ ಬೀಸುವ ಮನ್ಸೂನ ಗಾಳಿಗಳ ಮಾರ್ಗದಲ್ಲಿ ಈ ದ್ವೀಪವಿರುವದರಿಂದ ಅಲ್ಲಿ ಹನ್ನೆರಡೂ ತಿಂಗಳು ಮಳೆಯಾಗುತ್ತದೆ. ಆದ್ದರಿಂದ ನೋಡಿದತ್ತೆಲ್ಲ ಹಚ್ಚಗೆ ಮುರಿಯುತ್ತಿರುವ ಗಿಡಗಂಟಿಗಳು ಕಾಣುತ್ತವೆ. ಅದರಲ್ಲಿಯೂ ಗುಡ್ಡಗಳ ಭಾಗದಲ್ಲಿಯ ಸೃಷ್ಟಿಸೌಂದರ್ಯವು ಬಹು ರಮಣೀಯವಾಗಿರುತ್ತದೆ. ಈ ಪ್ರದೇಶವು ವಿಷುವವೃತ್ತದ ಸಮೀಪದಲ್ಲಿದ್ದರೂ, ಸುತ್ತಲೂ ಸಮುದ್ರವಿರುವದರಿಂದ, ಇಲ್ಲಿಯ ಹವೆಯು ಸೌಮ್ಯವಾಗಿರುತ್ತದೆ. ಬೇಸಿಗೆಯೊಳಗಿನ ಹವಾಮಾನಕ್ಕೂ ಚಳಿಗಾಲದೊಳಗಿನ ಹವಾಮಾನಕ್ಕೂ ವಿಶೇಷ ಅಂತರ ಬೀಳುವದಿಲ್ಲ.

ಸಮುದ್ರದಂಡೆಗುಂಟ ಮೈಲುಗಟ್ಲೆ ಸುಂದರವಾದ ತೆಂಗಿನ ಗಿಡದ ಬನಗಳು ಹಬ್ಬಿರುತ್ತವೆ. ಸಿಂಹಲೀ ಜನರು ಅಡಿಗೆಯೊಳಗೆ ತೆಂಗಿನಕಾಯಿಗಳನ್ನು ಬಹಳವಾಗಿ ಉಪಯೋಗಿಸುತ್ತಾರೆ. ಒಣಗಿದ ಕೊಬ್ಬರಿ, ಎಣ್ಣೆ, ಕಾತಿ, ಹಗ್ಗ ಮುಂತಾದ ಸರಕುಗಳು ಇಲ್ಲಿಂದ ಪರದೇಶಗಳಿಗೆ ರಫ್ತಾಗುತ್ತವೆ. ತಗ್ಗು ಪ್ರದೇಶದಲ್ಲಿ ಅಕ್ಕಿಯು ಚೆನ್ನಾಗಿ ಬೆಳೆಯುತ್ತದೆ. ಅಕ್ಕಿಯು ಇಲ್ಲಿಯ ಜನರ ಮುಖ್ಯವಾದ ಆಹಾರವಾಗಿರುತ್ತದೆ; ಆದರೆ ಈ ದೇಶದಲ್ಲಿ ಸಾಕಷ್ಟು ಅಕ್ಕಿಯು ಬೆಳೆಯದ್ದರಿಂದ, ಅವರಿಗೆ ರಂಗೂನದಿಂದ ಬಹಳ ಅಕ್ಕಿಯನ್ನು ತರಿಸಿಕೊಳ್ಳಬೇಕಾಗುತ್ತದೆ. ಅಡಿಕೆ, ದಾಲಚಿನ್ನಿ, ಯಾಲಕ್ಕಿಗಳ ಬೆಳೆ

ಗಳಾದರೂ ಚೆನ್ನಾಗಿ ಬರುತ್ತವೆ. ಬುಂದಿನ ಹುಟ್ಟುವಳಿಯು ಇತ್ತಲಾಗಿ ಬಹಳ ಕಡಿಮೆಯಾಗಿರುತ್ತದೆ. ಗುಡ್ಡಗಳ ಇಳುಕಲುಗಳ ಮೇಲಿನ ಗಿಡಗಳನ್ನು ಕಡಿದು ಅಲ್ಲಿ ಚಹದ ತೋಟಗಳನ್ನೂ, ರಬ್ಬರಿನ ಗಿಡಗಳನ್ನೂ



ಸಮುದ್ರದೊಳಗಿಂದ ಮುತ್ತು ತೆಗೆಯುವವರು

ಹಚ್ಚಹತ್ತಿದ್ದಾರೆ. ಇವೆಲ್ಲವೂ ಬಹುತರವಾಗಿ ಯುರೋಪಿಯನ್ ಜನರ ಕೈಯಲ್ಲಿರುತ್ತವೆ. ಕೋಕೋದ ಬೆಳೆಯಾದರೂ ಕ್ರಮೇಣ. ಹೆಚ್ಚುತ್ತಲಿದೆ.

ಕೆಲವು ಕಡೆಯಲ್ಲಿ ಪ್ಲಂಬೆಗೋ ಅಥವಾ ಗ್ರಾಫಾಯಿಟ ಎಂಬ ಹೆಸರಿನ ಖಣಿ ಗಳಿರುತ್ತವೆ. ಆ ಧಾತುವಿನಿಂದ ಸೀಸಪೇನ್ಸಿಲಗಳನ್ನು ತಯಾರಿಸುತ್ತಾರೆ. ಗುಡ್ಡಗಾಡು ಪ್ರದೇಶದ ಕೆಲವು ಭಾಗದಲ್ಲಿ ರತ್ನಗಳೂ ದೊರಕುತ್ತವೆ. ಮಾನಾರದ ಆಖಾತದೊಳಗೆ ಮುತ್ತಿನ ಸಿಂಪಿಗಳನ್ನು ತೆಗೆಯುವ ಉದ್ಯೋಗವು ಸಾಗುತ್ತದೆ. ಈ ಎಲ್ಲ ಸಂಗತಿಗಳಿಂದ ಅಲ್ಲಿಯ ಜನರು ಯಾವ ತರದ ಉದ್ಯೋಗ-ವ್ಯವಸಾಯಗಳನ್ನು ಮಾಡುತ್ತಿರುವರೆಂಬುದರ ಕಲ್ಪನೆಯು ನಮಗೆ ಸಹಜವಾಗಿ ಬರುವದು.

ಈ ದ್ವೀಪದ ಕರಾವಳಿಯು ಅಖಂಡವಾಗಿರುವದರಿಂದ ಅಲ್ಲಿ ಸುರಕ್ಷಿತವಾದ ನೈಸರ್ಗಿಕ ಬಂದರಗಳಿರುವದಿಲ್ಲ. **ತ್ರಿಂಕೋಮಾಲಿ** ಎಂಬದೊಂದೇ ವಿಸ್ತಾರವಾದದ್ದೂ, ಅನುಕೂಲವಾದದ್ದೂ ಬಂದರವಿರುತ್ತದೆ. ಆದರೆ ದೇಶದ ವ್ಯಾಪಾರದ ಕೇಂದ್ರವು ಪಶ್ಚಿಮ ದಂಡೆಯ ಮೇಲೆ ಬಂದದ್ದರಿಂದ ಈ ಬಂದ




ಕೋಲಂಬೋ

ರದ ಮಹತ್ವವು ತೀರ ಕಡಿಮೆಯಾಗಿದೆ. ಯುರೋಪದಿಂದ ಪೌರ್ವಾತ್ಯ ದೇಶಗಳ ಕಡೆಗೆ ಬರು ಹೋಗುವ ಮಾರ್ಗದ ಮೇಲೆ **ಕೋಲಂಬೋ** ಎಂಬ

ಅತಿ ಸಮೀಪದ ಬಂದರವಿರುತ್ತದೆ. ಇದು ಸಿಲೋನದ ರಾಜಧಾನಿಯಾಗಿದ್ದು, ಸಿಲೋನದ ನೈಋತ್ಯದ ದಂಡೆಯು ಮೇಲೆ ಒಂದು ಹೊಳೆಯು ಮುಖದ ಹತ್ತರ ಇರುತ್ತದೆ. ಅಲ್ಲಿ ನೈಸರ್ಗಿಕವಾದ ಬಂದರವಿಲ್ಲದ್ದರಿಂದ ಸಮುದ್ರದೊಳಗೆ ನೀರಿನ ತೆರೆಗಳನ್ನು ತಡೆಯುವದಕ್ಕಾಗಿ ಪ್ರಚಂಡವಾದ ಗೋಡೆಗಳನ್ನು ಕಟ್ಟಿ ಕೃತ್ರಿಮ ಬಂದರವನ್ನು ತಯಾರು ಮಾಡಿದ್ದಾರೆ; ಸಿಲೋನದ ಯಾವತ್ತೂ ಬರುಹೋಗುವ ವ್ಯಾಪಾರವು ಇದೇ ಬಂದರದೊಳಗಿಂದ ಸಾಗುತ್ತದೆ. ಆ ದ್ದ ರಿಂ ದ ಸಿಲೋನದೊಳಗಿನ ಯಾವತ್ತೂ ಬರುಹೋಗುವ ವ್ಯಾಪಾರವು ಇದೇ ಬಂದರದೊಳಗಿಂದ ಸಾಗುತ್ತದೆ. ಆದ್ದರಿಂದ ಇದು ಸಿಲೋನದೊಳಗಿನ ಯಾವತ್ತೂ ರೇಲು ಮಾರ್ಗಗಳ ಕೇಂದ್ರವಾಗಿರುತ್ತದೆ. ಹಿಂದೂ ಮಹಾಸಾಗರದೊಳಗಿನ ನಟ್ಟನಡುವಿನ ಬಂದರದ ಸ್ಥಳವಾಗಿರುವದರಿಂದ ಇದಕ್ಕೆ ಜಗತ್ತಿನೊಳಗಿನ ಮಹತ್ವವು ಬಂದಿರುತ್ತದೆ. ದಕ್ಷಿಣ ಮತ್ತು ಪೂರ್ವ ಆಫ್ರಿಕಾ, ಭಾರತ, ಸ್ಟ್ರೇಟ್ಸ್ ಸೆಟ್‌ಲಮೆಂಟ್ಸ್, ಈಸ್ಟ ಇಂಡೀಜ ಮತ್ತು ಪಶ್ಚಿಮ ಆಸ್ಟ್ರೇಲಿಯಾ ದೇಶಗಳಿಂದ ಹೊರಡುವ ಜಲಮಾರ್ಗಗಳು ಇಲ್ಲಿ ಒಟ್ಟುಗೂಡುವದರಿಂದ, ಈ ಪಟ್ಟಣವು ಸ್ವಾಭಾವಿಕವಾಗಿಯೇ ಒಂದು ಮಹತ್ವವಾದ ವ್ಯಾಪಾರದ ಸ್ಥಳವಾಗಿರುತ್ತದೆ. ಈ ಎಲ್ಲ ದೇಶಗಳ ಹಡಗಗಳಿಗೆ ಕಲ್ಲಿದ್ದಲಿ ಮತ್ತು ಎಣ್ಣೆಗಳ ಪೂರೈಕೆಯನ್ನು ಮಾಡಿಕೊಡುವ ಸೌಕರ್ಯವು ಇಲ್ಲಿರುವದರಿಂದ ಈ ಬಂದರದೊಳಗೆ ಯಾವಾಗಲೂ ಹಡಗಗಳ ಗದ್ದಲವಿರುತ್ತದೆ. ಅದರಂತೆ ಉಗಿ ಹಡಗಗಳನ್ನು ದುರುಸ್ತುಮಾಡುವದೂ ಅವುಗಳಿಗೆ ಬಣ್ಣ ಕೊಡುವದೂ ಮುಂತಾದ ಕೆಲಸಗಳು ನಡದೇ ಇರುತ್ತವೆ. ಒಟ್ಟಿನ ಮೇಲೆ ಕೋಲಂಬೋ ಪಟ್ಟಣಕ್ಕೆ ಶ್ರೇಷ್ಠತರದ ಭೌಗೋಲಿಕ ಮಹತ್ವವು ಪ್ರಾಪ್ತವಾಗಿರುತ್ತದೆ.

ದಕ್ಷಿಣಕ್ಕಿರುವ **ಗಾಲ** ಎಂಬ ಬಂದರವು ಪೂರ್ವ ಕಾಲದಲ್ಲಿ ಬಹಳ ಪ್ರಸಿದ್ಧವಾಗಿತ್ತು; ಆದರೆ ಕೋಲಂಬೋ ಬಂದರದ ಬೆಳವಣಿಗೆಯಾದಂದಿನಿಂದ ಅದರ ಮಹತ್ವವು ಕಡಿಮೆಯಾಗಿರುತ್ತದೆ. ಉತ್ತರದ ಕಡೆಗಿರುವ ಜಾಫ್ನಾ ಎಂಬ ಬಂದರದಿಂದ ಮದ್ರಾಸದ ಸಮುದ್ರ ದಂಡೆಯು ಮೇಲೆ ಓಡಾಟವು ಸಾಗುತ್ತದೆ. ಅದರಂತೆ ಮಾನಾರದಿಂದ ಪಂಬನ್ ದ್ವೀಪದ ವರೆಗೆ ಮತ್ತು ಕೋಲಂಬೋದಿಂದ ತುತಿಕೋರಿನದ ವರೆಗೆ ಸಣ್ಣ ಸಣ್ಣ

ಉಗಿ ಹಡಗಗಳು ಹೋಗಿ ಬರುತ್ತಿರುತ್ತವೆ. **ಕ್ಯಾಂಡೀ** ಎಂಬ ಸುಂದರ ವಾದ ಪಟ್ಟಣವು ಸಾಕಷ್ಟು ಎತ್ತರದ ಮೇಲೆ ಒಂದು ಸರೋವರದ ಸುತ್ತ ಮುತ್ತಲೂ ನೆಲೆಸಿರುವದರಿಂದ ಅಲ್ಲಿಯ ಹವೆಯು ಚೆನ್ನಾಗಿ ಇರುತ್ತದೆ. ಪುರಾತನ ಕಾಲದಲ್ಲಿ ಸ್ವತಂತ್ರರಾದ ಅರಸರು ಇಲ್ಲಿ ಆಳುತ್ತಿದ್ದರು. ಅಲ್ಲಿಯ ಬೌದ್ಧಧರ್ಮದ ದೇವಾಲಯವು ಬಹು ಪ್ರಸಿದ್ಧ ಉಂಟು. **ನೂವಾರಾ ಎಲಿಯಾ** ಎಂಬ ಪಟ್ಟಣವು ಗುಡ್ಡದ ಮೇಲಿದ್ದು ಅದು ಒಳ್ಳೇ ಹವೆಯುಳ್ಳ ಸ್ಥಳವೆಂದು ಪ್ರಸಿದ್ಧವಿರುತ್ತದೆ. ಮೇಲೆ ಹೇಳಿದ ಎಲ್ಲ ಸ್ಥಳಗಳ ವರೆಗೆ ಕೋಲಂಬೋದಿಂದ ರೇಲುಮಾರ್ಗಗಳಾಗಿರುತ್ತವೆ. ಉತ್ತರದ ಕಡೆಗೆ ಹೋಗುವಾಗ **ಅನುರಾಧಾಪುರ**ವೆಂಬ ಪ್ರಾಚೀನ ಕಾಲದ ಪಟ್ಟಣದ ಅವಶೇಷಗಳು ದೃಷ್ಟಿಗೆ ಬೀಳುತ್ತವೆ. ಅಲ್ಲಿಯ ದೊಡ್ಡ ದೊಡ್ಡ ದೇವಾಲಯ ಗಳೂ, ಅರಮನೆಗಳೂ, ಲೈನುದಾರಿಗಳೂ, ನೀರಿನ ಕಾಲುವೆಗಳೂ, ಕೆರೆ ಮುಂತಾದವುಗಳೆಲ್ಲವೂ ಹಾಳಾದ ಸ್ಥಿತಿಯಲ್ಲಿ ಇಂದಿಗೂ ಬಿದ್ದಿರುತ್ತವೆ. ಈ ದ್ವೀಪದ ಉತ್ತರ ಭಾಗದೊಳಗಿನ ಭೂಮಿಯು ನಿಕೃಷ್ಟ ಇದ್ದದ್ದರಿಂದ ಪೂರ್ವಕಾಲದಲ್ಲಿ ಕಾಲುವೆಗಳಿಂದ ಹೊಲಗಳಿಗೆ ನೀರಿನ ಪೂರೈಕೆಯನ್ನು ಮಾಡುತ್ತಿದ್ದರು.

## ಮಲಾಯಾ

ಕೋಲಂಬೋ ಬಂದರವನ್ನು ಬಿಟ್ಟು ೪-೫ ದಿವಸಗಳಾದ ಬಳಿಕ ನಾವು ಉಗಿಹಡಗದಿಂದ ಮಲಾಯಾ ದ್ವೀಪಕಲ್ಪದಿಂದ ತುದಿಗೆ ಇದ್ದ ಸಿಂಗಾಪೂರ ಎಂಬ ಬಂದರಕ್ಕೆ ತಲುಪುವೆವು. ಈ ದ್ವೀಪಕಲ್ಪದ ಆಕಾರವು ಸಿಂಹಲ ದ್ವೀಪದ ಇಮ್ಮಡಿ ಇರುತ್ತದೆ; ಮತ್ತು ಜನಸಂಖ್ಯೆಯು ೬೦ ಲಕ್ಷ ಇರುತ್ತದೆ. ಅದರೊಳಗೆ ಸುಮಾರು ೨೪ ಲಕ್ಷ ಮಲಾಯೀ, ೧೯ ಲಕ್ಷ ಚೀನೀ ಮತ್ತು ೫ ಲಕ್ಷ ಹಿಂದೀ ಜನರಿರುತ್ತಾರೆ. ಚೀನೀ ಜನರು ಬಹು ತರವಾಗಿ ಖಣಿಗಳಲ್ಲಿ ಮತ್ತು ತೋಟಗಳಲ್ಲಿ ದುಡಿಯುತ್ತಾರೆ. ಹಿಂದೀ ಜನರು ರಬ್ಬರಿನ ಗಿಡಗಳ ಮೇಲೆ ದುಡಿಯುತ್ತಾರೆ.

ಮಲಾಯೀ ಜನರು ಮೊಟ್ಟಮೊದಲು ದಕ್ಷಿಣ ಭಾರತದಿಂದ ಸುಮಾತ್ರಾ ಎಂಬ ದ್ವೀಪಕ್ಕೆ ಹೋದರು. ಅಲ್ಲಿಂದ ಜಾವಾ ದ್ವೀಪದಲ್ಲಿ ಮತ್ತು ಜಾವಾದ್ವೀಪದಿಂದ ಸಿಂಗಾಪೂರದ ಮಾರ್ಗವಾಗಿ ಮಲಾಯಾ ದ್ವೀಪ

ಕಲ್ಪದೊಳಗೆ ಪಸರಿಸಿ ಅಲ್ಲಿಯೇ ಮನೆಮಾಡಿಕೊಂಡು ನಿಂತರು. ಈ ಜನರು ಮಲಯಾ ಎಂಬ ಭಾಷೆಯನ್ನಾಡುತ್ತಾರೆ. ಅವರು ಬಹು ನಾಚು ಬುರುಕರಿದ್ದು ಅವರಿಗೆ ಹಳೇ ಸಂಗತಿಗಳು ಬಹಳ ಸೇರುತ್ತವೆ. ಆದರೆ ಅವರು ಬಹು ಗಟ್ಟಿಗರೂ ಸ್ನೇಹಪೂರ್ಣವೃತ್ತಿಯವರೂ ಶೂರರೂ ಆಗಿರು ತ್ತಾರೆ. ೧೮೭೪ರ ವರೆಗೆ ನಾಲ್ಕಾರು ಕತ್ತಿಗಳನ್ನು ಸಂಗಡ ತೆಗೆದುಕೊಳ್ಳದೆ ಅವರು ಮನೆಯ ಹೊರಗೆ ಹೋಗುತ್ತಿದ್ದಿಲ್ಲ. ಈ ಜನರು ಕುಶಲರಾದ ನಾವಿಕರೂ ಆಗಿರುತ್ತಾರೆ.

ಮಲಾಯಾದೊಳಗಿನ ಬಹುತರ ಯಾವತ್ತೂ ಪ್ರದೇಶವೂ ಬ್ರಿಟಿಶರ ಛತ್ರದ ಕೆಳಗಿದ್ದ ಸಂಸ್ಥಾನಗಳಿಂದ ವ್ಯಾಪಿಸಲ್ಪಟ್ಟಿರುತ್ತದೆ. ಕೇವಲ ತುಸು ಭಾಗವು ಮಾತ್ರ ಪ್ರತ್ಯಕ್ಷವಾಗಿ ಬ್ರಿಟಿಶರ ವಶದಲ್ಲಿದೆ. ಈ ಉದ್ದವಾದ ದ್ವೀಪಕಲ್ಪವು ೬೦೦೦ ಫೂಟು ಎತ್ತರವಾದ ಪರ್ವತಾವಳಿಯಿಂದ ತುಂಬಿ ರುತ್ತದೆ. ಈ ಸಾಲು ಮೂಲತಃ ಹಿಮಾಲಯ ಪರ್ವತದಿಂದ ಹೊರಟಿರು ವಂತೆ ಕಂಡುಬರುತ್ತದೆ. ಮಲಾಯಾದ ದಕ್ಷಿಣ ಭಾಗವು ಸಿಲೋನದಂತೆ ವಿಷುವವೃತ್ತದ ಸಮೀಪಕ್ಕಿರುವದರಿಂದ ಅಲ್ಲಿ ಉಷ್ಣತಾಮಾನವು ಹೆಚ್ಚಾಗಿ ರುತ್ತದೆ. ಇಲ್ಲಿ ಎರಡೂ ಮಾನ್ಸೂನಗಳಿಂದ ಮಳೆಯಾಗುತ್ತದೆ. ಆದರೆ ಬೇಸಿಗೆಯಲ್ಲಿ ಅದು ಹೆಚ್ಚಿಗೆ ಬೀಳುತ್ತದೆ. ಇಂಥ ಪರಿಸ್ಥಿತಿಯಲ್ಲಿ ಗುಡ್ಡಗಳ ಮೇಲೆ ಹಳವುಗಳಿರುವದು ಸ್ವಾಭಾವಿಕವೇ ಸರಿ. ಈ ಪ್ರದೇಶದಲ್ಲಿರುವ ಜನರು ಕಟ್ಟಿಗೆ ಕಡಿಯುವ ಉದ್ಯೋಗವನ್ನು ಮಾಡುವರು. ಹಲವರು ಅಂಟು, ರಾಳ, ಬೆತ್ತ, ಬಿದುರು ಮುಂತಾದವುಗಳನ್ನು ಕೂಡ ಹಾಕುತ್ತಾರೆ. ದಂಡೆಯ ಮೇಲಿನ ಸಪಾಟಾದ ಬೈಲಿನಲ್ಲಿ ತೆಂಗು, ಅಡಿಕೆ, ಬಾಳೆ, ಅನನಸ, ಕಿತ್ತಳೆ ಮುಂತಾದ ಹುಟ್ಟುವಳಿಗಳನ್ನು ಬೆಳೆಯುತ್ತಾರೆ. ಮಲಾಯಾದ ಹವೆಯು ರಬ್ಬರಿನ ಗಿಡಕ್ಕೆ ಅತ್ಯುತ್ತಮವಾಗಿರುವದನ್ನು ಕಂಡಕೂಡಲೇ ಅಲ್ಲಿ ಇತ್ತಲಾಗಿ ರಬ್ಬರಿನ ದೊಡ್ಡ ದೊಡ್ಡ ಹಳವುಗಳಾಗಿರುತ್ತವೆ. ಅವುಗ ಳಿಂದ ಇಡೀ ಜಗತ್ತಿನೊಳಗಿನ ರಬ್ಬರದ ಅರ್ಧದಷ್ಟು ರಬ್ಬರವು ಹೊರಡು ತ್ತದೆ. ಈ ದ್ವೀಪಕಲ್ಪದೊಳಗೆ ತವರಿನ ದೊಡ್ಡ ದೊಡ್ಡ ಖಣಿಗಳುಂಟು.

ಈ ಗುಡ್ಡಗಾಡು ದ್ವೀಪಕಲ್ಪದೊಳಗೆ ಪಟ್ಟಣಗಳೂ ಹೆಚ್ಚಾಗಿ ಇರು ವದು ದುರ್ಲಭವಾದ ಮಾತೇ ಸರಿ. **ಸಿಂಗಾಪೂರ** ಎಂಬ ಪಟ್ಟಣವು ಮಲಾಯಾ ದ್ವೀಪಕಲ್ಪದ ತುದಿಯಲ್ಲಿರುವ ಸಿಂಗಾಪೂರ ಎಂಬ ಸಣ್ಣ ದ್ವೀಪದ ಮೇಲಿನ ಮಹತ್ವವಾದ ಬಂದರವಿರುತ್ತದೆ. ಕೋಲಂಬೋ ಬಂದರ

ದಂತೆಯೇ ಭೌಗೋಲಿಕ ಸ್ಥಾನದಿಂದ ಈ ಬಂದರಕ್ಕೂ ಮಹತ್ವವು ಪ್ರಾಪ್ತವಾಗಿರುತ್ತದೆ. ಈ ಬಂದರವು ಲೋಹಮಾರ್ಗಗಳಿಂದಲೂ ಲೈನು ಮಾರ್ಗಗಳಿಂದಲೂ ಮುಖ್ಯ—ದ್ವೀಪಕಲ್ಪಕ್ಕೆ ಜೋಡಿಸಲ್ಪಟ್ಟಿರುವದರಿಂದ ಅವುಗಳ ನಡುವಿನ ಓಡಾಟವು ಒಂದೇ ಸವನೆ ನಡದೇ ಇರುತ್ತದೆ. ಪೂರ್ವದ ಕಡೆಗಿರುವ ಪೆಸಿಫಿಕ್ ಮಹಾ ಸಾಗರಕ್ಕೂ ಪಶ್ಚಿಮದ ಕಡೆಗಿರುವ ಹಿಂದೀ ಮಹಾ ಸಾಗರಕ್ಕೂ ನಡುವಿರುವ ಸಿಂಗಾಪೂರವು ಒಂದು ಹೆಬ್ಬಾಗಿಲವೇ ಆಗಿರುತ್ತದೆ. ಇದಲ್ಲದೆ ಈ ಬಂದರವು ವಿಸ್ತಾರ



ಸಿಂಗಾಪೂರ ಬಂದರವು

ವಾದದ್ದೂ ಸುರಕ್ಷಿತವಾದದ್ದೂ ಇರುವದರಿಂದ ಯುರೋಪ, ಭಾರತ, ಚೀನ, ಜಪಾನ ಮತ್ತು ಆಸ್ಟ್ರೇಲಿಯಾ ದೇಶಗಳಿಂದ ಬರುಹೋಗುವ ಹಡಗಗಳು ಇಲ್ಲಿ ನಿಲ್ಲುತ್ತವೆ. ಇಂಡೋ ಚಾಯನಾ, ಸಯಾಮು ಮತ್ತು ಮಲಾಯಾಗಳಿಂದ ರಬ್ಬರು, ತವರು, ಕೊಬ್ಬರಿಯ ಹೆರಕಲು ಮತ್ತು ದಕ್ಷಿಣ ಮತ್ತು ಪೂರ್ವ ದ್ವೀಪಗಳಿಂದ ಮಸಾಲೆಯ ಸಾಮಾನುಗಳು, ಸಕ್ಕರೆ, ತಂಬಾಕ ಮುಂತಾದ ಪದಾರ್ಥಗಳು ಮೊದಲು ಈ ಬಂದರದೊಳಗೆ ಬಂದು, ಅಲ್ಲಿಂದ ಮುಂದೆ ಪರದೇಶಗಳಿಗೆ ಕಳಿಸಲ್ಪಡುತ್ತವೆ. ಅದರಂತೆ

ಪರದೇಶಗಳಿಂದ ಬರುವ ಅರಿವೆ, ಕಬ್ಬಿಣದ ಸಾಮಾನುಗಳು, ಯಂತ್ರ ಮುಂತಾದ ಸರಕುಗಳು ಮೊಟ್ಟಮೊದಲು ಇದೇ ಬಂದರಕ್ಕೆ ಬಂದು, ಅಲ್ಲಿಂದ ಮುಂದೆ ಸಣ್ಣ ಸಣ್ಣ ಹಡಗಗಳಿಂದ ಸುತ್ತಮುತ್ತಲಿನ ಪ್ರದೇಶಗಳಿಗೆ ಕಳಿಸಲ್ಪಡುತ್ತವೆ. ಈ ಕಾರಣಗಳಿಂದ ಈ ಬಂದರದೊಳಗೆ ವ್ಯಾಪಾರದ ಸರಕುಗಳ ಆಮದು-ರಫ್ತುಗಳು ಬಹು ದೊಡ್ಡ ಪ್ರಮಾಣದಲ್ಲಿ ಸಾಗುತ್ತವೆ. ಈ ಬಂದರದ ಮಹತ್ವವನ್ನು ಕಂಡು ಬ್ರಿಟಿಶ ಸರಕಾರದವರು ಈ ಬಂದರದೊಳಗೆ ಬಲವಾದ ಹಡಗುಪಡೆಯನ್ನು ಇಟ್ಟಿದ್ದಾರೆ.

**ಪಿನಾಂಗ** ಎಂಬ ಹೆಸರಿನ ಇನ್ನೊಂದು ಮಹತ್ವದ ಬಂದರವಿರುತ್ತದೆ. ಇಲ್ಲಿಂದ ತವರ ಬಹಳವಾಗಿ ಹೊರಗೆ ಹೋಗುತ್ತದೆ.

ಸಿಂಗಾಪೂರದಿಂದ ದ್ವೀಪಕಲ್ಪದ ದಂಡೆಗುಂಟ ಉತ್ತರದ ಕಡೆಗೆ ಸಯಾಮದೊಳಗೆ ರೇಲುದಾರಿಯು ಹೋಗುತ್ತದೆ. ಈ ದ್ವೀಪಕಲ್ಪದ ಉತ್ತರಕ್ಕೆ ತೀರ ಕಿರಿಯುಗಲಾದ ಭಾಗವಿರುತ್ತದೆ. ಅದನ್ನು ಕಡಿದು ಕಾಲುವೆಯನ್ನು ಮಾಡಿದರೆ, ರಂಗೂನದಿಂದ ಚೀನ ಜಪಾನಗಳ ಕಡೆಗೆ ಹೋಗುವ ಹಡಗಗಳಿಗೆ ವೇಳೆಯ ಉಳಿತಾಯವಾಗುವದು. ಇಂಥದೊಂದು ಕಾಲುವೆಯನ್ನು ತಯಾರಿಸುವ ವಿಚಾರವು ನಡೆದಿರುತ್ತದೆ. ಯುರೋಪದಿಂದ ಆಸ್ಟ್ರೇಲಿಯಾಕ್ಕೆ ಹೋಗುವ ವಿಮಾನಗಳು ಸಿಂಗಾಪುರದೊಳಗೆ ಒಂದು ದಿವಸ ಉಳಕೊಳ್ಳುತ್ತವೆ.

## ಬೋರ್ನಿಯೊ

ಮಲಾಯಾದಿಂದ ಸಮೀಪದಲ್ಲಿಯೇ ಬೋರ್ನಿಯೊ ಎಂಬ ವಿಸ್ತೀರ್ಣವಾದ ನಡುಗಡ್ಡೆಯುಂಟು. ಈ ಗುಡ್ಡಗಾಡು ದ್ವೀಪದ ಸುಮಾರು ನಾಲ್ಕನೆಯ ಪಾಲು ಬ್ರಿಟಿಶರ ವಶದಲ್ಲಿರುತ್ತದೆ. ಉಳಿದ ಭಾಗವೆಲ್ಲ ಡಚ್ಚರ ವಶವಲ್ಲಿತ್ತು. ಆದರೆ ಅದು ಈಗ ಇಂಡೋನೀಶಿಯನ್ ರಿಪಬ್ಲಿಕ್‌ದ ಭಾಗವಾಗಿರುತ್ತದೆ. ಈ ದ್ವೀಪದೊಳಗೆ ಅಲ್ಲಿಯ ಮೂಲನಿವಾಸಿಗಳಾದ ಗುಡ್ಡಗಾಡು ಜನರ ವಸತಿಯು ತುಸು ಉಂಟು. ಆದರೆ ಮುಂದೆ ಅನೇಕ ಜಾತಿಯ ಜನರು ಅಲ್ಲಿ ಹೋಗಿ ವಾಸಿಸಹತ್ತಿದರು. ಅವರು ಬ್ರಹ್ಮದೇಶದೊಳಗಿನ ಇರಾವತೀ ನದಿಯ ಕೊಳ್ಳದೊಳಗಿಂದ ಅಲ್ಲಿ ಹೋಗಿರಬಹು

ದೆಂದು ಜನರ ಗ್ರಹಿಕೆ ಇರುತ್ತದೆ. ಈ ಜನರು ಬಹು ಗಟ್ಟಿಗರೂ ಯುದ್ಧ ಪ್ರಿಯರೂ ಆಗಿರುತ್ತಾರೆ. ದಂಡೆಯ ಮೇಲೆ ಮಲಾಯೀ ಜನರು ವಸಾಹತು ಮಾಡಿದ್ದು, ಅಲ್ಲಿ ನಡೆಯುವ ವ್ಯಾಪಾರವೆಲ್ಲ ಅವರ ಕೈಯಲ್ಲಿಯೇ ಇರುತ್ತದೆ. ಬ್ರಿಟಿಶರ ಭಾಗದೊಳಗೆ ಬ್ರೂನಈ ಎಂಬ ಸಂಸ್ಥಾನವಿರುತ್ತದೆ. ಅಲ್ಲಿ ೧೫ ನೇ ಶತಮಾನದೊಳಗೆ ಹಿಂದೂ ರಾಜ್ಯವಿತ್ತು. ಅದರ ನಂತರ ಅಲ್ಲಿ ಒಬ್ಬ ಸುಲ್ತಾನನು ರಾಜ್ಯವಾಳಹತ್ತಿದನು. ಅಂದಿನಿಂದ ಜನರು ಮುಸಲ್ಮಾನೀ ಧರ್ಮವನ್ನು ಸ್ವೀಕರಿಸಿರುತ್ತಾರೆ. ಸಾರಾವಾಕ ಎಂಬ ಪ್ರಾಂತವನ್ನು ಬ್ರುಕ್ ಎಂಬ ಹೆಸರಿನ ಇಂಗ್ಲೀಶ ಅರಸನು ಆಳುತ್ತಿದ್ದನು. ಆದರೆ ಈಗ ಅಲ್ಲಿ ಸಂಸ್ಥಾನ ರಾಜ್ಯವಿರುವದಿಲ್ಲ.

ಈ ದ್ವೀಪದಲ್ಲಿ ಬೆಳೆಯುವ ರಬ್ಬರು, ಅಂಟು, ಕಪ್ಪುರ, ಬೆತ್ತ, ತಂಬಾಕ, ಮೆಣಸು, ಸಾಬೂದಾಣೆ ಮುಂತಾದ ಸರಕುಗಳು ಸಿಂಗಾಪೂರಕ್ಕೆ ಹೋಗಿ ಅಲ್ಲಿಂದ ಅವು ಪರದೇಶಗಳಿಗೆ ಹೋಗುತ್ತವೆ. ಹಲವು ಕಡೆಯಲ್ಲಿ ಬಂಗಾರ, ಕಲ್ಲೆಣ್ಣೆ, ಕಲ್ಲಿದ್ದಲಿಗಳೂ ಸಿಗುತ್ತವೆ. ಸಂದಾಕನ, ಕುಚಿಂಗ ಮತ್ತು ಬ್ರೂನಈ ಎಂಬ ಪಟ್ಟಣಗಳು ವ್ಯಾಪಾರದ ಕೇಂದ್ರವಾಗಿರುತ್ತವೆ.

## ಹಾಂಗಕಾಂಗ

ಹಾಂಗಕಾಂಗ:—ಚೀನದ ಆಗ್ನೇಯ ದಂಡೆಯ ಮೇಲಿರುವ ಬ್ರಿಟಿಶರ ವಸಾಹತಕ್ಕೆ ಹಾಂಗಕಾಂಗ ಎಂದೆನ್ನುತ್ತಾರೆ. ಇದೊಂದು ಸಣ್ಣ ದ್ವೀಪವಾಗಿದ್ದು ಅದರೊಳಗೆ ವ್ಹಿಕ್ಟೋರಿಯಾ ಎಂಬ ದೊಡ್ಡ ಪಟ್ಟಣವಿರುತ್ತದೆ. ಹಾಂಗಕಾಂಗ ಬಂದರವು ದ್ವೀಪದ ವಾಯುವ್ಯ ದಂಡೆಯ ಮೇಲಿದ್ದು, ಉತ್ತರಕ್ಕೆ ಚೀನದ ದಕ್ಷಿಣ ಪ್ರದೇಶದೊಳಗಿನ ಕೌಲೂನ ಎಂಬ ಹೆಸರಿನ ಪಟ್ಟಣವಿರುತ್ತದೆ. ಈ ಪಟ್ಟಣವಾದರೂ ಬ್ರಿಟಿಶರ ವಶದಲ್ಲಿಯೇ ಇರುತ್ತದೆ. ದಕ್ಷಿಣ ಚೀನದೊಳಗಿನ ಅತಿ ಮಹತ್ವವಾದ ಮತ್ತು ೧೦೦೦ ಮೈಲು ಉದ್ದವಾದ ಸಿಕ್ಯಾಂಗ ಎಂಬ ಹೊಳೆಯು ಹಾಂಗಕಾಂಗ ಆಖಾತಕ್ಕೆ ಬಂದು ಕೂಡುವದರಿಂದ ಹಾಂಗಕಾಂಗ ಬಂದರವು ದಕ್ಷಿಣ ಚೀನದ ಪ್ರವೇಶದ್ವಾರವಾಗಿರುತ್ತದೆ. ಇದರಿಂದ ಈ ಬಂದರವಾದರೂ ಸಿಂಗಾಪೂರದಂತೆ ಬರುಹೋಗುವ ಸರಕುಗಳ ದೊಡ್ಡ ವ್ಯಾಪಾರದ ಸ್ಥಳವಾಗಿರುತ್ತದೆ. ಇದಲ್ಲದೆ

ಇದು ಉತ್ಕೃಷ್ಟವಾದ ಬಂದರವಾಗಿದ್ದು ಜಗತ್ತಿನೊಳಗಿನ ಎಲ್ಲ ದೇಶಗಳ ಹಡಗಗಳಿಗೆ ಬಂದು ನಿಲ್ಲಲು ಅವಕಾಶ ಕೊಟ್ಟಿದ್ದರಿಂದ, ಅದಕ್ಕೆ ಜಗತ್ತಿನೊಳಗಿನ ದೊಡ್ಡ ಮಹತ್ವದ ಸ್ಥಾನವು ಪ್ರಾಪ್ತವಾಗಿರುತ್ತದೆ. ಚಹ, ರೇಶಿಮೆ, ಎಣ್ಣೆ, ಸಕ್ಕರೆ, ಸತುವು, ಅಕ್ಕಿ, ಕಪ್ಪುರ, ಹತ್ತಿ, ನೂಲಿನ ಅರಿವೆ ಮುಂತಾದ ಸರಕುಗಳು ಈ ಬಂದರದೊಳಗಿಂದ ಹೋಗು ಬರುತ್ತವೆ. ಈ ದ್ವೀಪವು ಚೀನೀ ಸಮುದ್ರದೊಳಗಿನ ಮಹತ್ವವಾದ ದಂಡಿನ ಠಾಣ್ಯವೂ ಹಡಗುಪಡೆಯ ಠಾಣ್ಯವೂ ಆಗಿರುವದರಿಂದ, ಬ್ರಿಟಿಶ ಸಾಮ್ರಾಜ್ಯದ ದೃಷ್ಟಿಯಿಂದ ಅದಕ್ಕೆ ಬಹು ದೊಡ್ಡ ಮಹತ್ವವು ಬಂದಿರುತ್ತದೆ.

ಇಲ್ಲಿ ಸಕ್ಕರೆಯನ್ನು ತಯಾರಿಸುವ ಮತ್ತು ಹಡಗಗಳನ್ನು ಕಟ್ಟುವ ಕಾರಖಾನೆಗಳೂ, ತವರ ಶುದ್ಧ ಮಾಡುವ ಕಾರಖಾನೆಗಳೂ, ತಂಬಾಕ, ಸಿಮೆಂಟಿನ ಕಾರಖಾನೆಗಳೂ ಇರುತ್ತವೆ. ಸಮುದ್ರದಂಡೆಯ ಮೇಲೆ ಮೀನು ಹಿಡಿಯುವ ಉದ್ಯೋಗವು ಚೆನ್ನಾಗಿ ಸಾಗುತ್ತದೆ; ಆದರೆ ಆಗಾಗ್ಗೆ ಈ ಬಂದರದಲ್ಲಿ ಬಲವಾದ ಗಾಳಿಗಳು ಬೀಸುತ್ತವೆ. ಹಾಂಗಕಾಂಗದೊಳಗೆ ಬ್ರಿಟಿಶ ಹಡಗುಪಡೆಯನ್ನು ಇಟ್ಟಿರುತ್ತಾರೆ.

## ಫಿಜೀ ದ್ವೀಪಗಳು

ಪೆಸಿಫಿಕ್ ಮಹಾಸಾಗರದೊಳಗೆ ಕಾಣುವ ಎಷ್ಟೋ ಸಣ್ಣ ಸಣ್ಣ ನಡುಗಡ್ಡೆಯಲ್ಲಿ ಫಿಜೀ ದ್ವೀಪಗಳ ಸಮೂಹವು ಮಹತ್ವದ್ದಾಗಿರುತ್ತದೆ. ಈ ದ್ವೀಪಗಳು ಜ್ವಾಲಾಮುಖಿಗಳಿಂದ ನಿರ್ಮಾಣವಾಗಿದ್ದು ಅವುಗಳ ಸುತ್ತ ಮುತ್ತಲೂ ಹವಳದ ಬಂಡೆಗಳಿರುತ್ತವೆ. ಈ ದ್ವೀಪಗಳ ಜನಸಂಖ್ಯೆಯು ಸುಮಾರು ೩ ಲಕ್ಷ ಇದ್ದು ಅದರೊಳಗೆ ೧೪ಲಕ್ಷ ಜನರು ಅಲ್ಲಿಯ ಮೂಲ ನಿವಾಸಿಗಳೂ, ೧೩ಲಕ್ಷ ಹಿಂದೀ ಜನರೂ, ೫ ಸಾವಿರ ಯುರೋಪಿಯನ್ ಮತ್ತು ಇತರ ಜಾತಿಯ ಜನರೂ ಇರುತ್ತಾರೆ; ಪೂರ್ವದಲ್ಲಿ ಕೆಲವೊಂದು ಕಾಲದ ವರೆಗೆ ದುಡಿಯುವ ಕರಾರಿನಿಂದ ಹಿಂದುಸ್ತಾನದೊಳಗಿನ ಜನರನ್ನು ಅಲ್ಲಿ ಒಯ್ಯುತ್ತಿದ್ದರು. ಆದರೆ ಈಗ ಈ ಪದ್ಧತಿಯು ನಿಂತಿರುತ್ತದೆ. ಅಲ್ಲಿ ಮನೆಮಾಡಿಕೊಂಡು ನಿಂತ ಹಿಂದೀ ಜನರು ಭೂಮಿಯನ್ನು ಸಹ ಸಂಪಾದಿಸಿದ್ದಾರೆ. ಅವರು ಅಕ್ಕಿ, ಕಬ್ಬು, ತೆಂಗು, ಮತ್ತು ಬೇರೆ ಹಣ್ಣುಹಂಪಲುಗಳನ್ನು ಬೆಳೆಯುತ್ತಾರೆ.

ಫಿಜಿಯನ್ ಜನರು ಸ್ವಭಾವತಃ ಚೆಲುವರೂ ಗಟ್ಟಿಗರೂ ಆಗಿರುತ್ತಾರೆ. ಅವರಿಗೆ ಒಕ್ಕಲತನವು ಸೇರುತ್ತದೆ. ಅವರು ಕುಶಲರಾದ ನಾವಿಕರೂ ಆಗಿರುತ್ತಾರೆ ಅವರು ಬರ್ಚಿಯಿಂದಲೂ, ಬೆತ್ತಗಳಿಂದಲೂ ಮೀನು ಗಳನ್ನು ಹಿಡಿಯುತ್ತಾರೆ. ಮತ್ತು ಮುತ್ತಿನ ಸಿಂಪುಗಳನ್ನು ತೆಗೆಯುವದು, ಆವಿಗಳ ಬೆನ್ನುಗಳನ್ನು ಮಾರುವದು ಮುಂತಾದ ಉದ್ಯೋಗಗಳನ್ನು ಅವರು ಮಾಡುತ್ತಾರೆ. ಅದರಂತೆ ಅವರು ತೆಂಗಿನ ತೋಟಗಳಲ್ಲಿಯೂ, ಬಾಳೆ, ರಬ್ಬರು ಮತ್ತು ಕಾಫಿಯ ತೋಟಗಳಲ್ಲಿಯೂ ದುಡಿಯುತ್ತಾರೆ. ಬ್ರೆಡ್ ಫ್ರುಟ್ (ನೀರಹಲಸಿನಕಾಯಿ) ಮತ್ತು ಬಾಳೆ ಹಣ್ಣುಗಳು ಇಲ್ಲಿಯ ಜನರ ಮುಖ್ಯ ಆಹಾರವಾಗಿರುತ್ತವೆ.

ಈ ದ್ವೀಪಗಳ ಕೆಲವು ಭಾಗಗಳಲ್ಲಿ ಹಳವುಗಳಾದರೂ ಇರುತ್ತವೆ. ರಫ್ತಾಗುವ ಸರಕುಗಳಲ್ಲಿ ಸಕ್ಕರೆ, ತಂಬಾಕ ಮತ್ತು ಹತ್ತಿ ಇವು ಮುಖ್ಯ ವಾಗಿರುತ್ತವೆ. **ಸುವಾ** ಎಂಬದು ಇಲ್ಲಿಯ ರಾಜಧಾನಿಯಾಗಿರುತ್ತದೆ.

## ಪಾಪುಆ

ಆಸ್ಟ್ರೇಲಿಯಾದ ಉತ್ತರದಲ್ಲಿ ನ್ಯೂ ಗಿನೀ ಎಂಬ ಹೆಸರಿನ ವಿಸ್ತಾರ ವಾದ ನಡುಗಡ್ಡೆಯುಂಟು. ಅದರ ಪಶ್ಚಿಮದ ಕಡೆಯ ಕೆಲವು ಭಾಗವು ಡಚ್ಚರ ವಶದಲ್ಲಿರುತ್ತದೆ. ಪೂರ್ವ ಭಾಗದೊಳಗ ಡಚ್ಚರ ಮತ್ತು ಜರ್ಮನ್ನರ ಪ್ರಭುತ್ವವಿತ್ತು. ಆದರೆ ಮೊದಲನೆ (೧೯೧೪-೧೮) ಮಹಾಯುದ್ಧದ ನಂತರ ಜರ್ಮನ್ನರ ವಶದಲ್ಲಿದ್ದ ಭಾಗವನ್ನು ರಾಷ್ಟ್ರಸಂಘವು ಬ್ರಿಟಿಶರ ಕೈಯಲ್ಲಿ ಕೊಟ್ಟಿದ್ದರಿಂದ, ಪೂರ್ವದ ಕಡೆಯ ಭಾಗವೆಲ್ಲ ಈಗ ಬ್ರಿಟಿಶರ ವಶದಲ್ಲಿಯೇ ಇರುತ್ತದೆ. ಈ ಭಾಗಕ್ಕೆ ಪಾಪುಆ ಎಂಬ ಹೆಸರಿರುತ್ತದೆ. ಮತ್ತು ಅಲ್ಲಿಯ ರಾಜ್ಯಕಾರಭಾರವನ್ನು ಆಸ್ಟ್ರೇಲಿಯನ್ ಸರಕಾರವು ನೋಡುತ್ತದೆ.

ಈ ನಡುಗಡ್ಡೆಯೊಳಗೆ ಉನ್ನತವಾದ ಪರ್ವತಗಳೂ, ಉದ್ದವಾಗಿ ಹರಿ ಯುವ ಹೊಳೆಗಳೂ, ದಟ್ಟಾದ ಅರಣ್ಯಗಳೂ, ಎಷ್ಟೋ ಜಾತಿಯ ಹಿಂಸ್ರ ಪಶುಗಳೂ ಇರುತ್ತವೆ. ಹವೆಯು ಉಷ್ಣವಿದ್ದರೂ ಸಮವಾಗಿರುತ್ತದೆ. ಮತ್ತು ಮಳೆಯು ಸಾಕಷ್ಟು ಬೀಳುತ್ತದೆ. ಭೂಮಿಯು ಬಹಳ ಬೆಳೆಯುಳ್ಳದ್ದಿರು

ತ್ತದೆ. ಅಲ್ಲಲ್ಲಿ ಅಡವಿಯೊಳಗಿನ ಗಿಡಗಳನ್ನು ಕಡಿದು ಅಲ್ಲಿ ಹೊಲಗಳನ್ನೂ ತೋಟಗಳನ್ನೂ ಮಾಡಹತ್ತಿದ್ದಾರೆ. ಕಬ್ಬು, ಬಾರೆ, ಗೆಣಸು, ತಂಬಾಕ, ಹತ್ತಿ, ರಬ್ಬರು, ತೆಂಗು ಮುಂತಾದವುಗಳ ಬೆಳೆಗಳನ್ನು ಹೆಚ್ಚೆಚ್ಚು ಪ್ರಮಾಣ ದಲ್ಲಿ ತೆಗೆಯಹತ್ತಿದ್ದಾರೆ.

ಈ ದ್ವೀಪದ ಜನಸಂಖ್ಯೆಯು ಸುಮಾರು ೨॥ ಲಕ್ಷ ಇದ್ದು ಅದರಲ್ಲಿ ಕೇವಲ ಮೂರು ಸಾವಿರ ಬಿಳೀ ಜನರಿರುತ್ತಾರೆ. ಪಾಪುಅನ್ ಜನರಿಗೆ ಹೆಚ್ಚಾಗಿ ದುಡಿಯದೆ ಸಾಕಷ್ಟು ಅನ್ನಸಾಮುಗ್ರಿಯು ಹತ್ತರದಲ್ಲಿಯೇ ಸಿಗು ವದರಿಂದಲೂ, ಉಷ್ಣಹವೆಯಿರುವದರಿಂದ ವಸ್ತ್ರಪ್ರಾವರಣಗಳ ಅವಶ್ಯಕ ತೆಯು ಇಲ್ಲದ್ದರಿಂದಲೂ ಅವರು ಆಲಸ್ಯವುಳ್ಳವರಾಗಿರುತ್ತಾರೆ. ಆದರೆ ಅವರು ಮನೆಗಳನ್ನು ಕಟ್ಟುವ ರೀತಿ, ಕೌಟುಂಬಿಕ ಮತ್ತು ಸಾಮಾಜಿಕ ವ್ಯವಸ್ಥೆ, ಅವರ ನಡೆನುಡಿ ಮುಂತಾದವುಗಳನ್ನು ನೋಡಿದರೆ ಅವರು ಪೆಸಿ ಫಿಕ್ ಮಹಾಸಾಗರದೊಳಗಿನ ಬೇರೆ ದ್ವೀಪಗಳಲ್ಲಿ ವಾಸಿಸುವ ಮೂಲ ನಿವಾಸಿಗಳಿಗಿಂತಲೂ ಹೆಚ್ಚು ಜಾಣರೂ, ಕಲ್ಪಕರೂ ಆಗಿರುವಂತೆ ಕಾಣಿ ಸುತ್ತಾರೆ. ಅವರೊಳಗೆ ಇತ್ತಲಾಗಿ ಉದ್ಯೋಗ ವ್ಯವಸಾಯಗಳ ಪ್ರವೃತ್ತಿಯು ಹುಟ್ಟಲಾರಂಭಿಸಿದೆ.

ಬಂಗಾರ, ತಾಮ್ರ, ಕಲ್ಲಿದ್ದಲಿ ಮುಂತಾದ ಅನೇಕ ಖನಿಜ ಪದಾರ್ಥಗಳು ಇಲ್ಲಿ ಸಿಗುವದರಿಂದ, ಇತ್ತಿತ್ತಲಾಗಿ ಎಷ್ಟೋ ಜನರು ಖಣಿಗಳಲ್ಲಿ ದುಡಿ ಯಹತ್ತಿದ್ದಾರೆ. ಮೀನು ಹಿಡಿಯುವದು ಮತ್ತು ಮುತ್ತಿನ ಸಿಂಪುಗಳನ್ನು ತೆಗೆಯುವದು, ಇವು ಬೇರೆ ಮಹತ್ವವಾದ ಉದ್ಯೋಗಗಳಾಗಿರುತ್ತವೆ. ಹೊಲ ಗಳಲ್ಲಿಯೂ, ತೋಟಗಳಲ್ಲಿಯೂ ಗಂಡಸರಗಿಂತ ಹೆಂಗಸರೇ ಹೆಚ್ಚಾಗಿ ದುಡಿಯುತ್ತಾರೆ. **ಪೋರ್ಟ ಮೋರ್ಸ್ಬಿ** ಎಂಬದೊಂದೇ ಮಹತ್ವದ ಪಟ್ಟಣವೂ ಬಂದರವೂ ಆಗಿರುತ್ತದೆ.

೧೫ನೇ ಪ್ರಕರಣ

# ಆಸ್ಟ್ರೇಲಿಯಾ

ಆಸ್ಟ್ರೇಲಿಯಾ ಈ ಶಬ್ದದ ಅರ್ಥವು 'ದಕ್ಷಿಣ ಕಡೆಯ ಭೂಮಿ' ಎಂದಿರುತ್ತದೆ. ಈ ದ್ವೀಪವು ಸಂಪೂರ್ಣವಾಗಿ ದಕ್ಷಿಣ ಗೋಲಾರ್ಧದೊಳಗೆ ಇರುತ್ತದೆ. ಈ ದ್ವೀಪದ ಕ್ಷೇತ್ರಫಲವು ೩೦ ಲಕ್ಷ ಚೌ. ಮೈಲು ಇರುವದು. ಇಲ್ಲಿಯ ಜನಸಂಖ್ಯೆಯು ಮಾತ್ರ ಕೇವಲ ೮೦ ಲಕ್ಷ ಇರುತ್ತದೆ. ಈ ದ್ವೀಪವು ಶೋಧಿಸಲ್ಪಟ್ಟು ೩೦೦ ವರುಷಗಳಾದರೂ ಸಹ ಯೂರೋಪಿಯನ್ ಜನರು ಅಲ್ಲಿ ಹೋಗಿ ಮನೆ ಮಾಡಿಕೊಂಡು ನಿಲ್ಲಲಾರಂಭಿಸಿ, ಇನ್ನೂ ೧೮೦ ವರುಷಗಳು ಸಹ ಆಗಿಲ್ಲ. ಈ ದ್ವೀಪವು ಒಂದಾನೊಂದು ಕಾಲಕ್ಕೆ ಏಶಿಯಾಖಂಡಕ್ಕೆ ಹೊಂದಿಕೊಂಡಿತ್ತು. ಹಿಮಾಲಯ ಪರ್ವತವೂ, ಬ್ರಹ್ಮದೇಶ ಮತ್ತು ಮಲಾಯಾದೊಳಗಿನ ಪರ್ವತವೂ, ಸುಮಾತ್ರಾ ಮತ್ತು ಜಾವಾ ದ್ವೀಪಗಳ ಸಾಲುಗಳೂ ಒಂದು ಕಾಲ ಆಸ್ಟ್ರೇಲಿಯಾದೊಳಗಿನ ಪರ್ವತಾವಳಿಗೆ ಜೋಡಿಸಲ್ಪಟ್ಟಿದ್ದವು; ಆದರೆ ನಡುವಿನ ಭೂಪ್ರದೇಶವು ಸಮುದ್ರದ ಕೆಳಗೆ ಕುಸಿಬಿದ್ದು ಬೇರೆ ಬೇರೆ ದ್ವೀಪಗಳು ನಿರ್ಮಾಣವಾದವು. ಈ ರೀತಿಯಿಂದ ಈ ದ್ವೀಪವಾದರೂ ವಿಂಗಡಿಸಲ್ಪಟ್ಟು ಬೇರೆಯಾಯಿತು.

ಚೀನ ದೇಶಕ್ಕೂ ಬೇರೆ ಪೌರ್ವಾತ್ಯ ಜನರಿಗೂ ಈ ದ್ವೀಪವು ಗೊತ್ತಿತ್ತು. ೧೬ನೇ ಶತಮಾನದಲ್ಲಿ ಪೋರ್ತುಗೀಜರು ಮತ್ತು ಸ್ಪನಿಶ್ ಜನರು ಇದರ ದಂಡೆಯ ಮೇಲೆ ಹೋದರು. ೧೬೪೨ರಲ್ಲಿ ಟಾಸ್ಮನ್ ಎಂಬ ಡಚ್ ನಾವಿಕನು ಟಾಸ್ಮಾನಿಯಾ ಎಂಬ ನಡುಗಡ್ಡೆಗೆ ಹೋಗಿದ್ದನು; ಅಲ್ಲಿಂದ ಆತನು ನ್ಯೂಝೀಲಂಡಕ್ಕೆ ಹೋದನು. ಅವನ ತರುವಾಯ ಎಷ್ಟೋ ವರುಷಗಳ ನಂತರ ಕಪ್ಟನ್ ಕುಕ್ ಎಂಬಾತನು ನ್ಯೂಝೀಲಂಡ ದ್ವೀಪಕ್ಕೆ ಹೋದನು; ಆದರೆ ಅವನ ನಾವಿಕರು ಹಡಗಗಳಿನ್ನಿಳಿಯುತ್ತಿರುವಾಗ, ಅಲ್ಲಿಯ ಮೂಲನಿವಾಸಿಗಳಾದ ಮಾವರೀ ಎಂಬ ಜನರು ಅವರನ್ನು

ಹೊಡೆದೋಡಿಸಿದರು. ಆಗ ಕುಕ್ಕನು ಅಲ್ಲಿಂದ ಹೊರಟು ಆಸ್ಟ್ರೇಲಿಯಾದ ದಂಡೆಯು ಮೇಲೆ ಸಿಡ್ನೀ ಹತ್ತರ ಬಾಟನೀ ಬೇ ಎಂಬಲ್ಲಿ ಇಳಿದನು. ಈ ದಂಡೆಯು ವೇಲ್ಸದ ದಕ್ಷಿಣ ದಂಡೆಯಂತೆ ಕಂಡದ್ದರಿಂದ ಅವನು ಅದಕ್ಕೆ ನ್ಯೂ ಸಾವುಥ ವೇಲ್ಸ ಎಂಬ ಹೆಸರನ್ನಿಟ್ಟನು. ಅವನು ಎರಡನೇ ಸಾರೆ ಪೆಸಿಫಿಕ್ ಮಹಾಸಾಗರದೊಳಗೆ ಜಲಪರ್ಯಟಣದ ಸಲುವಾಗಿ ಹೋದಾಗ ಹವಾಈ ಎಂಬ ದ್ವೀಪದೊಳಗೆ ಕೊಲ್ಲಲ್ಪಟ್ಟನು.

ಇ. ಸ. ೧೭೮೭ರಲ್ಲಿ ಹದ್ದುಪಾರಿನ ಶಿಕ್ಷೆಯನ್ನು ವಿಧಿಸಿದ ೭೫೦ ಜನರನ್ನು ಸಿಡ್ನೀ ಎಂಬಲ್ಲಿ ಸರಕಾರದವರು ತಂದು ಬಿಟ್ಟರು. ಆ ಮೇಲೆ ೧೮೩೫ನೇ ಇಸವಿಯಿಂದ ಅಲ್ಲಿಯೇ ಮನೆ ಮಾಡಿಕೊಂಡು ನಿಂತು ಹೊಟ್ಟೀ ತುಂಬಿಕೊಳ್ಳುವದಕ್ಕೆ ಸ್ವತಂತ್ರ ಜನರಾದರೂ ಹೋಗಲಾರಂಭಿಸಿದರು. ಅವರು ಸಮುದ್ರದ ದಂಡೆಗುಂಟ ಮಾತ್ರ ನೆಲಿಸಿದರು. ಹತ್ತರದಲ್ಲಿಯೇ ಇರುವ ಡಿವ್ಹಾಯ್‌ಡಿಂಗ ರೇಂಜ ಎಂಬ ಪರ್ವತಾವಳಿಯನ್ನು ದಾಟಿ ಅವರು ಬಹಳ ವರುಷಗಳ ವರೆಗೆ ಅಂತರ್ಭಾಗದೊಳಗೆ ಹೋಗಲಿಲ್ಲ. ೧೮೨೮ನೇ ವರುಷ ಡಾರ್ಲಿಂಗ ಎಂಬ ಹೊಳೆಯು ಶೋಧವಾದ ಬಳಿಕ ಮುಂದಿನ ೨೫ ವರುಷಗಳಲ್ಲಿ ಈ ದ್ವೀಪದೊಳಗಿನ ಯಾವತ್ತೂ ಭಾಗಗಳ ನಿಜವಾದ ಸಂಗತಿಗಳು ನಮಗೆ ಗೊತ್ತಾದವು.

೧೮೫೦ ರಲ್ಲಿ ಆಸ್ಟ್ರೇಲಿಯಾದ ಜನಸಂಖ್ಯೆಯು ೨॥ ಲಕ್ಷ ಇತ್ತು. ಅಲ್ಲಿ ಬಂಗಾರವು ಸಿಗುತ್ತದೆಂಬ ಸಂಗತಿಯು ಅದೇ ಕಾಲಕ್ಕೆ ತಿಳಿದಕೂಡಲೆ ಹತ್ತೇ ವರುಷದೊಳಗೆ ಅಲ್ಲಿಯ ಜನಸಂಖ್ಯೆಯು ಮುಮ್ಮಡಿಯಾಯಿತು. ೧೯೦೧ರಲ್ಲಿ ೨೦ ಲಕ್ಷ ಇತ್ತು. ಅದೇ ಈಗ ೮೦ ಲಕ್ಷದ ವರೆಗೆ ಬೆಳೆದಿರುತ್ತದೆ. ಇವರಲ್ಲಿ ಮೂಲ ನಿವಾಸಿಗಳೂ ಕೂಲಿಯ ಸಲುವಾಗಿ ತಂದ ಏಶಿಯಾದೊಳಗಿನ ಜನರೂ ಕೂಡಿ ೧ ಲಕ್ಷ ಜನರಿರುತ್ತಾರೆ. ಈ ದ್ವೀಪದ ಸುಮಾರು ೩/೪ ದಷ್ಟು ಭಾಗವು ಮಳೆ ಇಲ್ಲದ್ದರಿಂದ ನಿರುಪಯೋಗವಾಗಿರುತ್ತದೆ; ಮತ್ತು ಉಳಿದ ಬಹು ಭಾಗದಲ್ಲಿ ಸಹ ಒಕ್ಕಲಿಗರು ಯಾವಾಗಲೂ ಮಳೆಯ ಚಿಂತೆಯಲ್ಲಿಯೇ ಇರುತ್ತಾರೆ. ಆದರೂ ಉಪಯೋಗವುಳ್ಳ ಭಾಗದಲ್ಲಿ ಜನರು ಎಷ್ಟೋ ಪ್ರಕಾರದ ಉದ್ಯೋಗಗಳನ್ನು ಮಾಡಿ ತಮ್ಮ ಉಪಜೀವಿಕೆಯನ್ನು ಮಾಡಿಕೊಳ್ಳುತ್ತಲಿದ್ದಾರೆ. ಸಾಗುಮಾಡಲಿಕ್ಕೆ ತಕ್ಕ

ಭೂಮಿಯೂ, ಹುಲ್ಲುಗಾವಲುಗಳೂ ಇನ್ನೂ ಉಳಿದಿರುತ್ತವೆ. ಅವುಗಳನ್ನು ಉಪಯೋಗ ಮಾಡಿಕೊಂಡು ಹುಟ್ಟುವಳಿಗಳನ್ನು ಹೆಚ್ಚಿಸಲು ಅನುಕೂಲ ವಿರುತ್ತದೆ. ಈಗ ರೇಲುಮಾರ್ಗಗಳೂ, ಕಾಲುವೆಗಳೂ ಹೆಚ್ಚಾಗಿರುತ್ತವೆ. ಮತ್ತು ಶಾಸ್ತ್ರೀಯ ಜ್ಞಾನದ ಸಹಾಯದಿಂದ ಹೆಚ್ಚೆಚ್ಚು ಬೆಳೆಗಳನ್ನು ತೆಗೆಯು ಲಿಕ್ಕೆ ಜನರು ಕಲಿತಿರುತ್ತಾರೆ. ಇದರಿಂದ ತೀವ್ರವೇ ಇಲ್ಲಿಯ ಜನ ಸಂಖ್ಯೆಯು ಬೆಳೆಯುವಂತೆ ಕಂಡುಬರುತ್ತದೆ.




ಆಸ್ಟ್ರೇಲಿಯಾ ಸಸ್ಯಾದಿಗಳು

ಈ ದೇಶದ ಆಕಾರಮಾನದಿಂದ ಹತ್ತುಸಾವಿರ ಮೈಲಿನ ಇದರ ಕರಾ ವಳಿಯು (ಸಮುದ್ರ ದಂಡೆಯು) ತೀರ ತುಸು ಆಗಿರುತ್ತದೆ. ಇದಲ್ಲದೆ ಅದ ರೊಳಗಿನ ಬಹುಭಾಗವು ಬಂದರಗಳನ್ನು ಕಟ್ಟುವ ಸಲುವಾಗಿ ನಿರುಪಯೋ

ಗಿಯಾಗಿರುತ್ತದೆ. ದಕ್ಷಿಣ ದಂಡೆಯ ಮೇಲೆ ಕಲ್ಲು ಬಂಡೆಯು ನೀಟಾದ ದಂಡೆಯು ದೃಷ್ಟಿಗೆ ಬೀಳುತ್ತದೆ. ಮತ್ತು ಈ ದಂಡೆಯ ಮೇಲೆ ಬಹು ಅಬ್ಬರದ ತೆರೆಗಳು ಬಂದು ಅಪ್ಪಳಿಸುತ್ತವೆ. ಪಶ್ಚಿಮದ ಕರಾವಳಿಯು ತಗ್ಗಾಗಿದ್ದು ಪರ್ಥದಿಂದ ಉತ್ತರದ ಕಡೆಗೆ ಅದು ಜವುಳುಗಳಿಂದ ತುಂಬಿ ಹೋಗಿರುತ್ತದೆ. ಈ ದಂಡೆಯ ಮೇಲೆ ಚಳಿಗಾಲದೊಳಗೆ ಬಿರುಗಾಳಿಗಳು ಸಹ ಒಮ್ಮೊಮ್ಮೆ ಬೀಸುತ್ತವೆ. ಪೂರ್ವ ದಂಡೆಯು ಮಾತ್ರ ಸುರಕ್ಷಿತವಾದದ್ದೂ, ಉಪಯೋಗವುಳ್ಳದ್ದೂ ಆಗಿರುತ್ತದೆ. ಇದರ ಉತ್ತರ ಭಾಗದ ಹೊರಭಾಗದಲ್ಲಿ ಸಮುದ್ರದೊಳಗೆ ಹವಳದ ಹುಳಗಳಿಂದ ತಯಾರಿಸಲ್ಪಟ್ಟ ೧೨೦೦ ಮೈಲು ಉದ್ದವಾದದ್ದೂ ೭೦ ಮೈಲು ಅಗಲವಾದದ್ದೂ ಒಂದು ಬಂಡೆಯು ಇರುತ್ತದೆ. ಇದರಿಂದ ಹೊರ ಸಮುದ್ರದೊಳಗೆ ದೊಡ್ಡ ದೊಡ್ಡ ಬಿರುಗಾಳಿಗಳಿದ್ದಾಗ ಕೂಡ ಈ ಬಂಡೆಯ ಒಳಬಾಜುವಿನ ದಂಡೆಗುಂಟ ಉಗಿಹಡಗಗಳು ಸುರಕ್ಷಿತವಾಗಿ ಹೋಗಿಬರುತ್ತಿರುತ್ತವೆ. ಮಹತ್ವವಾದ ಮತ್ತು ಉತ್ಕೃಷ್ಟವಾದ ಬಂದರಗಳು ಪೂರ್ವ ದಂಡೆಯ ಮೇಲೆ ಇರುತ್ತವೆ.

ಆಸ್ಟ್ರೇಲಿಯಾ ಖಂಡವು ವಿಸ್ತಾರವಾದ ತಪ್ಪಲು ಪ್ರದೇಶವಾಗಿದ್ದು, ಅದು ನಡುವೆ ತುಸು ತಗ್ಗಾಗಿರುತ್ತದೆ. ದಕ್ಷಿಣದ ಕರಾವಳಿಯನ್ನು ಬಿಟ್ಟು ಈ ತಪ್ಪಲಿನ ಪೂರ್ವ ಅಂಚಿನ ಮೇಲೆ ಉನ್ನತವಾದ ಪರ್ವತಾವಳಿಗಳುಂಟು. ಅವು ಪೂರ್ವದ ಕಡೆಗೆ ನೀಟಾಗಿದ್ದು ಮಧ್ಯ ಭಾಗದ ಕಡೆಗೆ ಇಳಿಜಾರಾಗುತ್ತ ಹೋಗಿರುತ್ತವೆ. ಈ ಪರ್ವತಾವಳಿಗಳು ಆಯಾ ಪ್ರದೇಶಗಳಲ್ಲಿ ಬೇರೆ ಬೇರೆ ಹೆಸರುಗಳಿಂದ ಕರೆಯಲ್ಪಡುತ್ತಿದ್ದರೂ ಅವುಗಳಿಗೆಲ್ಲ ಕೂಡಿ ಡಿವ್ಹಾಯ್‌ಡಿಂಗ ರೇಂಜ ಎಂಬ ಸರ್ವಸಾಧಾರಣವಾದ ಹೆಸರು ಇರುತ್ತದೆ.

ಪೂರ್ವ ದಂಡೆಯ ಮೇಲೆ ಆಗ್ನೇಯ ಕಡೆಯಿಂದ ಮಳೆಯು ಬರುವದರಿಂದ, ಅಲ್ಲಿಯ ಹೊಳೆಗಳಲ್ಲಿ ಸಾಕಷ್ಟು ನೀರು ಇರುತ್ತದೆ; ಆದರೆ ಅವು ಕಿರಿಯಾಳಾಗಿರುವದರಿಂದ ಓಡಾಡಲಿಕ್ಕೆ ಬರುವದಿಲ್ಲ. ಪಶ್ಚಿಮದ ಮತ್ತು ಉತ್ತರ ದಂಡೆಗಳ ಮೇಲಾದರೂ ಇದೇ ಪ್ರಕಾರದ ಉಪಯೋಗವಿಲ್ಲದ ಸಣ್ಣ ಪುಟ್ಟ ಹೊಳೆಗಳಿರುತ್ತವೆ. ಮರೇ-ಡಾರ್ಲಿಂಗ ಎಂಬ ಹೊಳೆಯು

ಎಲ್ಲಕ್ಕೂ ಮಹತ್ವವಾದದ್ದೂ ದೊಡ್ಡದೂ ಆಗಿರುತ್ತದೆ. ಇದರೊಳಗಿಂದ ಕೆಲವು ತಿಂಗಳುಗಳ ವರೆಗೆ ಓಡಾಡಲಿಕ್ಕೆ ಬರುತ್ತದೆ; ಆದರೆ ಬೇಸಿಗೆಯಲ್ಲಿ ಇದಕ್ಕೆ ಬಂದು ಕೂಡುವ ಹೊಳೆಗಳೆಲ್ಲ ಬತ್ತಿ ಹೋಗುತ್ತವೆ. ಮಳೆಗಾಲ ದಲ್ಲಿ ಅವುಗಳಿಗೆ ಒಮ್ಮೆಲೆ ಮಹಾ ಪೂರವು ಬರುತ್ತದೆ. ಆದರೆ ಈ ನೀರೆಲ್ಲ ತೀವ್ರವಾಗಿ ಹರಿದು ಹೋಗುತ್ತದೆ. ಈ ನೀರನ್ನು ಅಣೆಕಟ್ಟುಗಳಿಂದ ಕಟ್ಟಿ ಸುತ್ತು ಮುತ್ತಲಿನ ಭೂಮಿಗಳಿಗೆ ನೀರಿನ ಪೂರೈಕೆಯನ್ನು ಮಾಡಿಕೊಡುವ ಯೋಜನೆಗಳು ನಡೆದಿರುತ್ತವೆ.




ಆಸ್ಟ್ರೇಲಿಯಾ—ಹವೆಯು

ಆಸ್ಟ್ರೇಲಿಯಾದ ನಟ್ಟನಡುವೆ ಮಕರವೃತ್ತವು ಹೋಗಿರುತ್ತದೆ. ಇದ ರಿಂದ ಉತ್ತರದ ಕಡೆಗಿರುವ ಅರ್ಧ ಭಾಗವು ಹೆಚ್ಚು ಉಷ್ಣವಾದದ್ದೂ ದಕ್ಷಿ

ಣದ ಅರ್ಧ ಭಾಗವು ಕಡಿಮೆ ಉಷ್ಣವಾದದ್ದೂ ಇರುತ್ತದೆ. ಚಳಿಗಾಲ ದಲ್ಲಿ ಸಹ ಅತಿ ತಂಪು ಹವೆಯು ಎಲ್ಲಿಯೂ ಕಂಡುಬರುವದಿಲ್ಲ. ಇಡೀ ವರ್ಷದಲ್ಲಿ ಸಾಕಷ್ಟು ಸೂರ್ಯ ಪ್ರಕಾಶವು ಸಿಗುತ್ತದೆ. ಆದರೆ ನೋಡಿ ದತ್ತೆಲ್ಲ ನೀರಿನ ಅರಬು ಕಂಡುಬರುತ್ತದೆ. ಮಳೆಯ ಮುಖ್ಯ ಗಾಳಿಗಳು ಆಗ್ನೇಯ ದಿಕ್ಕಿನಿಂದ ಬೀಸುತ್ತಿರುವದರಿಂದ ಅವು ಪೂರ್ವ ದಂಡೆಯ ಪಟ್ಟಿಯ ದಕ್ಷಿಣ ಭಾಗದ ಮೇಲೆ ಸಾಕಷ್ಟು ಮಳೆಯನ್ನು ಕೊಡುವವು; ಆದರೆ ಉತ್ತರಕ್ಕೆ ಮಳೆಯ ಪ್ರಮಾಣವು ಕಡಿಮೆಯಾಗುತ್ತ ಹೋಗುತ್ತದೆ.

ಡಿವ್ಹಾಯ್‌ಡಿಂಗ ರೇಂಜ ಪರ್ವತವು ಬಹಳ ಉನ್ನತವಾಗಿರುವದಿಲ್ಲ. ಆದ್ದರಿಂದ ಆಗ್ನೇಯ ಕಡೆಯಿಂದ ಬರುವ ಗಾಳಿಗಳು ಅದರ ಮೇಲಿಂದ ಹಾಯ್ದು ಅಂತರ್ಭಾಗದ ಕಡೆಗೆ ಬೀಸುತ್ತವೆ; ಆದರೆ ಈ ಬದಿಗೆ ಕೇವಲ ೧೦-೨೦ ಇಂಚು ಮಾತ್ರ ಮಳೆಯಾಗುತ್ತದೆ. ಪಶ್ಚಿಮದ ಕಡೆಗೆ ಹೆಚ್ಚೆಚ್ಚು ಹೋದ ಹಾಗೆ ಉಷ್ಣತೆಯಿಂದ ಈ ಗಾಳಿಗಳು ತೀರ ಒಣದಾಗುತ್ತವೆ. ಮಕರವೃತ್ತದ ಮೇಲಿನ ಪ್ರದೇಶವು ನಿರ್ವಾತವಿರುವದರಿಂದ ಅಲ್ಲಿ ಮಳೆಯೇ ಆಗುವದಿಲ್ಲ. ಈ ಪ್ರದೇಶವು ಬಂಜೆಯಾದದ್ದೂ, ನಿರುಪಯೋಗವಾದದ್ದೂ, ಅತಿ ಒಣದಾದದ್ದೂ ಇರುತ್ತದೆ. ಪ್ರಾಚೀನ ಕಾಲದಲ್ಲಿ ಈ ಭಾಗವು ಸಮುದ್ರದಿಂದ ವ್ಯಾಪಿಸಿರಬೇಕೆಂದು ತೋರುತ್ತದೆ. ಸದ್ಯಕ್ಕೆ ಅಲ್ಲಿ ಕಂಡು ಬರುವ ಸರೋವರಗಳು ಅದರ ಅವಶೇಷಗಳಾಗಿರಬೇಕು. ಈ ದ್ವೀಪದ ಉತ್ತರದ ಕರಾವಳಿಯು ಸಂಪೂರ್ಣವಾಗಿ ಉಷ್ಣ ಕಟಿಬಂಧದೊಳಗಿರುವದ ರಿಂದ ಅಲ್ಲಿ ಬಲವಾದ ವಾಯುವ್ಯ ಮಾನ್ಸೂನಗಳಿಂದ ಮಳೆಯಾಗುತ್ತದೆ; ಆದರೆ ಸಮುದ್ರ ದಂಡೆಯಿಂದ ಒಳಗೆ ಹೋದ ಹಾಗೆ ಮಳೆಯ ಪ್ರಮಾಣವು ಕ್ರಮೇಣ ಕಡಿಮೆಯಾಗುತ್ತ ಹೋಗಿ, ಕಟ್ಟಕಡೆಗೆ ಮಳೆಯಿಲ್ಲದ ಪ್ರದೇಶವು ಕಾಣಹತ್ತುತ್ತದೆ.

ಒಟ್ಟಿನ ಮೇಲೆ ಈ ದ್ವೀಪದೊಳಗೆ ಉತ್ತರ ಮತ್ತು ಈಶಾನ್ಯ ಭಾಗ ಗಳಲ್ಲಿ ಬೇಸಿಗೆಯಲ್ಲಿ ಮಾನ್ಸೂನ ಗಾಳಿಗಳಿಂದ ಬಲವಾದ ಮಳೆಯು ಬರು ತ್ತದೆ. ಮತ್ತು ಚಳಿಗಾಲವು ಒಣದಾಗಿರುತ್ತದೆ. ಪೂರ್ವ ದಂಡೆಯ ಮೇಲೆ ಬೇಸಿಗೆಯಲ್ಲಿ ಹೆಚ್ಚು ಮಳೆಯಾಗುವದಲ್ಲದೆ ಚಳಿಗಾಲದಲ್ಲಿ ತುಸು ಮಟ್ಟಿಗೆ ಮಳೆಯಾಗುತ್ತದೆ. ಟಾಸ್ಮಾನಿಯಾ ಮತ್ತು ಆಸ್ಟ್ರೇಲಿಯಾದ

ನೈಋತ್ಯದ ಮೂಲೆಯಲ್ಲಿ ಮುಖ್ಯವಾಗಿ ಚಳಿಗಾಲದಲ್ಲಿ ಮಳೆಯಾಗುತ್ತದೆ. ಮಧ್ಯಭಾಗದಲ್ಲಿ ಮಳೆಯಾಗದ ವಿಸ್ತಾರವಾದ ಪ್ರದೇಶವಿರುತ್ತದೆ.

ಮಳೆಯ ಪ್ರಮಾಣವನ್ನನುಸರಿಸಿ ವನಸ್ಪತಿಗಳು ಬೆಳೆಯುತ್ತವೆ. ವಿಪುಲವಾಗಿ ಮಳೆಯಾಗುವ ಭಾಗಗಳಲ್ಲಿ ಹಳವುಗಳಾಗಿರುತ್ತವೆ. ಮಳೆಯ ಪ್ರಮಾಣವು ಕಡಿಮೆ ಇದ್ದ ಭಾಗಗಳಲ್ಲಿ ಮುಖ್ಯವಾಗಿ ಹುಲ್ಲು ಬೆಳೆಯುತ್ತದೆ. ಆದರ ಬಹು ದೊಡ್ಡ ಭಾಗದಲ್ಲಿ ಮಳೆಯಾಗುವದಿಲ್ಲವಾದ್ದರಿಂದಲೂ, ಉಷ್ಣ ವಾದ ಮತ್ತು ಒಣದಾದ ಹವೆಯು ಇರುವದರಿಂದಲೂ ವನಸ್ಪತಿಗಳು ಬೆಳೆ ಯುವದಿಲ್ಲ.

ಈ ದ್ವೀಪವು ಅತಿಪ್ರಾಚೀನಕಾಲದಲ್ಲಿ ಏಶಿಯಾ ಖಂಡದಿಂದ ಬೇರೆ ಯಾದದ್ದರಿಂದ, ಇದರೊಳಗೆ ಸಿಗುವ ವಿಶಿಷ್ಟವಾದ ಪ್ರಾಣಿಗಳು ಬೇರೆ ಯಾವ ಖಂಡಗಳಲ್ಲಿಯೂ ಸಿಗುವದಿಲ್ಲ. ಕಂಗರೂ ಎಂಬ ಹೆಸರಿನ ಪ್ರಾಣಿಯ ಹೊಟ್ಟೆಯ ಮೇಲೆ ಒಂದು ಚೀಲವಿದ್ದು ಅದರೊಳಗೆ ಅದು ತನ್ನ ಮರಿಗಳನ್ನಿಟ್ಟುಕೊಂಡು ಅನ್ನ-ನೀರನ್ನು ಹುಡುಕುತ್ತ ದೂರದವರೆಗೆ ಸಹಜ ವಾಗಿ ಹೋಗಬಲ್ಲದು. ಪ್ಲೆಟಿಪಸ್ ಎಂಬ ಜಾತಿಯ ಸಸ್ತನ ಪ್ರಾಣಿಯ ಕಾಲು ಗಳೂ ಚುಂಚೂ ನೀರಗೋಳಿಯಂತೆ ಇದ್ದು, ಅದು ತತ್ತಿಯನ್ನಿಡುತ್ತದೆ. ಒಕಿಡ್ನಾ ಎಂಬ ಹೆಸರಿನ ಪ್ರಾಣಿಯೂ ಡಿಂಗೋ ಎಂಬ ಹೆಸರಿನ ಕಾಡು ನಾಯಿಯೂ ಅಲ್ಲಿ ಬಹಳ ಸಿಗುತ್ತವೆ. ಅದರಂತೆ ಅನೇಕ ಜಾತಿಯ ಗಿಳಿಗಳು, ನಗುವ ಪಕ್ಷಿಗಳು, ಎಮೂ, ಪರಾಡಾಯಿಜ ಪಕ್ಷಿ ಮುಂತಾದ ಸೋಜಿಗ ವಾದ ಪಕ್ಷಿಗಳು ದೃಷ್ಟಿಗೆ ಬೀಳುತ್ತವೆ.

ತಮ್ಮ ದೇಶವನ್ನು ಬಿಟ್ಟು ಇಲ್ಲಿ ಬಂದು ವಾಸ ಮಾಡಿದ ಜನರು ಹಳೇ ರಾಜಕೀಯ ಸಂಸ್ಥೆಗಳನ್ನು ಸ್ವೀಕರಿಸದೆ ಫೆಡರಲ್ ಪದ್ಧತಿಯ ಪ್ರಜಾಸತ್ತಾ ತ್ಮಕ ರಾಜ್ಯಪದ್ಧತಿಯನ್ನೇ ಅನುಸರಿಸಿರುತ್ತಾರೆ. ಪಶ್ಚಿಮ ಆಸ್ಟ್ರೇಲಿಯಾ, ದಕ್ಷಿಣ ಆಸ್ಟ್ರೇಲಿಯಾ, ವ್ಹಿಕ್ಟೋರಿಯಾ, ನ್ಯೂ ಸಾವುಥ್‌ವೇಲ್ಸ, ಕ್ವೀನ್ಸ ಲಂಡ, ಮತ್ತು ಟಾಸ್ಮಾನಿಯಾ ಎಂಬ ಆರು ವಿಭಾಗಗಳಲ್ಲಿ ಅವರವರ ಸ್ವತಂತ್ರ ರಾಜ್ಯಕಾರಭಾರವಿದ್ದು ಸಂಯುಕ್ತ ರಾಜ್ಯಕಾರಭಾರದ ಸಲುವಾಗಿ ಕನ್‌ಬೆರಾ ಎಂಬಲ್ಲಿ ನಮ್ಮ ಹೊಸದಿಲ್ಲಿಯಂತೆ ಹೊಸ ರಾಜಧಾನಿಯನ್ನು

ಮಾಡಿಕೊಂಡಿರುತ್ತಾರೆ. ಅದರ ಸಲುವಾಗಿ ಹೊಸ ಬಂದರದ ವ್ಯವಸ್ಥೆಯನ್ನು ಸಹ ಮಾಡಿದ್ದಾರೆ.

ಆಸ್ಟ್ರೇಲಿಯಾದಲ್ಲಿ ವಸಾಹತು ಮಾಡಿಕೊಂಡಿರುವ ಜನರು ಈ ದೇಶಗಳಲ್ಲಿ ಬಿಳೇ ಜನರ ಹೊರ್ತು ಬೇರೆ ಯಾವ ಜನರಿಗೂ ಇಲ್ಲಿ ಮನೆಮಾಡಿಕೊಂಡಿರಲಿಕ್ಕೆ ಕೊಡಬಾರದೆಂದು ನಿಶ್ಚಯಿಸಿದ್ದಾರೆ. ಇಂದಿಗೆ ಅಲ್ಲಿರುವ ಜನರೊಳಗೆ ಬಹುತರವಾಗಿ ಇಂಗ್ಲಿಶ ಮತ್ತು ಸ್ಕಾಟಿಶ ಜನರೇ ಬಹಳವಾಗಿರುತ್ತಾರೆ. ೩ಿ ದಷ್ಟು ಐರಿಶ ಜನರಿರುತ್ತಾರೆ. ಇಟಾಲಿಯನ್ ಮತ್ತು ಜರ್ಮನ್ನರು ಅಲ್ಲಲ್ಲಿ ಕಂಡುಬರುತ್ತಾರೆ. ಮುತ್ತುಗಳನ್ನು ತೆಗೆಯುವದರ ಸಲುವಾಗಿ ಸುಮಾರು ೪ ಸಾವಿರ ಚೀನೀ ಮತ್ತು ಮಲಾಯಿ ಜನರಿರುತ್ತಾರೆ. ಉತ್ತರ ಆಸ್ಟ್ರೇಲಿಯಾದೊಳಗೆ ಒಂಟೆಗಳನ್ನು ಉಪಯೋಗಿಸುತ್ತಾರೆ. ಅವುಗಳನ್ನು ಜೋಕೆಮಾಡಲಿಕ್ಕೆಂದು ಹಲವು ಪಠಾಣರು ಸಹ ಅಲ್ಲಿ ವಾಸಮಾಡಿದ್ದಾರೆ. ಹಿಂದೀ ಜನರ ಸಂಖ್ಯೆಯು ಕೇವಲ ೨೪೦೦ ಇರುತ್ತದೆ.

**ಮೂಲ ನಿವಾಸಿಗಳು:—** ಇವರು ಈಗ ಎಲ್ಲ ಭಾಗಗಳಲ್ಲಿ ಕಡಿಮೆ ಪ್ರಮಾಣದಲ್ಲಿ ಇರುತ್ತಾರೆ. ಇವರು ಸುಧಾರಣೆಯಲ್ಲಿ ತೀರ ಹಿಂದುಳಿದವರಾಗಿದ್ದರೂ, ಶರೀರದಿಂದ ಬಹು ಗಟ್ಟಿಗರೂ ಸಾಮರ್ಥ್ಯವುಳ್ಳವರೂ ಆಗಿರುತ್ತಾರೆ. ಉತ್ತರದ ಕಡೆಯ ಜನರು ಎತ್ತರವಾಗಿರುತ್ತಾರೆ. ಅವರ ದೃಷ್ಟಿಯು ತೀಕ್ಷ್ಣವಾಗಿದ್ದು ಅವರ ನಿರೀಕ್ಷಣೆಯು ಬಹು ಚೆನ್ನಾಗಿರುತ್ತದೆ. ಗುರಿ ಹಿಡಿಯುವದರಲ್ಲಿ ಅವರ ಕೈಯನ್ನು ಹಿಡಿಯುವವರು ತೀರ ಅಪರೂಪ. ಬೂಮರಾಂಗ ಎಂಬ ಅವರ ಆಯುಧದ ಗುರಿಯು ಬಹು ನಿಶ್ಚಿತವಾದದ್ದಿರುತ್ತದೆ. ಈ ಜನರು ಗುಂಪುಕಟ್ಟಿಕೊಂಡು ವಾಸಿಸುತ್ತಾರೆ; ಆದರೆ ಒತ್ತಟ್ಟಿಗೆ ನಿಂತು ಒಕ್ಕಲತನವನ್ನು ಮಾಡುವದು ಅವರಿಗೆ ಸೇರುವದಿಲ್ಲ. ಇತ್ತಲಾಗಿ ಅವರು ದನಗಳನ್ನು ಸಾಕಹತ್ತಿದ್ದಾರೆ. ಅವರು ಮಾಂಸ, ಮೀನು, ಹಣ್ಣು, ಗಡ್ಡೆ-ಗೆಣಸುಗಳನ್ನು ತಿಂದು ಜೀವಿಸುತ್ತಾರೆ. ಅವರು ಬುಟ್ಟಿ, ಜಾಳಿಗೆ ಮುಂತಾದ ಹೆಣಿಕೆಯ ಕೆಲಸಗಳನ್ನು ಚೆನ್ನಾಗಿ ಮಾಡುತ್ತಾರೆ. ನಾವೆಗಳನ್ನು ನಡಿಸುವ ಕೌಶಲ್ಯವು ಅವರಲ್ಲಿ ಚೆನ್ನಾಗಿರುವದಲ್ಲದೆ ಅವರು ಮೀನು ಹಿಡಿಯುವದರಲ್ಲಿ ಬಹು ಚತುರರಾಗಿರುತ್ತಾರೆ.

ಆಸ್ಟ್ರೇಲಿಯಾದೊಳಗಿನ ಜನರ ಮುಖ್ಯ ಉದ್ಯೋಗಗಳನ್ನು ಕೆಳಗೆ ಕಾಣಿಸಿರುತ್ತದೆ:—

**ಕುರಿಗಳನ್ನು ಸಾಕುವದು:**— ಆಸ್ಟ್ರೇಲಿಯಾದೊಳಗೆ ಉಣ್ಣೆಯ ಹುಟ್ಟುವಳಿಯು ಎಲ್ಲಕ್ಕೂ ಹೆಚ್ಚಾಗಿರುತ್ತದೆ. ಒಣದಾದ ಹುಲ್ಲುಗಾವಲುಗಳ




ಆಸ್ಟ್ರೇಲಿಯಾದ ರಾಜಕೀಯ ವಿಭಾಗಗಳೂ, ಬಂದರಗಳೂ, ಬೆಳೆಗಳೂ

ಮೇಲೆ ಕುರಿಗಳು ಚೆನ್ನಾಗಿ ಪೋಷಿಸಲ್ಪಡುತ್ತವೆ. ವಸಾಹತುಗಾರರು ತಮ್ಮ ಸಂಗಡ ಮೆರಿನೋ ಮತ್ತು ಬೇರೆ ಜಾತಿಯ ಕುರಿಗಳನ್ನು ಒಯ್ದರು. ಅವು ಬೆಳೆಯುತ್ತ ಹೋಗಿ ಇಂದಿಗೆ ಅಲ್ಲಿ ಸುಮಾರು ೧೦ ಕೋಟಿ ಕುರಿಗಳಾಗಿರುತ್ತವೆ. ಬೇರೆ ಭಾಗಗಳಲ್ಲಿ ಸಹ ಹೆಚ್ಚು ಕಡಿಮೆ ಪ್ರಮಾಣದಲ್ಲಿ ಈ ಕುರಿಗಳು

ಇದ್ದೇ ಇರುತ್ತವೆ. ಆದರೆ ಮರೇ-ಡಾರ್ಲಿಂಗದ ಕೊಳ್ಳದೊಳಗೆ ಅವು ಹೆಚ್ಚು ಚೆನ್ನಾಗಿ ಪೋಷಿಸಲ್ಪಡುತ್ತವೆ. ಕೆಲವು ಕುರಿಗಳನ್ನು ಉಣ್ಣೆಯ ಸಲುವಾಗಿಯೂ ಬೇರೆ ಕೆಲವು ಕುರಿಗಳನ್ನು ಮಾಂಸದ ಸಲುವಾಗಿಯೂ ಸಾಕುತ್ತಾರೆ. ಜುಲೈ ತಿಂಗಳಿನಿಂದ ಸಪ್ಟೆಂಬರದ ತಿಂಗಳಿನ ವರೆಗೆ ಉಣ್ಣೆಯನ್ನು ಕತ್ತರಿಸುವ ಕಾಲವಿರುತ್ತದೆ. ಅದನ್ನು ಯಂತ್ರಗಳಿಂದ ಕತ್ತರಿಸುತ್ತಾರೆ. ಮತ್ತು ಅದರ ವರ್ಗೀಕರಣವನ್ನು ಮಾಡಿ ದೊಡ್ಡ ದೊಡ್ಡ ಗಂಟುಗಳನ್ನು ಕಟ್ಟಿ, ಅವುಗಳನ್ನು ಬಂದರಗಳಿಗೆ ಕಳಿಸುತ್ತಾರೆ. ಕುರಿಮಾಂಸವನ್ನು ಹೆರಿಸಿ, ಗಟ್ಟಿಮಾಡಿ ಅದನ್ನು ಚೀಲಗಳಲ್ಲಿ ತುಂಬಿ ಹಡಗಗಳಿಂದ ಪರದೇಶಗಳಿಗೆ ಕಳಿಸುವ ಉದ್ಯೋಗವು ಬಹು ದೊಡ್ಡ ಪ್ರಮಾಣದಲ್ಲಿ ಸಾಗುತ್ತದೆ.

ಕುರಿಗಳನ್ನು ಸಾಕುವ ಉದ್ಯೋಗಕ್ಕೆ ಅವರ್ಷಣದ ಅಂಜಿಕೆಯು ಬಹಳವಾಗಿರುತ್ತದೆ. ಅದನ್ನು ದೂರ ಮಾಡುವದಕ್ಕೋಸ್ಕರ ಇತ್ತಲಾಗಿ ಹೊಳೆಗಳಿಗೆ ಅಣೆಕಟ್ಟುಗಳನ್ನು ಕಟ್ಟಿ, ಇಲ್ಲವೆ ಆರ್ಟೇಸಿಯನ್ ಬಾವಿಗಳನ್ನು ಅಗಿದು ನೀರಿನ ವ್ಯವಸ್ಥೆಯನ್ನು ಮಾಡಿದ್ದಾರೆ. ವಸಾಹತು ಮಾಡಲಿಕ್ಕೆ ಹೋದ ಜನರು ತಮ್ಮ ಸಂಗಡ ಒಯ್ದ ಮೊಲಗಳ ಬೆಳವಣಿಗೆಯು ಪ್ರಚಂಡವಾದ ಪ್ರಮಾಣದಲ್ಲಿ ಆಗ ಹತ್ತಿತು. ಮತ್ತು ಅವು ಇದ್ದ ಹುಲ್ಲನ್ನೆಲ್ಲ ತಿಂದು ತೀರಿಸಹತ್ತಿದವು. ಇದರಿಂದ ಹುಲ್ಲುಗಾವಲುಗಳ ಸುತ್ತಲೂ ತಂತಿಗಳ ಬೇಲಿಯನ್ನು ಹಚ್ಚಬೇಕಾಯಿತು. ಅದರಂತೆ ಎಷ್ಟೋ ಸಾವಿರ ಮೊಲಗಳನ್ನು ಸಂಹಾರ ಮಾಡಬೇಕಾಯಿತು. ಮಹಾಯುದ್ಧದ ಕಾಲಕ್ಕೆ ಅವುಗಳ ಮಾಂಸವು ಬಹಳವಾಗಿ ಉಪಯೋಗಿಸಲ್ಪಟ್ಟಿತು; ಇತ್ತಲಾಗಿ ಅವುಗಳ ಮೈದೊಗಲುಗಳನ್ನು ಪರದೇಶಗಳಿಗೆ ಕಳಿಸಹತ್ತಿದ್ದಾರೆ. ಕಂಗರೂ ಪ್ರಾಣಿಗಳಾದರೂ ಇದೇ ರೀತಿಯಿಂದ ಉಪದ್ರವವನ್ನು ಕೊಡುತ್ತಿದ್ದವು. ಅವುಗಳ ಸಂಖ್ಯೆಯನ್ನಾದರೂ ಇದೇ ರೀತಿಯಿಂದ ಕಡಿಮೆ ಮಾಡಿದರು. ಡಿಂಗೋ ಎಂಬ ಹಿಂಸ್ರ ಪಶುಗಳು ಕುರಿಗಳನ್ನು ಮುರಿಯುತ್ತವೆ. ಅವುಗಳಿಂದಲೂ ಸಹ ಕುರಿಗಳನ್ನು ಸಂರಕ್ಷಿಸಬೇಕಾಗುತ್ತದೆ.

**ದನಗಳನ್ನು ಸಾಕುವದು** :—ಹಾಲು-ಮೊಸರಿನ ಸಲುವಾಗಿಯೂ, ಮಾಂಸದ ಸಲುವಾಗಿಯೂ ದನಗಳನ್ನು ಸಾಕುತ್ತಾರೆ. ಹೈನಿನ ದನಗಳಿಗೆ ಹಸಿ ಹುಲ್ಲು ಬೇಕಾಗುತ್ತದೆ. ಆದ್ದರಿಂದ ಹೆಚ್ಚಾಗಿ ಮಳೆಯಾಗುವ ವ್ಹಿಕ್ಟೋರಿಯಾದ ಪೂರ್ವ ಭಾಗದಲ್ಲಿ ಮತ್ತು ಟಾಸ್ಮಾನಿಯಾ ದ್ವೀಪದಲ್ಲಿ

ಅವು ಚೆನ್ನಾಗಿ ಪೋಷಿಸಲ್ಪಡುತ್ತವೆ. ಇಲ್ಲಿಂದ ಬರುವ ಹಾಲು ಮತ್ತು ಬೆಣ್ಣೆಗಳನ್ನು ಪಟ್ಟಣಗಳೊಳಗಿನ ಜನರ ಸಲುವಾಗಿ ಪೂರೈಸುತ್ತಾರೆ. ಬೆಣ್ಣೆಯು ಪರದೇಶಗಳಿಗೆ ಸಹ ಹೋಗುತ್ತದೆ. ಮಾಂಸದ ಸಲುವಾಗಿ ಸಾಕಿದ ದನಗಳು ಸಾಧಾರಣ ಹುಲ್ಲಿನ ಮೇಲೆ ಸಹ ಜೀವಿಸುತ್ತವೆ. ಮತ್ತು ಅವುಗಳ ಆರೈಕೆಯನ್ನು ಅಷ್ಟು ಮಾಡಬೇಕಾಗುವದಿಲ್ಲ. ಅವುಗಳಿಗೆ ಹವೆಯು ಉಷ್ಣವಿದ್ದರೂ ಸಾಗುತ್ತದೆ. ಕ್ವೀನ್ಸಲೆಂಡದೊಳಗೆ ಈ ಉದ್ಯೋಗವು ಹೆಚ್ಚಾಗಿ ಸಾಗುತ್ತದೆ. ಆದ್ದರಿಂದ ಇಲ್ಲಿಂದ ಮುಖ್ಯವಾಗಿ ರಫ್ತಾಗುವ ಸರಕು ಅಂದರೆ ಮಾಂಸವು ಹುಟ್ಟುವಳಿಯ ದೃಷ್ಟಿಯಿಂದ ನೋಡಿದರೆ ಈ ದನಗಳಿಗಿಂತಲೂ ಹೈನಿನ ದನಗಳಿಂದಲೇ ಹೆಚ್ಚು ಲಾಭವಾಗುತ್ತದೆ.

**ಗೋದಿ :**—ಗೋದಿಯು ಆಸ್ಟ್ರೇಲಿಯಾದೊಳಗಿನ ಮುಖ್ಯವಾದ ಬೆಳೆಯಾಗಿರುತ್ತದೆ. ಅದಕ್ಕೆ ತಕ್ಕಮಟ್ಟಿಗೆ ಮಳೆಯೂ ಸಾಕಷ್ಟು ಸೂರ್ಯನ ಪ್ರಕಾಶವೂ ಬೇಕಾಗುತ್ತದೆ. ನ್ಯೂ ಸಾವುಥ ವೇಲ್ಸ, ವ್ಹಿಕ್ಟೋರಿಯಾ, ಮರೇ—ಡಾರ್ಲಿಂಗದ ಕೊಳ್ಳ, ಅಡಿಲೇಡದ ಸುತ್ತಮುತ್ತಲಿನ ಪ್ರದೇಶ ಮತ್ತು ಪಶ್ಚಿಮ ಆಸ್ಟ್ರೇಲಿಯಾದೊಳಗಿನ ಪರ್ಥದಿಂದ ಆಲ್ಬನೀ ವರೆಗಿರುವ ಪ್ರದೇಶಗಳಲ್ಲಿ ಗೋದಿಯು ಬೆಳೆಯುತ್ತದೆ. ಹೊಲಗಳು ಬಹು ವಿಸ್ತಾರವಾಗಿರುವದರಿಂದ ಒಕ್ಕಲತನವನ್ನು ಯಂತ್ರಗಳ ಸಹಾಯದಿಂದ ಮಾಡುತ್ತಾರೆ. ಎಪ್ರೀಲ್-ಮೇ ತಿಂಗಳುಗಳ ಹೊತ್ತಿಗೆ ಬಿತ್ತುತ್ತಾರೆ. ಮತ್ತು ನವ್ಹೆಂಬರ ಡಿಸೆಂಬರ ತಿಂಗಳುಗಳಲ್ಲಿ ಬೆಳೆಗಳು ಬರುತ್ತವೆ. ಆರ್ಟೀಸಿಯನ್ ಬಾವಿಗಳಿಂದಲೂ, ಕಾಲುವೆಗಳಿಂದಲೂ ಹೆಚ್ಚೆಚ್ಚು ಭೂಮಿಯು ಈ ಬೆಳೆಯ ಕೆಳಗೆ ಬರಹತ್ತಿರುತ್ತದೆ. ಪ್ರತಿಯೊಬ್ಬ ಒಕ್ಕಲಿಗನು ಹಂದಿ, ಕೋಳಿ, ಕುದುರೆ ಮತ್ತು ಹೈನಿನ ದನಗಳನ್ನು ಅವಶ್ಯವಿದ್ದಂತೆ ಸಾಕುತ್ತಾನೆ.

**ಹಣ್ಣು ದೋಟಗಳು :**—ಹಣ್ಣುಗಳು ಚೆನ್ನಾಗಿ ಬೆಳೆಯಬೇಕಾದರೆ ಭೂಮಧ್ಯ ಸಾಮುದ್ರಿಕ ಹವೆಯು ಬೇಕಾಗುತ್ತದೆ; ಅಂದರೆ ಚಳಿಗಾಲದಲ್ಲಿ ಬೆಚ್ಚನ್ನ ಹವೆಯೂ ಮಳೆಯೂ ಇರಬೇಕು. ಮತ್ತು ಬೇಸಿಗೆಯಲ್ಲಿ ಒಣದಾದ ಹವೆಯೂ ಬಿಸಿಲೂ ಇರಬೇಕು. ಇದರಿಂದ ಆಸ್ಟ್ರೇಲಿಯಾದ ದಕ್ಷಿಣ ದಂಡೆಯ ಮೇಲೆ, ನ್ಯೂ ಸಾವುಥ ವೇಲ್ಸದೊಳಗೆ ಮತ್ತು ಟಾಸ್ಮಾನಿಯಾದೊಳಗೆ ಉತ್ಕೃಷ್ಟವಾದ ಹಣ್ಣುಗಳಾಗುತ್ತವೆ. ದ್ರಾಕ್ಷೆ, ಸಫರಚಂದ,

ಪಿಅರ್ ಮುಂತಾದ ಅನೇಕ ಜಾತಿಯ ಹಣ್ಣುಗಳು ಬೆಳೆಯುತ್ತವೆ. ದ್ರಾಕ್ಷೆ ಗಳನ್ನು ಒಣಗಿಸುತ್ತಾರೆ; ಇಲ್ಲವೆ ಅವುಗಳಿಂದ ಮದ್ಯವನ್ನು ತಯಾರಿಸು ತ್ತಾರೆ. ಕೆಲವು ದಿವಸಗಳ ವರೆಗೆ ತಡೆಯುವಂತೆ ಹಣ್ಣುಗಳನ್ನು ಹಡಗ ಗಳಲ್ಲಿರುವ ತಂಪಾದ ಹವೆಯ ಕೋಣೆಗಳಲ್ಲಿಟ್ಟು ಪರದೇಶಗಳಿಗೆ ಕಳಿಸು ತ್ತಾರೆ. ಮತ್ತು ಬೇರೆ ಹಣ್ಣುಗಳಿಂದ ಮೂರಬ್ಬೆಯನ್ನು ಮಾಡಿ ಅವು ಗಳನ್ನು ಡಬ್ಬಿಗಳಲ್ಲಿ ತುಂಬಿ ಪರದೇಶಗಳಿಗೆ ಕಳಿಸುತ್ತಾರೆ. ಭಾರತಕ್ಕೆ ಆಸ್ಟ್ರೇಲಿಯಾದೊಳಗಿಂದ ಸೇಬೂಹಣ್ಣು ಬಹಳ ಬರುತ್ತದೆ. ಟಾಸ್ಮಾ ನಿಯಾದೊಳಗಿನ ಮೂರಬ್ಬೆಯು ( ಸಕ್ಕರೆಯಲ್ಲಿ ಹೂಳಿಟ್ಟ ಹಣ್ಣುಗಳು ) ಬಹು ಪ್ರಸಿದ್ಧವಾಗಿರುತ್ತವೆ. ನೀರಿನ ಸೌಕರ್ಯವಾಗಿರುವದರಿಂದ ಮರೇ-ಡಾರ್ಲಿಂಗದ ಕೊಳ್ಳದೊಳಗೆ ಸಹ ಹಣ್ಣುದೋಟಗಳು ಆಗುತ್ತವೆ.

ನ್ಯೂ ಸಾವುಥವೇಲ್ಸದ ಉತ್ತರ ಭಾಗದಲ್ಲಿ ಮತ್ತು ಕ್ವೀನ್ಸಲೆಂಡದ ಕರಾವಳಿಯ ಮೇಲೆ ಪಪಯಿ, ಕಿತ್ತಳೆ, ನಿಂಬೆ, ಅನನಸ, ಮಾವು, ಬಾಳೆ ಮುಂತಾದ ಉಷ್ಣಕಟಿಬಂಧದೊಳಗಿನ ಹಣ್ಣುಗಳು ಚೆನ್ನಾಗಿ ಆಗುತ್ತವೆ. ಈ ಭಾಗದೊಳಗೆ ಕಬ್ಬು, ಹತ್ತಿ, ಅಕ್ಕಿ, ಗೋವಿನಜೋಳಗಳನ್ನೂ ತೆಂಗಿನ ತೋಟಗಳನ್ನೂ ಕಾಫಿಯ ತೋಟಗಳನ್ನೂ ಸಹ ಬಹು ದೊಡ್ಡ ಪ್ರಮಾಣ ದಲ್ಲಿ ಬೆಳಿಸಹತ್ತಿದ್ದಾರೆ. ಇತ್ತಲಾಗಿ ನೆಲಗಡಲೆ ಮತ್ತು ಔಡಲಗಳನ್ನು ಅವುಗಳ ಎಣ್ಣೆಯ ಸಲುವಾಗಿ ಬೆಳೆಯಹತ್ತಿದ್ದಾರೆ. ಇಲ್ಲಿಯ ಒಕ್ಕಲತನ ವನ್ನೂ ತೋಟಪಟ್ಟಿಗಳನ್ನೂ ಬಿಳೇ ಜನರೇ ಮಾಡುತ್ತಾರೆ.

**ಖಣಿಗಳಲ್ಲಿಯ ಕೆಲಸವು:—**ಅತಿ ಪ್ರಾಚೀನ ಕಾಲದಲ್ಲಿ ನಿರ್ಮಾಣ ವಾದ ಬಂಡೆಗಲ್ಲುಗಳಲ್ಲಿ ವಜ್ರಗಳೂ ಬಂಗಾರವೂ ಸಿಗುತ್ತದೆ. ಉದಾಹರ ಣಾರ್ಥವಾಗಿ ೧೮೫೧ರಲ್ಲಿ ವ್ಹಿಕ್ಟೋರಿಯಾ ಪ್ರಾಂತದೊಳಗೆ ಬಲಾರಟ ಮತ್ತು ಬೆಂಡಿಗೋ ಎಂಬ ಪಟ್ಟಣಗಳಲ್ಲಿ ಬಂಗಾರವು ಸಿಗಲಾರಂಭಿಸಿತು. ಇದರಿಂದ ಯುರೋಪದೊಳಗಿನ ಜನರು ಭರದಿಂದ ಅತ್ತ ಕಡೆ ಹೋಗಲಾ ರಂಭಿಸಿದರು. ಆದರೆ ಈಗ ಈ ಖಣಿಗಳಲ್ಲಿ ಮೊದಲಿನಂತೆ ಬಂಗಾರವು ಸಿಗುವದಿಲ್ಲ. ಆದರೆ ಇಲ್ಲಿ ಬಂದ ಜನರು ಕುರಿಗಳನ್ನೂ ದನಗಳನ್ನೂ ಸಾಕುವ ಉದ್ಯೋಗವನ್ನು ಕೈಕೊಂಡರು. ಬಂಗಾರಕ್ಕಿಂತ ಈ ಉದ್ಯೋ ಗವೇ ಅವರಿಗೆ ಹೆಚ್ಚು ಲಾಭದಾಯಕವಾಯಿತು. ಇದರಿಂದ ಅಂತರ್ಭಾಗ ದೊಳಗಿನ ಒಣದಾದ ಪ್ರದೇಶದಲ್ಲಿ ಸಹ ಜನವಸತಿಯಾಯಿತು.

ಪಶ್ಚಿಮ ಆಸ್ಟ್ರೇಲಿಯಾದೊಳಗೆ **ಕುಲಗಾರ್ಡಿ** ಮತ್ತು **ಕಾಲಗುರ್ಲೀ** ಎಂಬಲ್ಲಿ ೧೮೯೧ ರ ಸುಮಾರಕ್ಕೆ ಬಂಗಾರದ ಖಣಿಗಳು ಸಿಕ್ಕವು. ಅವುಗಳೊಳಗಿನ ಕುಲಗಾರ್ಡಿಯ ಖಣಿಗಳಲ್ಲಿಯ ಬಂಗಾರವು ತೀರುತ್ತ ಬಂದಿರುತ್ತದೆ. ಆದರೆ ಕಾಲಗುರ್ಲೀಯ ಖಣಿಗಳಿಂದ ಇನ್ನೂ ಬಂಗಾರವು ಹೆಚ್ಚಾಗಿ ಹೊರಡುತ್ತದೆ; ಇವಲ್ಲದೆ ಕಿಂಬರ್ಲಿ ಮತ್ತು ಮರ್ಕಿಸನ್ ಎಂಬಲ್ಲಿ ಹೊಸ ಖಣಿಗಳು ಆರಂಭಿಸಲ್ಪಟ್ಟಿವೆ. ಕ್ವೀನ್ಸಲಂಡದೊಳಗೆ ಚಾರ್ಟರ್ಸ ಟಾವರ ಎಂಬಲ್ಲಿ ಬಂಗಾರವು ಮೌಂಟ್ ಮಾರ್ಗನ್ ಎಂಬಲ್ಲಿ ಬಂಗಾರ ಮತ್ತು ತಾಮ್ರವೂ ಸಿಗುತ್ತದೆ.



E. N. A.

ಕಾಲಗುರ್ಲೀ—ಬಂಗಾರದ ಖಣಿಯು

ನ್ಯೂ ಸಾವುಥ ವೇಲ್ಸದೊಳಗಿನ **ಬ್ರೋಕನ್ ಹಿಲ್** ಎಂಬಲ್ಲಿ ಬೆಳ್ಳಿ ಮತ್ತು ಸೀಸ ವಿಪುಲವಾಗಿ ಸಿಗುತ್ತವೆ. ನ್ಯೂ ಕಸಲ್ ಎಂಬಲ್ಲಿ ಕಲ್ಲಿದ್ದಲಿಯೂ, ಅಡಿಲೇಡದ ಹತ್ತರ ಕಬ್ಬಿಣವೂ ಹೇರಳವಾಗಿ ಸಿಗುತ್ತದೆ. ಆಸ್ಟ್ರೇಲಿಯಾದೊಳಗೆ ಬೇಕಾಗುವ ಯಂತ್ರಸಾಮುಗ್ರಿಯು ಈಗ ಅದೇ ದೇಶದಲ್ಲಿಯೇ ಬಹುಮಟ್ಟಿಗೆ ತಯಾರಾಗುತ್ತದೆ. ಇದರಿಂದ ಬೇರೆ ಉದ್ಯೋಗಗಳಿಗಿಂತ

ಕಾರಖಾನೆಗಳಲ್ಲಿ ಹೆಚ್ಚು ಜನರು ದುಡಿದು ಹೊಟ್ಟೆ ತುಂಬಿಕೊಳ್ಳುತ್ತಾರೆ. ಕಚ್ಚಾಮಾಲನ್ನು ಮತ್ತು ಖಾದ್ಯ ಪದಾರ್ಥಗಳನ್ನು ಪರದೇಶಗಳಿಗೆ ಕಳಿಸಿ ಅವುಗಳ ಬದಲು ಪಕ್ಕಾಮಾಲನ್ನು ಹೊರಗಿನಿಂದ ತರುವದು ದೇಶಕ್ಕೆ ಯಾವಾಗಲೂ ಹಾನಿಕಾರಕವಾಗಿರುತ್ತದೆಂಬುದನ್ನು ಕಂಡುಕೊಂಡು, ಆ ಜನರು ತಮ್ಮ ದೇಶದೊಳಗೆ ಕಾರಖಾನೆಗಳನ್ನೂ ಉದ್ಯೋಗ-ವ್ಯವಸಾಯ ಗಳನ್ನೂ ಭರದಿಂದ ಆರಂಭಮಾಡಿದರು. ಮೊದಲನೆ (೧೯೧೪-೧೮) ಮಹಾ ಯುದ್ಧದ ಕಾಲದಲ್ಲಿ ಪರದೇಶಗಳಿಂದ ಸರಕುಗಳು ಬರಲಿಕ್ಕೆ ಎಡರುಗಳು ಬರಹತ್ತಿದ್ದರಿಂದ ಅವರ ಲಕ್ಷವು ಇದರ ಕಡೆಗೆ ಎಳೆಯಲ್ಪ ಟ್ಟಿತು. ಈಗ ಅಲ್ಲಿ ಅರಿವೆ, ಯಂತ್ರ, ಧಾತುಗಳ ಕೆಲಸ, ಚರ್ಮದ ಕೆಲಸ, ಸಕ್ಕರೆ, ಬಿಸ್ಕೀಟು, ಸಬಕಾರ, ಚೀಜ, ಎಣ್ಣೆ, ಮೂರಬ್ಬೆ ಮುಂತಾದ ಪದಾರ್ಥಗಳನ್ನು ತಯಾರಿಸುವ ಕಾರಖಾನೆಗಳೂ, ಗಿರಣಿಗಳೂ ಅವರಿಂದ ಆರಂಭಿಸಲ್ಪಟ್ಟಿರುತ್ತವೆ.

**ಕಟ್ಟಿಗೆ ಕಡಿಯುವದು :**—ಆಸ್ಟ್ರೇಲಿಯಾದ ಬಹುಭಾಗವು ಒಣ ದಾಗಿರುವದರಿಂದ ಗಿಡಗಳನ್ನು ಬೆಳೆಯಿಸಲಿಕ್ಕೆ ಅದು ಅನುಕೂಲವಾಗಿರುವ ದಿಲ್ಲ. ಹಳವುಗಳು ತೀರ ತುಸು ಇರುತ್ತವೆ. ಜಾರೀ ಮತ್ತು ಕಾರಾ ಎಂಬ ಜಾತಿಯ ಉಪಯುಕ್ತವಾದ ವೃಕ್ಷಗಳು ವಿಶೇಷವಾಗಿ ನೈಋತ್ಯ ಭಾಗದೊಳಗೆ ಬೆಳೆಯುತ್ತವೆ. ಆಸ್ಟ್ರೇಲಿಯಾದ ಪೂರ್ವಭಾಗದೊಳಗಿನ ಹಳವುಗಳಲ್ಲಿ ಗಂಧ, ಯುಕೆಲಿಪ್ಟಸ್ ಮತ್ತು ವಾಟಲ್ ಎಂಬ ವೃಕ್ಷಗಳು ವಿಪುಲವಾಗಿರುತ್ತವೆ. ಯುಕೆಲಿಪ್ಟಸದ (ನೀಲಗಿರಿ) ಎಲೆಗಳಿಂದ ಎಣ್ಣೆಯನ್ನು ತೆಗೆಯುತ್ತಾರೆ. ಮತ್ತು ವಾಟಲ್ ವೃಕ್ಷದ ತೊಗಟೆಯಿಂದ ಟನಿನ್ ಎಂಬ ಪದಾರ್ಥವು ಹೊರಡುತ್ತದೆ. ಆದರೆ ಅರಣ್ಯಗಳ ಮೇಲೆ ಅವಲಂಬಿಸಿರುವ ಉದ್ಯೋಗಗಳು ಇಲ್ಲಿ ಅಷ್ಟು ಮಹತ್ವದ್ದಾಗಿರುವದಿಲ್ಲ; ಯಾಕಂದರೆ ಇಲ್ಲಿಂದ ಪರದೇಶಗಳಿಗೆ ಹೋಗುವ ಕಟ್ಟಿಗೆಯ ಮೂರುಮಡಿ ಕಟ್ಟಿಗೆಯು ಪರದೇಶಗಳಿಂದ ಇಲ್ಲಿ ಬರುತ್ತದೆ.

**ಹೋಗುಬರುವ ಮಾರ್ಗಗಳೂ ಪಟ್ಟಣಗಳೂ :**—ಆಸ್ಟ್ರೇಲಿಯಾ ದೊಳಗೆ ನಿರ್ಜನವಾದ ಪ್ರದೇಶವು ಹೆಚ್ಚಾಗಿರುವದರಿಂದ ರೇಲುಮಾರ್ಗ

ಗಳಾಗಲಿ ಬರುಹೋಗುವ ಬೇರೆ ಸಾಧನಗಳಾಗಲಿ ತೀರ ತುಸು ಇರುತ್ತವೆ. ಸಮುದ್ರ ದಂಡೆಯ ಮೇಲಿನ ಆಧುನಿಕ ಪದ್ಧತಿಯ ಭವ್ಯವಾದ ಪಟ್ಟಣಗಳನ್ನು ನೋಡಿದರೆ ಉಳಿದ ನಿರ್ಜನವಾದ ಪ್ರದೇಶದ ಕಲ್ಪನೆಯು ಬರುವದಿಲ್ಲ. ದೇಶದಲ್ಲಿಯ ಒಟ್ಟು ಜನವಸತಿಯಲ್ಲಿ ಅರ್ಧದಷ್ಟು ಜನವಸತಿಯು ಈ ಆರು ಪಟ್ಟಣಗಳಲ್ಲಿಯೇ ಇರುತ್ತದೆ. ಈ ಪಟ್ಟಣಗಳೂ ಬೇರೆ ಪಟ್ಟಣಗಳೂ, ಖಣಿಗಳ ಕೇಂದ್ರಗಳೂ, ರೇಲಿನಿಂದ ಜೋಡಿಸಲ್ಪಟ್ಟಿರುತ್ತವೆ. ಒಕ್ಕಲತನ, ತೋಟ ಪಟ್ಟಿ ಮತ್ತು ಹುಲ್ಲುಗಾವಲುಗಳಿದ್ದ ಭಾಗಗಳಲ್ಲಿರುವ ಸಣ್ಣ ಸಣ್ಣ ಪಟ್ಟಣಗಳು ಅಥವಾ ಹಳ್ಳಿಗಳು ಒಂದರಿಂದೊಂದು ಬಹಳ ದೂರದಲ್ಲಿರುತ್ತವೆ. ಇಷ್ಟೇ ಅಲ್ಲ; ಒಬ್ಬ ಕುರುಬನ ಮನೆಯು ಇನ್ನೊಬ್ಬ ಕುರುಬನ ಮನೆಯಿಂದ ೧೫-೨೦ ಮೈಲು ದೂರದಲ್ಲಿರುತ್ತದೆ. ಪಶ್ಚಿಮದ ಕಡೆಯ ಮರಡಿಯ ಪ್ರದೇಶವೆಲ್ಲ ತೀರ ನಿರ್ಜನವಾಗಿರುತ್ತದೆ.

**ಪರ್ಥ** ಎಂಬ ಪಟ್ಟಣವು ಪಶ್ಚಿಮ ಆಸ್ಟ್ರೇಲಿಯಾದ ರಾಜಧಾನಿಯಾಗಿದ್ದು ಸ್ವಾನ್ ಎಂಬ ಹೊಳೆಯ ದಂಡೆಯ ಮೇಲಿರುತ್ತದೆ. ಅದರ ಮುಖದ ಹತ್ತರ **ಫ್ರೀಮೆಂಟಲ್** ಎಂಬ ಬಂದರವಿದ್ದು ಅಲ್ಲಿಂದ ಈ ಪ್ರಾಂತದೊಳಗೆ ಬೆಳೆಯುವ ಗೋದಿ, ಉಣ್ಣೆ, ಬಂಗಾರ ಮತ್ತು ಕಟ್ಟಿಗೆಗಳು ಪರದೇಶಗಳಿಗೆ ಹೋಗುತ್ತವೆ. ಇಲ್ಲಿಂದ ದಕ್ಷಿಣ ಕರಾವಳಿಯ ಮೇಲಿರುವ **ಆಲ್ಬನೀ** ಎಂಬ ಬಂದರದ ವರೆಗೆ ರೇಲುಮಾರ್ಗವಿರುತ್ತದೆ. ಆದರೆ ಕಾಲಗುರ್ಲೀ ಎಂಬಲ್ಲಿ ಹೋದ ಮೇಲೆ ಗಾಡಿಯನ್ನು ಬದಲು ಮಾಡಬೇಕಾಗುತ್ತದೆ. ಆಸ್ಟ್ರೇಲಿಯಾದೊಳಗಿನ ಬೇರೆ ಬೇರೆ ಭಾಗಗಳಲ್ಲಿ ಬೇರೆ ಬೇರೆ ಅಗಲಳತೆಯ ರೇಲುಮಾರ್ಗಗಳಿರುವದರಿಂದ ಪ್ರವಾಸಿಕರಿಗೆ ಬಹು ತೊಂದರೆಯಾಗುತ್ತದೆ. ಈ ರೇಲುದಾರಿಯು ಮುಂದೆ **ಪೋರ್ಟ ಆಗಸ್ಟಾ**ದ ವರೆಗೆ ಹೋಗುತ್ತದೆ. ಇಲ್ಲಿಂದ ಮುಂದೆ ಉತ್ತರದ ಕಡೆಗಿರುವ **ಅಲಿಸ್ ಸ್ಪ್ರಿಂಗ್ಸ** ಎಂಬ ಪಟ್ಟಣದ ವರೆಗೆ ರೇಲುದಾರಿಯು ಆಗಿರುತ್ತದೆ. ಈ ಪಟ್ಟಣವು ಮಧ್ಯ ಆಸ್ಟ್ರೇಲಿಯದ ರಾಜಧಾನಿಯಾಗಿರುತ್ತದೆ. ಇಲ್ಲಿಂದ **ಡಾಲೀ ವಾಟರ್ಸ**ದ ವರೆಗಿನ ೩೦೦ ಮೈಲು ಅಂತರವನ್ನು ಮೋಟಾರಿನಿಂದಾಗಲಿ ವಿಮಾನದಿಂದಾಗಲಿ ಹೋಗಿ, ಅಲ್ಲಿಂದ ಮುಂದೆ ಪುನಃ ರೇಲಿನಿಂದ ಉತ್ತರದ ಕರಾವಳಿಯ ಮೇಲಿರುವ **ಡಾರ್ವಿನ್** ಪಟ್ಟಣಕ್ಕೆ ಹೋಗಲು ಅನುಕೂಲವಿರುತ್ತದೆ. ಯುರೋಪ

ದಿಂದ ಆಸ್ಟ್ರೇಲಿಯಾಕ್ಕೆ ಬರುವ ಆಕಾಶ ಮಾರ್ಗದ ಸ್ಟೇಶನವು ಇಲ್ಲಿ ಇರುತ್ತದೆ.

ದಕ್ಷಿಣ ಆಸ್ಟ್ರೇಲಿಯಾದ ರಾಜಧಾನಿಯಾದ ಅಡಿಲೇಡ್ ಎಂಬ ಪಟ್ಟಣವು ಗುಡ್ಡದ ಅಡಿಯಲ್ಲಿ ಕರಾವಳಿಯ ಮೇಲೆ ನೆಲಿಸಿದ್ದು, ಅಲ್ಲಿಂದ ೧೦ ಮೈಲಿನ ಮೇಲೆ ಪೋರ್ಟ ಅಡಿಲೇಡ್ ಎಂಬ ಬಂದರವಿದೆ. ಇಲ್ಲಿಂದ ಧಾನ್ಯಗಳೂ, ಹಣ್ಣುಗಳೂ ರಫ್ತಾಗುತ್ತವೆ. ವ್ಹಿಕ್ಟೋರಿಯಾದ ಈಗಿನ ರಾಜಧಾನಿಯೂ, ಆಸ್ಟ್ರೇಲಿಯಾದ ಹಳೇ ರಾಜಧಾನಿಯೂ ಆದ **ಮೆಲಬೋರ್ನ** ಎಂಬ ಪಟ್ಟಣವು ಬಹು ದೊಡ್ಡದೂ ಅರ್ವಾಚೀನಕಾಲದ ಯಾವತ್ತೂ ಸೌಕರ್ಯಗಳಿಂದೊಡಗೂಡಿದ್ದೂ ಆಗಿರುವದಲ್ಲದೆ ಅದು ಮಧ್ಯದಲ್ಲಿರುತ್ತದೆ. ಇಲ್ಲಿಂದ ನಾಲ್ಕೂ ಕಡೆಗೆ ರೇಲುಗಳೂ ಹೋಗಿರುತ್ತವೆ. ಹವೆಯ ದೃಷ್ಟಿಯಿಂದ ಈ ಪಟ್ಟಣವನ್ನು ಸರಿಗಟ್ಟುವ ಬೇರೆ ಪಟ್ಟಣಗಳು ಇಡೀ ಆಸ್ಟ್ರೇಲಿಯಾದಲ್ಲಿರುವದಿಲ್ಲ. **ಸಿಡನೀ** ಎಂಬ ಪಟ್ಟಣವು ನ್ಯೂಸಾವುಥ ವೇಲ್ಸದ ರಾಜಧಾನಿಯಾಗಿದ್ದು ಎಲ್ಲಕ್ಕೂ ಹಳೇ ಪಟ್ಟಣವಾಗಿರುತ್ತದೆ. **ಪೋರ್ಟ ಜಕ್ಸನ್** ಎಂಬ ಅದರ ಬಂದರವು ಜಗತ್ತಿನೊಳಗಿನ ಪ್ರಸಿದ್ಧವಾದ ಬಂದರವಾಗಿರುತ್ತದೆ. ಹತ್ತರದಲ್ಲಿಯೇ ಕಲ್ಲಿದ್ದಲಿಯು ಸಿಗುವದರಿಂದ ಕಾರಖಾನೆಗಳಿಗೂ ಬರುಹೋಗುವದಕ್ಕೂ ಅನುಕೂಲವಾಗಿರುತ್ತದೆ. **ಬ್ರಿಸ್ಬೇನ್** ಎಂಬ ಕ್ವೀನ್ಸಲಂಡದ ರಾಜಧಾನಿಯ ಸ್ಥಳವಿದ್ದರೂ ಅಂತರ್ಭಾಗದೊಳಗಿನ ಸರಕುಗಳನ್ನು ತರುವದಕ್ಕೂ ಕಳಿಸುವದಕ್ಕೂ ಅನುಕೂಲವಿಲ್ಲದ್ದರಿಂದ, ಈ ಪಟ್ಟಣದ ಬೆಳವಣಿಗೆಯು ಅಷ್ಟೊಂದು ಆಗಿರುವದಿಲ್ಲ. ಉತ್ತರದ ಕಡೆಗೆ **ರಾಕ ಹಮ್ಟನ್, ಟಾವುನ್ಸ ವ್ಹಿಲೆ,** ಮತ್ತು **ಕೇಅರ್ನ್ಸ** ಎಂಬ ಬಂದರಗಳು ಉದಯವಾಗುತ್ತಿರುವದರಿಂದ ಬ್ರಿಸ್ಬೇನ್‌ದ ಮಹತ್ವವು ಕಡಿಮೆಯಾಗಿರುತ್ತದೆ. ಆದರೂ ನೆರೆಯಲ್ಲಿ ಕಲ್ಲಿದ್ದಲಿಯ ಖಣಿಗಳಿರುವದರಿಂದ ಕಾರಖಾನೆಗಳು ಬೆಳೆಯುತ್ತಿರುತ್ತವೆ. ಉಳಿದ ಸಣ್ಣಪುಟ್ಟ ಪಟ್ಟಣಗಳ ಬಗ್ಗೆ ಉದ್ಯೋಗ ವ್ಯವಸಾಯುಗಳನ್ನನುಸರಿಸಿ ಈ ಮೊದಲೇ ಹೇಳಿದೆ.

# ೧೬ನೇ ಪ್ರಕರಣ

# ನ್ಯೂಝೀಲಂಡ

ಈ ದ್ವೀಪಗಳು ಆಸ್ಟ್ರೇಲಿಯಾದಿಂದ ೧೨೦೦ ಮೈಲಿನ ಮೇಲಿರುತ್ತದೆ. ಈ ದೇಶವು ಮುಖ್ಯವಾಗಿ ಒಕ್ಕಲುತನದ ಮತ್ತು ಹುಲ್ಲುಗಾವಲದ ದೇಶವಾಗಿದ್ದು ಅಲ್ಲಿಯ ಕಾರಖಾನೆಗಳು ತೀರ ಕಡಿಮೆ ಆಗಿರುತ್ತವೆ. ಇದರೊಳಗೆ ಇತ್ತಲಾಗಿ ಯುರೋಪಿಯನ್ ಜನರು ಮನೆ ಮಾಡಿಕೊಂಡು ನಿಂತಿರುತ್ತಾರೆ. ಟಾಸ್ಮನ್ ಎಂಬ ನಾವಿಕನು ೧೬೪೨ರಲ್ಲಿ ಈ ದ್ವೀಪಗಳ ಮೇಲೆ ಹೋದನು. ಮತ್ತು ಕಪ್ಟನ್ ಕುಕ್‌ನು ಸಹ ೧೭೬೯ರಲ್ಲಿ ಅಲ್ಲಿ ಹೋಗಿದ್ದನು. ಆದರೆ ೧೮೫೦ರಿಂದ ಮುಂದೆ ಇಲ್ಲಿ ವಸಾಹತು ಮಾಡಲಿಕ್ಕೆ ಆರಂಭಿಸಿದರು. ಅಂದಿನಿಂದ ಈ ಪ್ರದೇಶವು ಆಸ್ಟ್ರೇಲಿಯಾದೊಳಗಿನ ನ್ಯೂ ಸಾವುಥ ವೇಲ್ಸ ಪ್ರಾಂತಕ್ಕೊಳಪಟ್ಟಿರುತ್ತದೆಂದು ತಿಳಿಯುತ್ತಿದ್ದರು. ೧೮೭೦ರವರೆಗೆ ವಸಾಹತು ಮಾಡಿದ ಬ್ರಿಟಿಶ ಮತ್ತು ಮಾವರೀ ಜನರ ನಡುವೆ ಯುದ್ಧಗಳಾಗುತ್ತಿದ್ದವು. ಅವು ನಿಂತ ಮೇಲೆ ಮಾವರೀ ಜನರಿಗೆ ಅಲ್ಲಿಯ ಪಾರ್ಲಿಮೆಂಟಿನೊಳಗಿನ ಸಭಾಸದರನ್ನು ಆರಿಸಿ ಕೊಡುವ ಅಧಿಕಾರವು ಸಿಕ್ಕಿತು. ೧೯೦೭ರಲ್ಲಿ ಈ ದ್ವೀಪಗಳಿಗೆ ಅಂತರ್ಗತ ಸ್ವಾತಂತ್ರ್ಯವು ಸಿಕ್ಕಿತು.

ಮಾವರೀ ಜನರು ಮೂಲತಃ ಉತ್ತರ ಹಿಂದುಸ್ತಾನದೊಳಗಿನ ಜನರಿರಬೇಕು ಎಂದು ಹೇಳುತ್ತಾರೆ. ಅವರು ಆರ್ಯರ ವಂಶದವರಿರುವರೋ ಅಥವಾ ಆರ್ಯರು ಬರುವದಕ್ಕಿಂತ ಮುಂಚಿತವಾಗಿಯೇ ಅಲ್ಲಿ ವಾಸಿಸುತ್ತಿದ್ದರೋ ಎಂಬದರ ಬಗ್ಗೆ ಇನ್ನೂ ನಿಶ್ಚಿತವಾಗಿ ಗೊತ್ತಾಗಿರುವದಿಲ್ಲ. ಆದರೆ ಆರ್ಯ ಸಂಸ್ಕೃತಿಯ ಪಡಿಯಚ್ಚು ಅವರ ಮೇಲೆ ವಿಶೇಷವಾಗಿ ಬಿದ್ದದ್ದು ಕಂಡುಬರುತ್ತದೆ. ಎರಡುವರೆ ಸಾವಿರ ವರುಷಗಳ ಹಿಂದೆ ಅವರು ಹಿಂದುಸ್ತಾನದಿಂದ ಬ್ರಹ್ಮದೇಶಕ್ಕೆ, ಅಲ್ಲಿಂದ ಮಲಾಯಾದ ಮಾರ್ಗವಾಗಿ ಜಾವಾ ದ್ವೀಪದೊಳಗೆ ಹೋಗಿರಬೇಕು. ಅಲ್ಲಿಂದ ಅವರು ಮುಂದೆ ಫಿಜೀ ದ್ವೀಪ

ಗಳೊಳಗೆ ಹೋದರು. ಮತ್ತು ಆ ದ್ವೀಪಗಳಿಂದ ಪೆಸಿಫಿಕ್ ಮಹಾಸಾಗರದೊಳಗಿನ ಸುತ್ತಮುತ್ತಲಿನ ದ್ವೀಪಗಳಲ್ಲಿ ಪಸರಿಸಿದರು. ಅವರೊಳಗಿನ ಕೆಲವರು ನ್ಯೂಝೀಲಂಡದೊಳಗೆ ಹೋಗಿ ನಿಂತಿರಬಹುದೆಂದೂ ತಿಳಿಯಲಾಸ್ಪದವಿದೆ.

ಮಾವರೀ ಜನರು ಕಂದು ಬಣ್ಣದವರೂ, ಸುಂದರರೂ, ತೀಕ್ಷ್ಣಬುದ್ಧಿಯವರೂ ಅತಿ ಉತ್ಕೃಷ್ಟವಾದ ಸೈನಿಕರೂ ಆಗಿರುತ್ತಾರೆ. ಅವರು ಅಂಬಿಗತನದಲ್ಲಿ ಬಹು ಕುಶಲರಾಗಿರುತ್ತಾರೆ. ಅವರ ಮನೆಗಳು ಕಟ್ಟಿಗೆಯಿಂದ ಕಟ್ಟಲ್ಪಟ್ಟಿದ್ದು, ಅವುಗಳ ಮೇಲಿನ ಕೆತ್ತಿಗೆಯ ಕೆಲಸವು ಬಹು ಸುಂದರವಾಗಿರುತ್ತದೆ. ಇವರ ಜನಸಂಖ್ಯೆಯು ಮೊಟ್ಟಮೊದಲು ಬಹಳ



New Zealand Trade Commissioner, India.

ನ್ಯೂಝೀಲಂಡದ–ಮಾವರೀ ಜನರು

ವಾಗಿತ್ತು. ಆದರೆ ಅವರು ಬ್ರಿಟಿಶರ ಸಂಗಡಲೂ ತಮ್ಮತಮ್ಮೊಳಗೂ ಯುದ್ಧಗಳನ್ನು ಮಾಡುತ್ತ ಹೋದದ್ದರಿಂದ ಮತ್ತು ಪರಕೀಯರಿಂದ ಹಲವು ದುರ್ವ್ಯಸನಗಳು ಅವರಲ್ಲಿ ತಳಊರಿದ್ದರಿಂದ ಅವರ ಹ್ರಾಸವಾಗುತ್ತ ಹೋಯಿತು. ಅವರ ಜನಸಂಖ್ಯೆಯು ಈಗ ಕೇವಲ ೧ ಲಕ್ಷ ಮಾತ್ರ ಇರುತ್ತದೆ.

ನ್ಯೂಝಿೀಲಂಡದೊಳಗೆ ಎರಡು ದೊಡ್ಡ ದ್ವೀಪಗಳೂ ಸ್ಟೂಅರ್ಟ ಎಂಬ ನಡುಗಡ್ಡೆಯೂ ಸಮಾವೇಶವಾಗುತ್ತವೆ. ಹವಾಮಾನದಲ್ಲಿ ಮತ್ತು




ನ್ಯೂಝಿೀಲಂಡದ–ಸ್ವಾಭಾವಿಕ ರಚನೆಯೂ ಹವೆಯೂ

ಹುಟ್ಟುವಳಿಗಳಲ್ಲಿ ಈ ದೇಶವು ಬ್ರಿಟಿಶ ನಡುಗಡ್ಡೆಗಳಿಗೆ ತುಸು ಮಟ್ಟಿಗೆ ಹೋಲುತ್ತದೆ. ಆದರೆ ಈ ದೇಶವು ವಿಷುವ-ವೃತ್ತಕ್ಕೆ ಸಮೀಪವಾಗಿರು

ವದರಿಂದ ಇಲ್ಲಿಯ ಹವೆಯು ಬ್ರಿಟಿಶ ನಡುಗಡ್ಡೆಗಳಲ್ಲಿಯಕ್ಕಿಂತ ಬೆಚ್ಚಗಾಗಿರುತ್ತದೆ.

ದಕ್ಷಿಣ ನಡುಗಡ್ಡೆಯು ಹೆಚ್ಚು ಗುಡ್ಡಗಾಡು ಇದ್ದು, ಅದರೊಳಗಿನ ದಕ್ಷಿಣ ಆಲ್ಪ್ಸ ಎಂಬ ಪರ್ವತಾವಳಿಯು ಹಾಗೇ ಮುಂದೆ ಉತ್ತರ ದ್ವೀಪದಲ್ಲಿ ಸಹ ಕಂಡು ಬರುತ್ತದೆ. ಮಾವುಂಟ್ ಕುಕ್ ಎಂಬ ಶಿಖರವು ೧೨ ಸಾವಿರ ಫೂಟು ಎತ್ತರವಾಗಿರುತ್ತದೆ. ಮುಖ್ಯ ಪರ್ವತಕ್ಕೆ ಸಮಾಂತರವಾದ ಸಣ್ಣ ಸಣ್ಣ ಗುಡ್ಡಗಳ ಸಾಲುಗಳಿದ್ದು ಅವುಗಳೊಳಗೆ ರಮಣೀಯವಾದ ಸರೋವರಗಳೂ, ಫಲವತ್ತಾದ ಕೊಳ್ಳಗಳೂ ಇರುತ್ತವೆ. ದಕ್ಷಿಣ ದ್ವೀಪದ ನೈಋತ್ಯ ದಂಡೆಯು ಮೇಲೆ ನಾರ್ವೆ ದೇಶದೊಳಗಿದ್ದಂತೆ ಫಿಆರ್ಡಗಳು ಕಂಡುಬರುತ್ತವೆ. ಅವುಗಳಲ್ಲಿ ಮೀನುಗಳನ್ನು ಹಿಡಿಯುತ್ತಾರೆ. ಮತ್ತು ಬಿರುಗಾಳಿಗಳು ಬಿಟ್ಟಾಗ ಹಡಗಗಳು ಅಲ್ಲಿ ಆಶ್ರಯದ ಸಲುವಾಗಿ ಬರುತ್ತವೆ.

ಉತ್ತರ ದ್ವೀಪದ ಮಧ್ಯದಲ್ಲಿ ಎತ್ತರವಾದ ಗುಡ್ಡಗಳಿದ್ದು ಅವು ಎಲ್ಲ ಬದಿಯಿಂದಲೂ ಇಳಿಜಾರಾಗುತ್ತ ಬಂದಿರುತ್ತವೆ. ತಪ್ಪಲು ಭೂಮಿಯು ಮೇಲೆ ಜ್ವಾಲಾಮುಖಿಗಳ ಚಲನವಲನಗಳು ಆಗುತ್ತಿರುತ್ತವೆ. ಬಿಸಿ ನೀರಿನ ಮತ್ತು ಬಿಸಿ ಕೆಸರಿನ ಸೆಲೆಗಳೂ, ಕೆರೆಗಳೂ, ಬುಗ್ಗೆಗಳೂ ನೋಡಲಿಕ್ಕೆ ಸಿಗುತ್ತವೆ. ರೋಗಿಗಳ ರೋಗವನ್ನು ಹೋಗಲಾಡಿಸುವದಕ್ಕೆ ರೋಟೊರುಆ ಎಂಬಲ್ಲಿಯ ಸೆಲೆಗಳ ಹತ್ತರ ಹೋಗಿ ನಿಲ್ಲುತ್ತಾರೆ. ಮಾವರೀ ಜನರು ಬಿಸಿನೀರಿನ ಸೆಲೆಗಳನ್ನು ಅಡಿಗೆ ಮಾಡುವದಕ್ಕೂ, ಬಟ್ಟೆಗಳನ್ನು ಒಗೆಯುವದಕ್ಕೂ ಉಪಯೋಗಿಸುತ್ತಾರೆ.

ನ್ಯೂಝೀಲಂಡದೊಳಗಿನ ಗುಡ್ಡಗಳ ಇಳುಕಲುಗಳಿಗೆ ಡಾವುನ್ಸ ಎಂದೆನ್ನುತ್ತಾರೆ. ದಂಡೆಯ ಹತ್ತರ ಕಿರಿಯಗಲಾದ ಮತ್ತು ಸಪಾಟಾದ ಭೂಮಿಯು ತೀರ ತುಸು ಇರುತ್ತದೆ. ಕರಗುವ ಹಿಮದಿಂದ ಮತ್ತು ಮಳೆಯಿಂದ ಹೊಳೆಗಳಿಗೆ ನೀರಿನ ಪೂರೈಕೆಯು ಚೆನ್ನಾಗಿ ಆಗುತ್ತದೆ. ಆದರೆ ಕಿರಿಯಗಲಾಗಿರುವದರಿಂದಲೂ ಇಳುಕಲಿನ ಮೇಲಿಂದ ಹರಿದು ಬರುವದರಿಂದಲೂ ಓಡಾಡಲಿಕ್ಕೆ ಅವು ಉಪಯೋಗವಾಗುವದಿಲ್ಲ.

ಈ ದ್ವೀಪಗಳು ಮಹಾಸಾಗರದಲ್ಲಿರುವದರಿಂದ ಅಲ್ಲಿಯ ಹವೆಯು ಸಮವಾಗಿರುತ್ತದೆ. ಮಳೆಯ ಗಾಳಿಗಳು ಪಶ್ಚಿಮದ ಕಡೆಯಿಂದ ಬೀಸು




ನ್ಯೂಝೀಲಂಡ—ಪಟ್ಟಣಗಳೂ ಹುಟ್ಟುವಳಿಗಳೂ

ತ್ತವೆ. ಆದ್ದರಿಂದ ಪಶ್ಚಿಮ ದಂಡೆಯ ಮೇಲೆ ಸಾಕಷ್ಟು ಮಳೆಯಾಗುತ್ತದೆ. ಮತ್ತು ಪರ್ವತವು ಅಡ್ಡ ಬರುವದರಿಂದ ಪೂರ್ವದ ಕಡೆಗೆ ಮಳೆಯು ಕಡಿಮೆ ಯಾಗುತ್ತದೆ. ಈ ತರದ ಹವಾಮಾನವು ಹಳವುಗಳಿಗೂ, ಹುಲ್ಲುಗಾವಲು

ಗಳಿಗೂ ಅನುಕೂಲವಾಗಿರುತ್ತದೆ. ಪೂರ್ವಕಾಲದಲ್ಲಿ ಅರ್ಧ ಭಾಗದಲ್ಲಿ ಹಳವುಗಳಿದ್ದವು; ಆದರೆ ಇತ್ತಲಾಗಿ ಅಲ್ಲಲ್ಲಿ ಗಿಡಗಳನ್ನು ಕಡಿದು, ಅಲ್ಲಿ ಹುಲ್ಲುಗಾವಲುಗಳನ್ನು ಮಾಡಿದ್ದಾರೆ. ಅರಣ್ಯದೊಳಗೆ ಕಾರೀ ಎಂಬ ಜಾತಿಯ ವೃಕ್ಷವು ವಿಶೇಷವಾಗಿ ಬೆಳೆಯುತ್ತದೆ. ಅದರ ಅಂಟಿನಿಂದ ರೋಗಂದವನ್ನು ತಯಾರಿಸುತ್ತಾರೆ.

ಈ ದ್ವೀಪಗಳ ಪೂರ್ವ ದಂಡೆಯ ಮೇಲೆ ಕಡಿಮೆ ಮಳೆಯಾಗುವ ಪ್ರದೇಶದಲ್ಲಿ ಉತ್ತಮವಾದ ಹುಲ್ಲುಗಾವಲುಗಳು ದೃಷ್ಟಿಗೆ ಬೀಳುತ್ತವೆ. ದಕ್ಷಿಣ ದ್ವೀಪದೊಳಗೆ ಕ್ಯಾಂಟರಬರೀ ಎಂಬ ಬೈಲಿನೊಳಗೆ ಸಾವಿರಾರು ಕುರಿಗಳ ಹಿಂಡುಗಳನ್ನು ಮಾಂಸದ ಸಲುವಾಗಿಯೂ, ಉಣ್ಣೆಯ ಸಲುವಾಗಿಯೂ ಸಾಕುತ್ತಾರೆ. ಈ ದ್ವೀಪದಿಂದ ಮಾಂಸ, ಎಣ್ಣೆ ಮತ್ತು ಚರ್ಮಗಳು ಬಹಳವಾಗಿ ಹೋಗುತ್ತವೆ. ಉತ್ತರ ದ್ವೀಪದೊಳಗೆ ಮುಖ್ಯವಾಗಿ ದನಗಳನ್ನು ಸಾಕುತ್ತಾರೆ. ಮತ್ತು ಅಲ್ಲಿಂದ ಬೆಣ್ಣೆ, ಚೀಜ ಮುಂತಾದ ಹೈನಿನ ಪದಾರ್ಥಗಳು ಪರದೇಶಗಳಿಗೆ ಹೋಗುತ್ತವೆ. ಇತ್ತಲಾಗಿ ಹಡಗಗಳಲ್ಲಿ ಶೀತ ಹವೆಯ ಕೋಣೆಗಳ ಯೋಜನೆಯನ್ನು ಮಾಡಿರುವದರಿಂದ ಈ ವ್ಯಾಪಾರವು ವಿಶೇಷವಾಗಿ ಬೆಳೆದಿರುತ್ತದೆ.

ಹುಲ್ಲುಗಾವಲುಗಳ ಮೇಲೆ ಅವಲಂಬಿಸಿರುವ ವ್ಯವಸಾಯಗಳು ಬಹಳವಾಗಿ ಬೆಳೆದಿರುವದರಿಂದ ಅಲ್ಲಿಯ ಜನರು ಒಕ್ಕಲುತನದ ಮೇಲೆ ಅಷ್ಟು ಲಕ್ಷವನ್ನು ಕೊಡುತ್ತಿರುವದಿಲ್ಲ. ಆದರೂ ದ್ವೀಪಗಳಲ್ಲಿ ವಾಸಿಸುವ ಜನರಿಗೆ ಪೂರೈಕೆಯಾಗುವಷ್ಟು ಧಾನ್ಯವು ಬೆಳೆಯುತ್ತದೆ. ಪೂರ್ವದ ಕಡೆಗಿರುವ ಒಣ ಭಾಗದಲ್ಲಿ ಗೋದಿಯೂ ಉಳಿದ ಭಾಗದಲ್ಲಿ ಓಟ ಮತ್ತು ಬಟಾಟಿಗಳೂ ಬೆಳೆಯುತ್ತವೆ. ದನಗಳಿಗೆ ಬೇಕಾಗುವ ಪೌಷ್ಟಿಕವಾದ ಹುಲ್ಲನ್ನೂ ಗಜ್ಜರಿಗಳನ್ನೂ ಸಾಕಷ್ಟು ಬೆಳೆಯಿಸುತ್ತಾರೆ. ಹಣ್ಣುದೋಟದೊಳಗೆ ಸಫರಚಂದ, ಜರ್ದಾಳು, ಪೀಚ, ಕಿತ್ತಳೆ, ನಿಂಬೆ ಮುಂತಾದ ತರತರದ ಹಣ್ಣುಗಳು ಆಗುತ್ತವೆ. ಅವುಗಳನ್ನು ಡಬ್ಬಿಗಳಲ್ಲಿ ತುಂಬಿ ಕಳಿಸುತ್ತಾರೆ. ಅಲ್ಲಿ ಜೇನು ತುಪ್ಪವನ್ನು ಕೂಡ ಹಾಕುವ ಉದ್ಯೋಗವು ಚೆನ್ನಾಗಿ ಸಾಗುತ್ತದೆ. ಮತ್ತು ಜೇನು ತುಪ್ಪದಿಂದ ತುಂಬಿದ ಪೀಪುಗಳು ಪರದೇಶಗಳಿಗೆ ಕಳಿಸಲ್ಪಡುತ್ತವೆ. ನಾರಿನಿಂದ ( ಫುಂಡಿಯ ) ದಪ್ಪಾದ ಅರಿವೆಯನ್ನು ನೇಯುತ್ತಾರೆ.

ಈ ದ್ವೀಪಗಳಲ್ಲಿ ಉಪಯುಕ್ತನಾದ ಎಲ್ಲ ಧಾತುಗಳು ಸಿಗುತ್ತವೆ. ಆಕ್ಲಂಡ ಪಟ್ಟಣದೊಳಗೆ ೧೮೫೨ ರಲ್ಲಿ ಮೊಟ್ಟಮೊದಲು ಬಂಗಾರವು ಸಿಕ್ಕಿತು; ಮತ್ತು ಈಗಲೂ ಸಹ ತಕ್ಕಮಟ್ಟಿಗೆ ಸಿಗುತ್ತದೆ. ದಕ್ಷಿಣ ದ್ವೀಪ ದೊಳಗೆ ಕಲ್ಲಿದ್ದಲಿಯು ಸಿಗುತ್ತದೆ.

ಈ ದ್ವೀಪದೊಳಗೆ ೧೮ ಲಕ್ಷ ಜನ ಬ್ರಿಟಿಶರೂ, ೧ ಲಕ್ಷ ಮಾವರೀ ಜನರೂ ಇರುತ್ತಾರೆ. ಒಟ್ಟು ಜನಸಂಖ್ಯೆಯ ⅔ ಜನರು ಪಟ್ಟಣಗಳಲ್ಲಿಯೂ ⅓ ಜನರು ಹಳ್ಳಿಗಳಲ್ಲಿಯೂ ಜೀವಿಸುತ್ತಾರೆ. **ಆಕ್ಲಂಡ** ಎಂಬ ಬಂದರವು ಬಹಳ ಮಹತ್ವದ್ದಾಗಿರುತ್ತದೆ. ಇಲ್ಲಿಂದ ಹೈನಿನ ಪದಾರ್ಥಗಳು, ಉಣ್ಣೆ, ಬಂಗಾರ, ಅಂಟು, ಕಟ್ಟಿಗೆ ಮುಂತಾದ ಸರಕುಗಳು ರಫ್ತಾಗುತ್ತವೆ. **ವೆಲಿಂಗ್ಟನ್** ಎಂಬ ಪಟ್ಟಣವು ಇಲ್ಲಿಯ ರಾಜಧಾನಿಯಾಗಿದ್ದು, ಉತ್ಕೃಷ್ಟವಾದ ಬಂದರವೂ ಆಗಿರುತ್ತವೆ. ಇಲ್ಲಿಂದ ಹಣ್ಣು, ಬೆಣ್ಣೆ, ಚೀಜ, ಉಣ್ಣೆ ಮುಂತಾದ ಸರಕುಗಳು ಪರದೇಶಗಳಿಗೆ ಹೋಗುತ್ತವೆ. ದಕ್ಷಿಣ ದ್ವೀಪದಲ್ಲಿ **ಲಿಟಲ್ ಟನ್** ಎಂಬ ಉತ್ಕೃಷ್ಟವಾದ ಬಂದರವಿದ್ದು ಅದರ ಹತ್ತರದಲ್ಲಿಯೇ **ಕ್ರಾಯಿಸ್ಟ ಚರ್ಚ** ಎಂಬ ಪಟ್ಟಣವು ಕಾರಖಾನೆಗಳ ಸಲುವಾಗಿ ಪ್ರಸಿದ್ಧ ವಾಗಿರುತ್ತದೆ. ಅಲ್ಲಿ ಅರಿವೆ, ರೇಲ್ವೆಗೆ ಬೇಕಾಗುವ ಸರಕು, ಒಕ್ಕಲತನಕ್ಕೆ ಬೇಕಾಗುವ ಯಂತ್ರ ಮುಂತಾದ ವಸ್ತುಗಳು ತಯಾರಿಸಲ್ಪಡುತ್ತವೆ. ಹೊಳೆಗಳ ಪ್ರವಾಹಗಳಿಂದ ವಿದ್ಯುಚ್ಛಕ್ತಿಯನ್ನು ಹುಟ್ಟಿಸಿ, ಅದನ್ನು ಕಾರ ಖಾನೆಗಳಲ್ಲಿ ಉಪಯೋಗಿಸುತ್ತಾರೆ. **ಡ್ಯುನೇಡಿನ್** ಎಂಬ ಪಟ್ಟಣವಾ ದರೂ ಮಹತ್ವದ್ದಿರುತ್ತದೆ.

ಈ ದೇಶದಲ್ಲಿ ಮೇಲೆ ಹೇಳಿದ ಪಟ್ಟಣಗಳನ್ನೂ ಬೇರೆ ಜನವಸತಿ ಯುಳ್ಳ ಕೇಂದ್ರಗಳನ್ನೂ ಜೋಡಿಸುವ ಮೂರು ಸಾವಿರ ಮೈಲು ಉದ್ದಳ ತೆಯ ರೇಲುಮಾರ್ಗವು ಸದ್ಯಕ್ಕೆ ಬಳಿಕೆಯಲ್ಲಿರುತ್ತದೆ. ಸಣ್ಣದೊಂದು ಮೊಳೆಯಿಂದ ಎಂಜಿನದವರೆಗಿನ ರೇಲುಮಾರ್ಗಕ್ಕೆ ಬೇಕಾಗುವ ಯಾವತ್ತೂ ಸಣ್ಣ ದೊಡ್ಡ ಸರಕುಗಳು ನ್ಯೂಝೀಲಂಡದಲ್ಲಿಯೇ ತಯಾರಾಗುತ್ತದೆಂಬ ಮಾತನ್ನು ಲಕ್ಷದಲ್ಲಿಡಬೇಕು. ಇಲ್ಲಿ ರೇಲುಮಾರ್ಗಗಳಿಂದ ಮೋಟಾರ ಗಳಿಗಿಂತ ಜನರು ಹೆಚ್ಚು ಓಡಾಡುತ್ತಾರೆ; ಯಾಕಂದರೆ ನ್ಯೂಝೀಲಂಡ ದೊಳಗಿನ ಯಾವದೇ ಸ್ಥಳವು ಸಮುದ್ರದಿಂದ ೭೫ ಮೈಲಿಗಿಂತ ದೂರಿರುವ

ದಿಲ್ಲ. ಒಟ್ಟು ಲೈನುದಾರಿಗಳ ಉದ್ದಳತೆಯು ೪೫ ಸಾವಿರ ಮೈಲಿನ ದಿರುತ್ತದೆ.

ನ್ಯೂಝೀಲಂಡವು ಡೋಮಿನಿಯನ್ ಪದ್ಧತಿಯ ಪ್ರಜಾಸತ್ತಾತ್ಮಕ ದೇಶವಿರುತ್ತದೆ. ಪೆಸಿಫಿಕ ಮಹಾಸಾಗರದೊಳಗಿನ ಬೇರೆ ಕೆಲವು ನಡು ಗಡ್ಡೆಗಳು ಈ ಸರಕಾರದ ಅಧಿಕಾರಕ್ಕೆ ಒಳಪಟ್ಟಿರುತ್ತವೆ. ಅದರಂತೆ ದಕ್ಷಿಣ ಧ್ರುವದ ಪ್ರದೇಶದೊಳಗಿನ ಕೆಲವು ಭಾಗವು ಈ ಸರಕಾರದ ಕೈಯಲ್ಲಿಯೇ ಇರುತ್ತದೆ. ಇಲ್ಲಿ ತಿಮಿಂಗಿಲ ಜಾತಿಯ ಮೀನುಗಳನ್ನು ಹಿಡಿಯುವ ಉದ್ಯೋಗವು ನಡೆಯುವಂತಿದೆ. ಉತ್ತರ ನ್ಯೂಝೀಲಂಡದ ದಂಡೆಯ ಮೇಲೆ ಸಹ ಮೀನು ಹಿಡಿಯುವ ಉದ್ಯೋಗವು ಚೆನ್ನಾಗಿ ನಡೆಯುವಂತೆ ಇದ್ದರೂ ಅದರ ಕಡೆಗೆ ಜನರ ಲಕ್ಷವು ಇನ್ನೂ ಸಾಕಷ್ಟು ಎಳೆಯಲ್ಪಟ್ಟಿರುವದಿಲ್ಲ.



## ೧೭ನೇ ಪ್ರಕರಣ

# ಕಾನಡಾ

**ಕರಾವಳಿಯು:**—ಉತ್ತರ ಅಮೇರಿಕೆಯ ಉತ್ತರದ ಕಡೆಯು ಬಹು ದೊಡ್ಡ ಭಾಗವನ್ನು ಈ ದೇಶವು ವ್ಯಾಪಿಸಿರುತ್ತದೆ. ಇದರ ಉತ್ತರ ದಂಡೆಯು ತೀರ ಛಿನ್ನ-ವಿಚ್ಛಿನ್ನವಾಗಿದ್ದು ಅಲ್ಲಿ ಸಣ್ಣ ದೊಡ್ಡ ಅನೇಕ ನಡುಗಡ್ಡೆಗಳು ಪಸರಿಸಿರುತ್ತವೆ. ಆದರೆ ಈ ಕರಾವಳಿಯ ಪ್ರದೇಶವೂ ದ್ವೀಪಗಳೂ ಯಾವಾಗಲೂ ಹಿಮಾಚ್ಛಾದಿತವಾಗಿರುವದರಿಂದ ಜನವಸತಿಗಾಗಲಿ ವ್ಯಾಪಾರಕ್ಕಾಗಲಿ ಇದು ನಿರುಪಯೋಗವಾಗಿರುತ್ತದೆ. ಪೂರ್ವ ಮತ್ತು ಪಶ್ಚಿಮದ ಕರಾವಳಿಗಳು ಸಹ ಛಿನ್ನ-ವಿಚ್ಛಿನ್ನವಾಗಿರುತ್ತವೆ. ಪೂರ್ವ ದಂಡೆಯ ಉತ್ತರ ಭಾಗವು ವರ್ಷದೊಳಗಿನ ಹಲವು ತಿಂಗಳುಗಳ ವರೆಗೆ ಹಿಮಾಚ್ಛಾದಿತವಾಗಿರುತ್ತದೆ. ಯಾಕಂದರೆ ಆ ಬದಿಯಿಂದ ಸಮುದ್ರದೊಳಗಿನ ಒಂದು ಶೀತ ಪ್ರವಾಹವು ಹರಿಯುತ್ತಿರುತ್ತದೆ. ಪಶ್ಚಿಮ ದಂಡೆಯು ಬಹಳ ಒಡಕಾಗಿದ್ದು, ಅಲ್ಲಿ ಎಷ್ಟೋ ಸಣ್ಣ ಸಣ್ಣ ದ್ವೀಪಗಳಿರುತ್ತವೆ. ಪೂರ್ವ ದಂಡೆಗಿಂತ ಈ ಬದಿಯ ದಂಡೆಯು ಬಹು ಭಾಗವು ಉದ್ಯೋಗ-ವ್ಯವಸಾಯಗಳಿಗೂ, ವ್ಯಾಪಾರಕ್ಕೂ ಯಾವಾಗಲೂ ತೆರೆದಿರುತ್ತದೆ; ಯಾಕಂದರೆ ಈ ಕರಾವಳಿಯ ಹತ್ತರ ಉಷ್ಣ ಸಮುದ್ರ ಪ್ರವಾಹವು ಹರಿಯುತ್ತಿರುತ್ತದೆ.

**ತಗ್ಗು-ದಿನ್ನೆಗಳ ಭಾಗಗಳು:**—ಈ ದೇಶದ ಪಶ್ಚಿಮ ಭಾಗವು ದಕ್ಷಿಣೋತ್ತರವಾಗಿ ಹಬ್ಬಿದ ಪರ್ವತಾವಳಿಗಳಿಂದ ತುಂಬಿರುತ್ತದೆ. ಈ ಭಾಗದೊಳಗೆ ಸಣ್ಣ ಪುಟ್ಟ ತಪ್ಪಲುಗಳೂ ಕೊಳ್ಳಗಳೂ ಇರುತ್ತವೆ. ಈ ಪರ್ವತಮಯವಾದ ಪ್ರದೇಶದ ಪೂರ್ವ ಬದಿಯು ಕ್ರಮೇಣ ಇಳುಕಲಾಗುತ್ತ ಅದರ ಪೂರ್ವದ ಕಡೆಗೆ ಸಮವಾದ ಬೈಲು ಪ್ರದೇಶವು ಆರಂಭವಾಗುತ್ತದೆ. ಈ ಸಮವಾದ ಪ್ರದೇಶದ ವಿಸ್ತಾರವು ಬಹು ದೊಡ್ಡದಾಗಿರುತ್ತದೆ. ಮತ್ತು ಆದರಲ್ಲಿ ಎಷ್ಟೋ ಸಣ್ಣ ದೊಡ್ಡ ಹೊಳೆಗಳೂ, ಸರೋವರಗಳೂ ಇರುತ್ತವೆ. ಅದರ ಪೂರ್ವದ ಕಡೆಗೆ ಮತ್ತೆ ತಪ್ಪಲುಗಳೂ, ಪರ್ವತಗಳೂ ಇದ್ದೇ ಇರುತ್ತವೆ. ಇದಲ್ಲದೆ ಪೂರ್ವ ಮತ್ತು ಪಶ್ಚಿಮ ದಂಡೆಗಳಗುಂಟ ಕಿರಿಯಗಲಾದ ತಗ್ಗು ಪ್ರದೇಶಗಳು ಇರುತ್ತವೆ.

ಮಧ್ಯಭಾಗದಲ್ಲಿ ಸಮವಾದ ಪ್ರದೇಶದೊಳಗಿರುವ ಎಷ್ಟೋ ಸರೋವರಗಳು ಅಲ್ಲಿ ಹೇಗೆ ಉತ್ಪನ್ನವಾದವು ಎಂಬುದರ ಬಗ್ಗೆ ಜಿಜ್ಞಾಸೆಯುಂಟಾಗುವದು ಸ್ವಾಭಾವಿಕವಾಗಿರುತ್ತದೆ; ಯಾಕಂದರೆ ಈ ತರದ ಸರೋವರಗಳಿಂದ ತುಂಬಿದ ಭೂಪ್ರದೇಶವು ಜಗತ್ತಿನೊಳಗೆ ಎರಡನೆಯ ಕಡೆಗೆ ಸಿಗುವದು ತೀರ ದುರ್ಲಭವು. ಸಾವಿರಾರು ವರುಷಗಳ ಮುಂಚೆ ಇಡೀ ಕಾನಡಾ ದೇಶವು ಬರ್ಫದ ಪ್ರಚಂಡವಾದ ತರಗಳಿಂದ ಮುಚ್ಚಿಹೋಗಿತ್ತೆಂದು ಶಾಸ್ತ್ರಜ್ಞರು ಅಭಿಪ್ರಾಯಪಡುತ್ತಾರೆ. ಆ ಮೇಲೆ ಈ ತರವು ಕರಗಲಾರಂಭಿಸಲು, ಅದು ಉತ್ತರದ ಕಡೆಗೆ ಸರಿಯಲಾರಂಭಿಸಿತು. ಹೀಗೆ ಜಾರುತ್ತ ಹೋಗುವಾಗ ಆ ತರವು ತನ್ನ ಭಾರದಿಂದ ನಡುನಡುವೆ ಭೂಮಿಯ ಮೇಲಿನ ಮಣ್ಣನ್ನು ಸವರಿಕೊಂಡು ಹೋಯಿತು. ಮತ್ತು ಆ ಸ್ಥಳಗಳಲ್ಲಿ ದೊಡ್ಡ ದೊಡ್ಡ ಕೊರಕಲುಗಳು ಬಿದ್ದವು. ಅವುಗಳೊಳಗೆ ನೀರು ತುಂಬಿ ನಿಂತು ಈ ಸರೋವರಗಳು ನಿರ್ಮಾಣವಾದವೆಂದು ಹೇಳುತ್ತಾರೆ.




ಕಾನಡಾ ದೇಶದೊಳಗಿನ ಪೂರ್ವ ಪಶ್ಚಿಮದ ತಗ್ಗು-ದಿನ್ನೆಗಳನ್ನು ತೋರಿಸುವ ಛೇದವು

**ಹವೆಯು:**—ಕಾನಡಾದ ಹವೆಯು ಚಳಿಗಾಲದೊಳಗೆ ಬಹಳ ಶೀತವಾಗಿರುತ್ತದೆ. ಆದ್ದರಿಂದ ಬಹುತರ ಎಲ್ಲ ಹೊಳೆಗಳೂ ಸರೋವರಗಳೂ ಹೆಪ್ಪುಗಟ್ಟುತ್ತವೆ. ನೊವ್ಹೆಂಬರದಿಂದ ಎಪ್ರಿಲ್ ತಿಂಗಳ ವರೆಗೆ ಜಲಮಾರ್ಗವಾಗಿ ನಡೆಯುವ ಎಲ್ಲ ವ್ಯವಹಾರಗಳನ್ನು ಬಿಟ್ಟುಬಿಡಬೇಕಾಗುತ್ತದೆ. ಇಲ್ಲಿಯ ಚಳಿಗಾಲವು ಇಷ್ಟೊಂದು ಶೀತವಾಗಿರಲಿಕ್ಕೆ ಕಾರಣವೇನಂದರೆ, ಉತ್ತರದ ಕಡೆಯಿಂದ ಆರ್ಕ್ಟಿಕ್ ಮಹಾಸಾಗರದ ಮೇಲಿಂದ ಬರುವ ಅತಿ ಶೀತ ಗಾಳಿಗಳು ದಾರಿಯಲ್ಲಿ ಎಲ್ಲಿಯೂ ತಡೆಯಲ್ಪಡದ್ದರಿಂದ, ಅವು ನೆಟ್ಟಗೆ ಎಲ್ಲ ಭಾಗದ ಮೇಲೆ ಬೀಸುತ್ತ ಬರುತ್ತವೆ. ಅದರಲ್ಲಿ ಸಮುದ್ರವು ಅಲ್ಲಿಂದ ದೂರಿರುವದರಿಂದ ಹವೆಯೊಳಗಿನ ಶೈತ್ಯವು ಕಡಿಮೆಯಾಗುವದಿಲ್ಲ. ಪೂರ್ವ

ದಂಡೆಯ ಬದಿಗೆ ಉತ್ತರದ ಕಡೆಯಿಂದ ಹರಿಯುತ್ತ ಬರುವ ತಂಪು ನೀರಿನ ಪ್ರವಾಹದಿಂದ ಅದರ ಬಹು ದೊಡ್ಡ ಭಾಗವೆಲ್ಲ ಹೆರೆತು ಹೋಗುತ್ತದೆ. ನಡುಚಳಿಗಾಲದಲ್ಲಿ ಇಡೀ ಪ್ರದೇಶವೆಲ್ಲ ಹಿಮಮಯವಾಗಿ ಹೋಗುತ್ತದೆ; ಆದರೆ ಹವೆಯು ಒಣದಾಗಿರುತ್ತದೆ. ಮತ್ತು ಪ್ರಕಾಶವಾದರೂ ಆಲ್ಹಾದಕರ ವಾಗಿರುತ್ತದೆ. ಈ ದಿವಸಗಳಲ್ಲಿ ಕಾನಡಾ ದೇಶದೊಳಗಿನ ಜನರು ಬರ್ಫದ ಮೇಲೆ ತರತರದ ಆಟಗಳನ್ನಾಡಿ ತಮ್ಮ ವೇಳೆಯನ್ನು ಕಳೆಯು ತ್ತಾರೆ. ಪಶ್ಚಿಮ ದಂಡೆಯ ಮೇಲೆ ಮಾತ್ರ ಹವೆಯು ಅಷ್ಟು ಶೀತವಾಗಿರು ವದಿಲ್ಲ. ಆದ್ದರಿಂದ ಅಲ್ಲಿಯ ಬಂದರಗಳು ಇಡೀ ವರುಷದಲ್ಲಿ ತೆರೆದಿರುತ್ತವೆ. ಬೇಸಿಗೆಯಲ್ಲಿ ಕಾನಡಾದ ದಕ್ಷಿಣ ಭಾಗದ ಹವೆಯು ಬೆಚ್ಚಗಿರುವದರಿಂದ, ಅದು ಧಾನ್ಯಗಳಿಗೂ ಹಣ್ಣುಹಂಪಲುಗಳಿಗೂ ಚೆನ್ನಾಗಿರುತ್ತದೆ.

ಪೂರ್ವ ಮತ್ತು ಪಶ್ಚಿಮ ದಂಡೆಗಳ ಪ್ರದೇಶಗಳಲ್ಲಿ ಮಳೆಯು ವಿಪುಲ ವಾಗುತ್ತದೆ. ಉತ್ತರ ದಂಡೆಯ ಮೇಲೆ ಮಳೆಯು ತೀರ ತುಸು ಬೀಳುತ್ತದೆ. ಆದರೆ ಆ ಬದಿಗೆ ಜನವಸತಿಯು ಇಲ್ಲದ್ದರಿಂದ ಮಳೆ ಆದರೂ ಅಷ್ಟೇ ಬಿಟ್ಟರೂ ಅಷ್ಟೇ. ಅಲ್ಲಿ ಅದರ ಮಹತ್ವವೇ ಇರುವದಿಲ್ಲ. ಪಶ್ಚಿಮದ ಕಡೆಯ ಪರ್ವತಗಳ ತಪ್ಪಲುಗಳ ಮೇಲೆ ಮತ್ತು ಕೊಳ್ಳಗಳಲ್ಲಿ, ಅದರಂತೆ ಈ ಪರ್ವತದ ಪೂರ್ವದ ಇಳುಕಲಿನ ಮೇಲೆ ಮತ್ತು ಅದರ ಮಗ್ಗಲಿಗೆ ಇದ್ದ ಸಮವಾದ ಪ್ರದೇಶದೊಳಗೆ ಮಳೆಯು ಕಡಿಮೆಯಾಗುತ್ತದೆ. ಯಾಕಂದರೆ ಪಶ್ಚಿಮದಿಂದ ಬರುವ ಆರ್ದ್ರವಾದ ಗಾಳಿಗಳು ರಾಕೀ ಪರ್ವತವನ್ನು ಏರುತ್ತ ಹೋಗುವಾಗ ಅವುಗಳಲ್ಲಿಯ ಆರ್ದ್ರತೆಯು ಮಳೆಯ ರೂಪದಿಂದ ಬಿದ್ದು ಹೋಗುತ್ತದೆ. ಮತ್ತು ಮುಂದೆ ಅವು ಬಹುತರವಾಗಿ ಒಣಗಾಳಿಗಳಾಗಿಯೇ ಬೀಸುತ್ತವೆ. ಆದರೆ ಈ ಒಣಗಾಳಿಗಳು ಪರ್ವತದ ಮೇಲಿಂದ ಪೂರ್ವದಿಕ್ಕಿ ಯಲ್ಲಿ ಇಳಿಯುವಾಗ ತುಸು ಬೆಚ್ಚಗಾಗುತ್ತವೆ. ಇದರಿಂದ ಈ ಪರ್ವತದ ಮೇಲೆ ಚಳಿಗಾಲದಲ್ಲಿ ತುಸುಮಟ್ಟಿಗೆ ಬಿದ್ದ ಹಿಮವು ಕರಗಿ ಹೋಗುತ್ತದೆ. ಆದ್ದರಿಂದ ಈ ಭಾಗವು ಎಂದೂ ಹಿಮಾಚ್ಛಾದಿತವಾಗುವದಿಲ್ಲ. ಅದರಂತೆ ಈ ಒಣಗಾಳಿಗಳಿಂದ ಈ ಪ್ರದೇಶದೊಳಗಿನ ಹೊಲಗಳಿಗೆ ಸಾಕಷ್ಟು ಮಳೆಯು ದೊರಕುವದಿಲ್ಲ; ಆದರೆ ಇಲ್ಲಿ ಹುಲ್ಲು ಬೆಳೆಯುತ್ತದೆ. ಮತ್ತು ಅದರ ಮೇಲೆ ದನಗಳ ದೊಡ್ಡ ದೊಡ್ಡ ಹಿಂಡುಗಳೂ, ಕುರಿಯ ಹಿಂಡುಗಳೂ ಪೋಷಿಸಲ್ಪಡುತ್ತವೆ.

ಉತ್ತರದ ಕಡೆಯ ಹಿಮಾಚ್ಛಾದಿತ ಪ್ರದೇಶವನ್ನು ಬಿಟ್ಟರೆ ಕಾನಡಾ ದೇಶದ ಹವೆಯು ಆರೋಗ್ಯಕರವಾದದ್ದಿರುತ್ತದೆ. ಯೋಗ್ಯ ರೀತಿಯಿಂದ ದುಡಿದರೆ ಮನುಷ್ಯನಿಗೆ ಬೇಕಾಗುವ ಯಾವತ್ತೂ ಪದಾರ್ಥಗಳನ್ನು ದೊರಕಿಸಲಿಕ್ಕೆ ಬರುವಂತೆ ನಿಸರ್ಗ ದೇವತೆಯು ಇಲ್ಲಿಯ ವ್ಯವಸ್ಥೆಯನ್ನು ಮಾಡಿಟ್ಟಿರುವಳು. ಆದರೆ ಇಲ್ಲಿಯ ಜನರು ಸೋಮಾರಿಗಳಾದರೆ ನಡೆಯುವಂತಿಲ್ಲ. ಚಳಿಗಾಲದಲ್ಲಿ ಮನೆಯ ಹೊರಗಿನ ಹೋರೆಗಳನ್ನೆಲ್ಲ ಬಿಟ್ಟು ಬಿಡಬೇಕಾಗುತ್ತದೆ. ಆದ್ದರಿಂದ ಉಳಿದ ಎಂಟು ತಿಂಗಳುಗಳಲ್ಲಿ ಬಹಳ ದುಡಿದು ಚಳಿಗಾಲದ ಸಲುವಾಗಿ ಸಂಗ್ರಹಮಾಡಿ ಇಡಬೇಕಾಗುತ್ತದೆ.



ಕಾನಡಾ-ಪ್ರೆಅರೀ ಪ್ರದೇಶದೊಳಗೆ ಊಳುವದು

**ಬೆಳೆಗಳು:**—ಗೋದಿಯು ಕಾನಡಾದೊಳಗಿನ ಮುಖ್ಯವಾದ ಬೆಳೆಯು. ಜನವಸತಿಯು ಇದ್ದ ಯಾವತ್ತೂ ಭಾಗಗಳಲ್ಲಿ ಬಹುತರವಾಗಿ ಗೋದಿಯು ಬೆಳೆದೇ ಬೆಳೆಯುತ್ತದೆ. ಆದರೂ ವಿಶೇಷವಾಗಿ ಪಂಚಮಹಾಸರೋವರಗಳ ಪಶ್ಚಿಮಕ್ಕೆ ರಾಕೀ ಪರ್ವತದ ಅಡಿಯವರೆಗಿರುವ ವಿಸ್ತೀರ್ಣವಾದ ಪ್ರದೇಶ

ದೊಳಗೆ ಗೋದಿಯು ಬಹು ಚೆನ್ನಾಗಿ ಬರುತ್ತದೆ. ಈ ಪ್ರದೇಶಕ್ಕೆ 'ಪ್ರೆಅರೀ' ಎಂದೆನ್ನುತ್ತಾರೆ. ಹೊಲಗಳು ವಿಸ್ತೀರ್ಣವಾಗಿದ್ದು ಆ ಮಾನದಿಂದ ಜನ ವಸತಿಯು ತೀರ ವಿರಲವಾಗಿರುವದರಿಂದ ಒಕ್ಕಲತನವು ಯಂತ್ರಗಳ ಸಹಾ ಯದಿಂದ ಸಾಗಿಸಲ್ಪಡುತ್ತದೆ. ಈ ಪ್ರದೇಶದಿಂದ ಯುರೋಪಕ್ಕೆ, ವಿಶೇಷ ವಾಗಿ ಇಂಗ್ಲಂಡಕ್ಕೆ ಗೋದಿಯು ಬಹಳವಾಗಿ ಹೋಗುತ್ತದೆ. ಪ್ರೆಅರೀ ಪ್ರದೇಶದಲ್ಲಿ ಗೋದಿಯ ಸಂಗಡ ಓಟ ಮತ್ತು ಗೋವಿನ ಜೋಳಗಳಂಥ ಕಡಿಮೆ ತರದ ಧಾನ್ಯಗಳನ್ನೂ ಬೆಳೆಯಿಸಹತ್ತಿದ್ದಾರೆ. ಈ ಧಾನ್ಯಗಳು ಚಳಿ ಗಾಲದಲ್ಲಿ ದನಗಳ ಹೊಟ್ಟೆಗೆ ಹಾಕಲಿಕ್ಕೆ ಬಹಳ ಉಪಯೋಗಿಸಲ್ಪಡುತ್ತವೆ; ಮತ್ತು ದನಗಳನ್ನು ಸಾಕಿ ಅವುಗಳ ಹೈನಿನಿಂದಲೂ ಮಾಂಸದಿಂದಲೂ ಬಹು ಲಾಭದಾಯಕವಾದ ಉದ್ಯೋಗವನ್ನು ಮಾಡಲಿಕ್ಕೆ ಬರುತ್ತದೆ. ಇದಲ್ಲದೆ ಹಲವು ಕಡೆಯಲ್ಲಿ ಬಟಾಟೆ, ತಂಬಾಕ ಮತ್ತು ಆಡಗಾಳುಗಳನ್ನು ಸಹ ಬೆಳೆಯಿಸುತ್ತಾರೆ.

ಈ ದೇಶದೊಳಗೆ ಹಣ್ಣಿನ ಗಿಡಗಳನ್ನು ಬಹಳ ಹಚ್ಚುತ್ತಾರೆ. ಈ ಉದ್ಯೋಗವನ್ನು ಮಾಡುವಂಥ ಮೂರು ಸ್ಥಳಗಳುಂಟು. (೧) ನೋವ್ಹಾ ಸ್ಕೋಶಿಯಾ ಎಂಬ ಪ್ರಾಂತದಲ್ಲಿ ಮತ್ತು ಅದರ ಪೂರ್ವದಂಡೆಯ ಪ್ರದೇಶ ದಲ್ಲಿ ಸಫರಚಂದಗಳು ವಿಪುಲವಾಗಿ ಬೆಳೆಯುತ್ತವೆ. (೨) ಆಂಟಾರಿಯೋ ಪ್ರಾಂತದೊಳಗಿನ ಸರೋವರದ ಪ್ರದೇಶದಲ್ಲಿ ಪೀಚ, ದ್ರಾಕ್ಷೆ, ಸಫರಚಂದ, ಪೀಅರ ಮುಂತಾದ ತಂಪು ದೇಶಗಳಲ್ಲಿ ಆಗುವ ಹಣ್ಣುಗಳು ಚೆನ್ನಾಗಿ ಬೆಳೆ ಯುತ್ತವೆ. (೩) ದಕ್ಷಿಣ ಕರಾವಳಿಯ ಮೇಲಿರುವ ಬ್ರಿಟಿಶ ಕೋಲಂಬಿಯಾ ಪ್ರಾಂತದೊಳಗಿನ ಫಲವತ್ತಾದ ಕೊಳ್ಳಗಳು ಸಫರಚಂದ, ಪೀಚ, ಪೀಅರ, ಮುಂತಾದ ಹಣ್ಣುಗಳ ಸಲುವಾಗಿ ಪ್ರಸಿದ್ಧವಾಗಿರುತ್ತವೆ. ಇಲ್ಲಿಯ ಹಣ್ಣು ದೋಟಗಳಿಗೆ ಕಾಲುವೆಗಳಿಂದ ನೀರಿನ ಪೂರೈಕೆಯು ಮಾಡಿರುತ್ತಾರೆ.

**ಉದ್ಯೋಗಗಳು:**—ಕಾನಡಾದೇಶದೊಳಗೆ ದನಗಳನ್ನು ಸಾಕುವ ಉದ್ಯೋಗವಾದರೂ ಬಹು ಮಹತ್ವದ್ದಾಗಿರುತ್ತದೆ. ಈ ಉದ್ಯೋಗವು ಮುಖ್ಯವಾಗಿ ಪ್ರೆಅರೀ ಪ್ರದೇಶದ ಪಶ್ಚಿಮದ ಭಾಗದಲ್ಲಿ ನಡೆಯುತ್ತದೆ. ಈ ಪ್ರದೇಶದೊಳಗೆ ಮಳೆಯು ಸಾಕಷ್ಟು ಆಗುವದಿಲ್ಲ. ಆದ್ದರಿಂದ ಇಲ್ಲಿ ಗೋದಿಯು ಬೆಳೆಯುವದಿಲ್ಲ. ಆದರೆ ಹುಲ್ಲು ಚೆನ್ನಾಗಿ ಬೆಳೆಯುತ್ತದೆ. ತೀರ ತುಸು ವೆಚ್ಚದಿಂದ ಹುಲ್ಲುಗಾವಲುಗಳ ಮೇಲೆ ದನಗಳ ದೊಡ್ಡ ದೊಡ್ಡ

ಹಿಂಡುಗಳನ್ನು ಸಾಕಲು ಅನುವಾಗಿರುತ್ತದೆ. ಇದಲ್ಲದೆ ಈ ಹುಲ್ಲುಗಾವಲು ಗಳಲ್ಲಿ ಬೆಳೆಯುವ ಹುಲ್ಲು ಬೇಸಿಗೆಯು ಮುಗಿಯುವ ಸಮಯಕ್ಕೆ ಒಣಗಿ ದರೂ ಅದು ಚಳಿಗಾಲದಲ್ಲಿ ಹಿಮದಿಂದ ಮುಚ್ಚಿ ಹೋಗುವದಿಲ್ಲ. ಇದರಿಂದ ಇಲ್ಲಿಯ ದನಗಳು ಚಳಿಗಾಲದಲ್ಲಿ ಸಹ ಹೊರಗೆ ಅಡ್ಡಾಡುತ್ತಿರುತ್ತವೆ. ಸಾವಿರಾರು ದನಗಳ ಹಿಂಡುಗಳು ಈ ಪ್ರದೇಶದೊಳಗೆ ಮೇಯುತ್ತಿರು ವದನ್ನೂ, ಈ ಹಿಂಡುಗಳ ಸಂಗಡ ಕುದುರೆಯ ಮೇಲೆ ಕುಳಿತುಕೊಂಡು ಹೋಗುವ ದನಕಾಯುವವರನ್ನೂ ನೋಡಬಹುದು. ಈ ದನ ಕಾಯು ವವರು ಮೈ-ಕೈಗಳಿಂದ ಗಟ್ಟಿಗರಾಗಿರುವರಲ್ಲದೆ, ಕುದುರೆಯನ್ನು ಹತ್ತು ವದರಲ್ಲಿ ಬಹು ಕುಶಲರಾಗಿರುತ್ತಾರೆ. ಯಾವತ್ತೂ ದನಗಳನ್ನೂ ವರ್ಷ ಕ್ಕೊಮ್ಮೆ ಕೂಡಹಾಕಿ ಅವುಗಳಲ್ಲಿ ಮಾರತಕ್ಕವುಗಳನ್ನೂ ಹೈನಿನ ಸಲುವಾಗಿ ಇಡತಕ್ಕವುಗಳನ್ನೂ ಅವರು ಬೇರೆ ಬೇರೆ ಮಾಡುತ್ತಾರೆ. ಮಾರಾಟದ ದನಗಳನ್ನು ಕಟುಕರ ಮನೆಗೆ ಕಳಿಸುತ್ತಾರೆ. ಮತ್ತು ಅಲ್ಲಿಂದ ಅವುಗಳ ಮಾಂಸವು ಪರದೇಶಗಳಿಗೆ ಕಳಿಸಲ್ಪಡುತ್ತದೆ. ಹೈನಿನ ದನಗಳ ಹಾಲಿನಿಂದ ಬೆಣ್ಣೆ, ಗಿಣ್ಣ ಮುಂತಾದ ಪದಾರ್ಥಗಳನ್ನು ತಯಾರಿಸಿ ಪರದೇಶಗಳಿಗೆ ಕಳಿಸಿ ಕೊಡುತ್ತಾರೆ.

ಪ್ರೇಅರೀಗಳಲ್ಲಲ್ಲದೆ ಬೇರೆ ಭಾಗಗಳಲ್ಲಿ ಸಹ ದನಗಳನ್ನು ಸಾಕುವ ಉದ್ಯೋಗವು ನಡೆಯುತ್ತದೆ. ಸೇಂಟ್‌ಲಾರೆನ್ಸ ಹೊಳೆಯ ಎರಡೂ ದಂಡೆ ಗಳ ಪಟ್ಟಣಗಳಲ್ಲಿ ಮತ್ತು ವಿಶೇಷವಾಗಿ ಮೂರು ಸರೋವರಗಳ ನಡುವಿನ ಪ್ರದೇಶದಲ್ಲಿ ಈ ಉದ್ಯೋಗವು ಬಹು ಚೆನ್ನಾಗಿ ಸಾಗುತ್ತದೆ. ಯಾಕಂದರೆ ಈ ಭಾಗದಲ್ಲಿ ಜನವಸತಿಯು ದಟ್ಟಾಗಿರುವದರಿಂದ ಸರಕುಗಳಿಗೆ ಗಿರಾಕಿಗಳು ಹತ್ತರದಲ್ಲಿಯೇ ಸಿಗುವವು. ದನಗಳ ಸಂಗಡ ಹಂದಿಗಳು ಸಾಕಲ್ಪಡುತ್ತವೆ. ಯಾಕಂದರೆ ಹಾಲಿನಿಂದ ತಯಾರಾಗುವ ಮಜ್ಜಿಗೆಯಂಥ ಪದಾರ್ಥಗಳ ಮೇಲೆ ಹಂದಿಗಳನ್ನು ಪೋಷಿಸಲಿಕ್ಕೆ ಬರುತ್ತದೆ. ಕಾನಡಾದೊಳಗೆ ತಯಾ ರಾಗುವ ಚೀಜು (ಗಿಣ್ಣ)ದ ಮಾರಾಟವು ಇಂಗ್ಲಂಡದಲ್ಲಿಯೂ, ಸಂಯುಕ್ತ ಸಂಸ್ಥಾನದಲ್ಲಿಯೂ ಹೆಚ್ಚಾಗಿ ಆಗುತ್ತದೆ. ಕಾನಡಾದೊಳಗೆ ಅತಿ ಶೀತ ಹವೆಯು ಇರುವದರಿಂದ ಕುರಿಗಳನ್ನು ಹೆಚ್ಚಾಗಿ ಸಾಕುವದಿಲ್ಲ.

ಕಟ್ಟಿಗೆ ಕಡಿಯುವದು ಕಾನಡಾದೊಳಗಿನ ಒಂದು ಮಹತ್ವವಾದ ಉದ್ಯೋಗವಾಗಿರುತ್ತದೆ. ಸೂಚಿಪರ್ಣಿ ವೃಕ್ಷಗಳ ದಟ್ಟಾದ ಅರಣ್ಯಗಳು



ಕಟ್ಟಿಗೆಗಳನ್ನು ಕೊರೆಯುವ ಗಿರಣಿಯು. N. F. B., Canada.

ಪಶ್ಚಿಮದ ಕರಾವಳಿಯ ಮೇಲೆ ಕಟ್ಟಿಗೆ ಕಡಿಯುವ ಉದ್ಯೋಗವು ವರುಷದಲ್ಲೆಲ್ಲ ನಡೆಯುತ್ತದೆ. ಯಾಕಂದರೆ ಇಲ್ಲಿಯ ಸಮುದ್ರ ದಂಡೆಯೂ ಹೊಳೆಗಳೂ ಎಂದೂ ಹೆಪ್ಪುಗಟ್ಟುವದಿಲ್ಲ. ಪೂರ್ವದಂಡೆಯ ಮೇಲೆ ಮತ್ತು ಓಟಾವಾದ ಸುತ್ತಮುತ್ತಲು ಈ ಉದ್ಯೋಗವು ಕೇವಲ ಚಳಿಗಾಲದಲ್ಲಿ ನಡೆಯುತ್ತದೆ. ಮತ್ತು ಉಳಿದ ವೇಳೆಯಲ್ಲಿ ಕಟ್ಟಿಗೆ ಕಡಿಯುವ ಕೂಲಿಕಾರರು ಗಿರಣಿಗಳಲ್ಲಿ ದುಡಿಯಲಿಕ್ಕೆ ಹೋಗುತ್ತಾರೆ. ಚಳಿಗಾಲದಲ್ಲಿ ಗಿರಣಿಗಳೆಲ್ಲ ನಿಂತು ಹೋಗುತ್ತವೆ; ಯಾಕಂದರೆ ಆಗ ಹೊಳೆಗಳು ಹೆಪ್ಪುಗಟ್ಟುವದರಿಂದ ವಿದ್ಯುಚ್ಛಕ್ತಿಯನ್ನು ಹುಟ್ಟಿಸಲಿಕ್ಕೆ ಬರುವದಿಲ್ಲ.

ಕಾನಡಾ ದೇಶವು ಮೀನು ಹಿಡಿಯುವ ಉದ್ಯೋಗದ ಸಲುವಾಗಿ ಪ್ರಸಿದ್ಧವಾಗಿರುವದು. ಈ ಉದ್ಯೋಗವು ಪೂರ್ವ ದಂಡೆಯ ಮೇಲೆ, ವಿಶೇಷವಾಗಿ ನೋವ್ಹಾಸ್ಕೋಶಿಯಾ ಪ್ರಾಂತದೊಳಗೆ ಸಾಗುತ್ತದೆ. ಇಲ್ಲಿ ಕಾಡ್ ಎಂಬ ಜಾತಿಯ ಮೀನುಗಳು ವಿಪುಲವಾಗಿ ಸಿಗುತ್ತವೆ. ಇಲ್ಲಿಯ ಜನರು ನ್ಯೂ ಫಾವುಂಡಲಂಡದ ಹತ್ತರಿರುವ "ಗ್ರಂಡ್ ಬಂಗ್ಸ" ಎಂಬ ಹೆಸರಿನ ಕಿರಿಯಾಳವಾದ ಸಮುದ್ರದ ಪ್ರದೇಶದೊಳಗೆ ಮೀನುಗಳನ್ನು ಹಿಡಿಯುತ್ತಾರೆ. ಕಾಡ್ ಮೀನಿನಿಂದ ಕಾಡ್‌ಲಿವ್ಹರ ಎಣ್ಣೆಯನ್ನು ತಯಾರಿಸುತ್ತಾರೆ. ಅದರಂತೆ ಈ ಮೀನುಗಳನ್ನು ಒಣಗಿಸಿ ಪರದೇಶಗಳಿಗೆ ಕಳಿಸುತ್ತಾರೆ. ಉತ್ತರದ ಕಡೆಯ ಟಂಡ್ರಾ ಪ್ರದೇಶದೊಳಗೆ ಎಸ್ಕಿಮೋ ಎಂಬ ಜನರು ಮೀನು ಹಿಡಿದು ತಮ್ಮ ಹೊಟ್ಟೆ ತುಂಬಿಕೊಳ್ಳುತ್ತಾರೆ. ಈ ಉದ್ಯೋಗಕ್ಕೆ ಇಲ್ಲಿ ವ್ಯಾಪಾರದ ದೃಷ್ಟಿಯಿಂದ ಮಹತ್ವವಿರುವದಿಲ್ಲ.

ಟಂಡ್ರಾಪ್ರದೇಶದ ದಕ್ಷಿಣಕ್ಕಿರುವ ದಟ್ಟಾದ ಅರಣ್ಯಗಳಲ್ಲಿ ಬಲೆಗಾರರ ಉದ್ಯೋಗವು ಚೆನ್ನಾಗಿ ಸಾಗುತ್ತದೆ. ಮತ್ತು ಅದನ್ನು ಬಹುತರವಾಗಿ ರೆಡ್ ಇಂಡಿಯನ್‌ರೆಂಬ ಅಲ್ಲಿಯ ಮೂಲ ನಿವಾಸಿಗಳು ಸಾಗಿಸುತ್ತಾರೆ. ಅವರು ಚಳಿಗಾಲದಲ್ಲಿ ಬೇಟೆಯಾಡಿದ ಕೂದಲುಗಳುಳ್ಳ ಪ್ರಾಣಿಗಳ ಮೈದೊಗಲುಗಳನ್ನು ಮಾರಾಟ ಮಾಡಿ, ತಮ್ಮ ಉಪಜೀವನವನ್ನು ಮಾಡಿಕೊಳ್ಳುತ್ತಾರೆ. ಈ ತೊಗಲುಗಳು ಬಹಳ ಬೆಚ್ಚಗಾಗಿಯೂ, ಸುಂದರವಾಗಿಯೂ ಇರುವದರಿಂದ ಪಾಶ್ಚಾತ್ಯ ದೇಶದೊಳಗಿನ ಶ್ರೀಮಂತ ಸ್ತ್ರೀಯರು ಇವುಗಳಿಂದ ಮಾಡಿದ ಉಡುಪುಗಳನ್ನು ಚಳಿಗಾಲದಲ್ಲಿ ಧರಿಸುತ್ತಾರೆ. ಆದ್ದರಿಂದ ಕಾನಡಾ

ದೊಳಗೆ ಈ ಬಲೆಗಾರರ ಉದ್ಯೋಗವು ದೊಡ್ಡ ಪ್ರಮಾಣದಲ್ಲಿ ನಡೆಯು ತ್ತದೆ.

ಕಾನಡಾದೊಳಗೆ **ಖನಿಜ ಸಂಪತ್ತು** ವಿಪುಲವಾಗಿರುತ್ತದೆ. ಕಲ್ಲಿದ್ದಲಿ-ಪಶ್ಚಿಮದ ಕಡೆಗೆ ವ್ಹಂಕೂವ್ಹರ ದ್ವೀಪದೊಳಗೆ ಮತ್ತು ಪೂರ್ವದ ಕಡೆಗೆ ಬ್ರಿಟನ್ ದ್ವೀಪದೊಳಗೆ ಕಲ್ಲಿದ್ದಲಿಯ ಖಣಿಗಳಿರುತ್ತವೆ. ಆಲ್ಬರ್ಟಾ ಪ್ರಾಂತದ ದಕ್ಷಿಣ ಭಾಗದೊಳಗೆ ಕಾನಡಾದೊಳಗಿನ ಎಲ್ಲಕ್ಕೂ ದೊಡ್ಡ ಕಲ್ಲಿದ್ದಲಿಯ ಖಣಿಯು ಇರುತ್ತದೆ. **ಅಸ್ಬೆಸ್ಟಾಸ್**—ಈ ಹೆಸರಿನ ಹತ್ತಿಯಂಥ ಒಂದು ಖನಿಜ ಪದಾರ್ಥವಿರುತ್ತದೆ. ಅದು ಸುಡುವದಿಲ್ಲ. ಅದು ಕ್ವಿಬೇಕ್ ಪ್ರಾಂತ ದೊಳಗೆ ಸಿಗುತ್ತದೆ. ಅಲ್ಲಿ ಸಿಗುವಷ್ಟು ಈ ಪದಾರ್ಥವು ಜಗತ್ತಿನೊಳಗೆ ಇನ್ನಾವ ದೇಶದಲ್ಲಿಯೂ ಸಿಗುವದಿಲ್ಲ. **ನಿಕೆಲ್**—ಆಂಟಾರಿಯೋ ಪ್ರಾಂತ ದೊಳಗೆ ಸಡಬರೀ ಎಂಬ ಪಟ್ಟಣದ ಹತ್ತರ ಈ ಧಾತುವಿನ ಖಣಿಗಳಿರುತ್ತವೆ. ಅವುಗಳಷ್ಟು ವಿಸ್ತಾರವಾದ ಖಣಿಗಳು ಜಗತ್ತಿನೊಳಗೆ ಬೇರೆ ಎಲ್ಲಿಯೂ ಇರುವದಿಲ್ಲ. ನಮ್ಮ ದೇಶದೊಳಗಿನ ಕೆಲ ನಾಣ್ಯವನ್ನು ಈ ಧಾತುವಿ ನಿಂದಲೇ ಮಾಡಿರುತ್ತಾರೆ. ಈ ಧಾತುವಿನ ಹೊರ್ತಾಗಿ ಬೆಳ್ಳಿ, ಬಂಗಾರ, ತಾಮ್ರ, ತವರು, ಸೀಸ ಮುಂತಾದ ಧಾತುಗಳಾದರೂ ಕಾನಡಾದೊಳಗೆ ಅಲ್ಲಲ್ಲಿ ಸಿಗುತ್ತವೆ.

**ಪಟ್ಟಣಗಳು** :—ಪೂರ್ವದಂಡೆಯ ಮೇಲಿರುವ **ಹಲೀಫ್ಯಾಕ್ಸ** ಎಂಬ ಬಂದರವು ಇಡೀ ವರುಷದಲ್ಲಿ ತೆರವಾಗಿರುವದರಿಂದ ಅಟಲಾಂಟಿಕ ಮಹಾ ಸಾಗರದ ಮೇಲಿಂದ ಬರುಹೋಗುವ ಉಗಿಹಡಗಗಳಿಗೆ ಅದು ಬಹಳ ಅನುಕೂಲವಾಗಿರುತ್ತದೆ. ಅದರಂತೆ ನ್ಯೂಬ್ರನ್ಸ್ವಿಕ್ ಪ್ರಾಂತದೊಳಗಿನ **ಸೆಂಟ್‌ಜಾನ್** ಎಂಬ ಬಂದರವು ಸಹ ವರುಷದಲ್ಲೆಲ್ಲ ತೆರವಾಗಿರುತ್ತದೆ. ಕಾನಡಾ ದೇಶದೊಳಗಿನ ಮುಖ್ಯವಾದ ರೇಲುಮಾರ್ಗಗಳೆಲ್ಲ ಇವೆರಡೂ ಬಂದರಗಳವರೆಗೆ ಹೋಗಿರುವದರಿಂದ, ಅವುಗಳಿಗೆ ವ್ಯಾಪಾರದ ದೃಷ್ಟಿ ಯಿಂದ ಬಹಳ ಮಹತ್ವವು ಬಂದಿರುತ್ತದೆ.

ಸೆಂಟಲಾರೆನ್ಸ ಹೊಳೆಯ ಮೇಲಿಂದ ಉಗಿಯ ಹಡಗಗಳು ಕಾನಡಾ ದೇಶದ ಅಂತರ್ಭಾಗದೊಳಗೆ ಹೋಗುತ್ತವೆ. ಆದರೆ ಈ ಮಾರ್ಗವು ಚಳಿ

ಗಾಲದಲ್ಲಿ ಹೆಪ್ಪುಗಟ್ಟಿ ಕಟ್ಟಾಗುವದರಿಂದ ವರ್ಷದೊಳಗೆ ೫-೬ ತಿಂಗಳು ಮಾತ್ರ ಇದರ ಉಪಯೋಗವಾಗುತ್ತದೆ. ಈ ಮಾರ್ಗದಿಂದ ಹೊಳೆಯ ಮುಖ ದಿಂದ ಸುಮಾರು ಒಂದು ಸಾವಿರ ಮೈಲು ಒಳಗಿರುವ **ಮಾಂಟ್ರಿಯಲ್** ಪಟ್ಟಣದ ವರೆಗೆ ಮಹಾಸಾಗರಗಾಮೀ ಹಡಗಗಳು ಹೋಗುತ್ತವೆ ಮತ್ತು ಅಲ್ಲಿಂದ ಮುಂದೆ ಒಂಧು ಸಾವಿರ ಮೈಲುಗಳ ವರೆಗೆ ಸಣ್ಣ ಹಡಗಗಳು ಸುಪೀರಿಯರ್ ಸರೋವರದ ಮೇಲಿರುವ **ಪೋರ್ಟ ಆರ್ಥರ** ಬಂದರದ ವರೆಗೆ ಹೋಗುತ್ತವೆ. ಜಲಮಾರ್ಗದಿಂದ ಬರುಹೋಗುವ ವೆಚ್ಚವು ಯಾವಾಗಲೂ ಉಗಿಬಂಡಿಯ ಮಾರ್ಗಕ್ಕಿಂತ ತೀರ ಕಡಿಮೆಯಾಗಿರುತ್ತದೆ. ಅದ್ದರಿಂದ ವರುಷದೊಳಗಿನ ಕೆಲವು ತಿಂಗಳುಗಳ ವರೆಗೆ ಈ ಮಾರ್ಗವು ಕಟ್ಟಾದರೂ ವ್ಯಾಪಾರದ ದೃಷ್ಟಿಯಿಂದ ಅದು ಅತಿ ಮಹತ್ವದ್ದಾಗಿರುತ್ತದೆ.

• ಸೆಂಟಲಾರೆನ್ಸ ಹೊಳೆಯ ದಂಡೆಯ ಮೇಲಿರುವ **ಕ್ವಿಬೇಕ್** ಎಂಬ ಪಟ್ಟಣವು ಕಾನಡಾ ದೇಶದೊಳಗಿನ ಎಲ್ಲಕ್ಕೂ ಹಳೇ ಪಟ್ಟಣವಾಗಿರುತ್ತದೆ. ಇಲ್ಲಿಂದ ಕಟ್ಟಿಗೆಯೂ ಗೋದಿಯೂ ಪರದೇಶಗಳಿಗೆ ಹೋಗುತ್ತವೆ. ಅಲ್ಲಿಂದ ಮುಂದೆ ಈ ಹೊಳೆಯೊಳಗಿರುವ ಒಂದು ನಡುಗಡ್ಡೆಯ ಮೇಲಿರುವ **ಮಾಂಟ್ರಿಯಲ್** ಎಂಬ ಪಟ್ಟಣವು ಹತ್ತುತ್ತದೆ. ಇದು ಕಾನಡಾದೊಳಗಿನ ಅತಿ ದೊಡ್ಡ ಪಟ್ಟಣವು ಇರುತ್ತದೆ. ಅದರಂತೆ ಇಲ್ಲಿಯ ಬರುಹೋಗುವ ವ್ಯಾಪಾರದಷ್ಟು ವ್ಯಾಪಾರವು ಕಾನಡದೊಳಗಿನ ಬೇರೆ ಯಾವದೇ ಪಟ್ಟಣದೊಳಗೆ ಸಾಗುವದಿಲ್ಲ. ಓಟಾವಾ ಎಂಬ ಹೊಳೆಯು ಸೆಂಟಲಾರೆನ್ಸ ಹೊಳೆಗೆ ಇದೇ ಸ್ಥಳದಲ್ಲಿ ಬಂದು ಕೂಡುತ್ತದೆ; ಆದ್ದರಿಂದ ಓಟಾವಾ ಹೊಳೆಯ ದಂಡೆಯ ಮೇಲಿನ ಪ್ರದೇಶದೊಳಗಿನ ಕಟ್ಟಿಗೆಯು ಸಹ ಇದೇ ಪಟ್ಟಣದಿಂದ ಪರದೇಶಗಳಿಗೆ ರಫ್ತಾಗುತ್ತದೆ. ಇಲ್ಲಿಂದ ದಕ್ಷಿಣಕ್ಕೆ ಸಂಯುಕ್ತ ಸಂಸ್ಥಾನದಿಂದ ನ್ಯೂಯಾರ್ಕ ಪಟ್ಟಣದವರೆಗೆ ಹೋಗುವ ರೇಲುಮಾರ್ಗವು ಬಹಳ ಅನುಕೂಲವಾಗಿರುತ್ತದೆ. ಪರದೇಶಗಳಿಂದ ಸಾಗರಗಾಮೀ ಉಗಿ ಹಡಗಗಳಿಂದ ತರಲ್ಪಟ್ಟ ಸರಕುಗಳು ಮಾಂಟ್ರಿಯಲ್‌ದಿಂದಲೇ ಮುಂದೆ ಸಣ್ಣ ಸಣ್ಣ ಹಡಗಗಳಿಂದ ಪಶ್ಚಿಮ ಭಾಗಗಳಿಗೆ ಸರೋವರಗಳ ಮಾರ್ಗವಾಗಿ ಕಳಿಸಲ್ಪಡುತ್ತವೆ. ಅದರಂತೆ ಕಾನಡಾದೊಳಗಿಂದ ಸಣ್ಣ ಹಡಗಗಳಿಂದ ತರಲ್ಪಟ್ಟ ಸರಕುಗಳು ಇಲ್ಲಿಂದಲೇ ಮುಂದೆ ಸಾಗರಗಾಮೀ ಉಗಿ ಹಡಗಗಳಿಂದ ಪರದೇಶಗಳಿಗೆ ಕಳಿಸಲ್ಪಡುತ್ತವೆ.

ಮಾಂಟ್ರಿಯುಲದ ಮುಂದೆ ಪಂಚಮಹಾಸರೋವರಗಳ ಜಲಮಾರ್ಗವು ಆರಂಭವಾಗುತ್ತದೆ. ಆಂಟಾರಿಯೋ, ಏರೀ, ಮಿಶಿಗನ್, ಹ್ಯೂರಾನ್, ಮತ್ತು ಸುಪೀರಿಯರ್ ಎಂಬ ಐದು ಸರೋವರಗಳಲ್ಲಿ ಮಿಶಿಗನ್ ಎಂಬ ಸರೋವರವು ಸಂಪೂರ್ಣವಾಗಿ ಸಂಯುಕ್ತ ಸಂಸ್ಥಾನದೊಳಗೆ ಇರುತ್ತದೆ. ಮತ್ತು ಉಳಿದ ನಾಲ್ಕು ಸರೋವರಗಳ ಉತ್ತರ ಭಾಗವು ಕಾನಡಾದಲ್ಲಿ ಸಮಾವೇಶವಾಗುತ್ತಿದ್ದು, ದಕ್ಷಿಣಭಾಗವು ಸಂಯುಕ್ತ ಸಂಸ್ಥಾನದೊಳಗೆ ಬರುತ್ತದೆ. ಏರೀ ಮತ್ತು ಆಂಟಾರಿಯೋ ಸರೋವರಗಳನ್ನು ಜೋಡಿಸುವ ಹೊಳೆಯು ೧೬೪ ಅಡಿ ಎತ್ತರದ ಮೇಲಿಂದ ಬೀಳುತ್ತಿರುವದರಿಂದ ಅಲ್ಲಿ ಸುಪ್ರಸಿದ್ಧವಾದ ನಾಯಗಾರಾ ಎಂಬ ತಡಸಲವು ಉಂಟಾಗಿರುತ್ತದೆ. ಈ ಸರೋವರಗಳೊಳಗೆ ಒಂದರಿಂದ ಇನ್ನೊಂದರೊಳಗೆ ಹೋಗುವಾಗ ಮಾರ್ಗದಲ್ಲಿರುವ ತಡಸಲುಗಳನ್ನೂ ಇಕ್ಕಟ್ಟಾದ ಭಾಗಗಳನ್ನೂ ತಪ್ಪಿಸುವದಕ್ಕಾಗಿ ಕಾಲುವೆಗಳನ್ನು ಕಟ್ಟಿದ್ದಾರೆ. ಈ ಕಾಲುವೆಗಳ ಮಾರ್ಗದಿಂದ ಐದು ಸರೋವರಗಳಲ್ಲಿ ಹಡಗಗಳು ಹೋಗಿ ಬರುತ್ತಿರುತ್ತವೆ.

ಓಟಾವಾ ಹೊಳೆಯ ದಡದಲ್ಲಿರುವ **ಓಟಾವಾ** ಎಂಬ ಪಟ್ಟಣವು ಕಾನಡಾ ದೇಶದ ರಾಜಧಾನಿಯಾಗಿರುತ್ತದೆ. ಈ ಪಟ್ಟಣದ ರಚನೆಯು ಬಹು ಸುಂದರವಾಗಿದ್ದು ಅಲ್ಲಿ ಕಟ್ಟಿಗೆಯ ಗಿರಣಿಗಳಿರುತ್ತವೆ. ಇಲ್ಲಿ ಕಾನಡಾದ ಪಾರ್ಲಿಮೆಂಟಿನ ಸಭೆಯು ಕೂಡುತ್ತದೆ; ಮತ್ತು ಕಾನಡಾದ ಗವ್ಹರ್ನರ ಜನರಲನಾದರೂ ಇಲ್ಲಿಯೇ ಇರುತ್ತಾನೆ. ಟಾರಂಟೋ ಸರೋವರದ ದಂಡೆಯು ಮೇಲಿರುವ **ಟಾರಂಟೋ** ಎಂಬ ಪಟ್ಟಣವು ಆಂಟಾರಿಯೋ ಎಂಬ ಪ್ರಾಂತದ ರಾಜಧಾನಿಯಾಗಿರುತ್ತದೆ. ಮತ್ತು ಇದು ಮಾಂಟ್ರಿಯುಲದ ಕೆಳಗೆ ಕಾನಡಾದೊಳಗಿನ ಎರಡನೇ ದೊಡ್ಡ ಪಟ್ಟಣವಾಗಿರುತ್ತದೆ. ಈ ಪಟ್ಟಣವು ಕಾನಡಾದೊಳಗಿನ ಅತಿ ದಟ್ಟಾದ ಜನವಸತಿಯುಳ್ಳ ಪ್ರದೇಶದಲ್ಲಿದ್ದದರಿಂದಲೂ ಆಂಟಾರಿಯೋ, ಏರೀ, ಮತ್ತು ಹ್ಯೂರಾನ್ ಸರೋವರಗಳಿಂದ ಸುತ್ತಿದ ದ್ವೀಪಕಲ್ಪದಂಥ ಭಾಗದಲ್ಲಿ ನೆಲೆಸಿರುವದರಿಂದಲೂ ಅಲ್ಲಿ ಆಮದು ಆಗುವ ಸರಕುಗಳ ಬಹು ದೊಡ್ಡ ವ್ಯಾಪಾರವು ಸಾಗುತ್ತದೆ. ಈ ವ್ಯಾಪಾರವು ವಿಶೇಷವಾಗಿ ಸಂಯುಕ್ತ

ಸಂಸ್ಥಾನದ ಕೂಡ ನಡೆಯುತ್ತದೆ. ಇಲ್ಲಿ ಹಲವು ಕಾರಖಾನೆಗಳಾದರೂ ಇರುತ್ತವೆ.

ಪ್ರೆಅರೀ ಪ್ರದೇಶದೊಳಗಿನ ಪೂರ್ವ ಭಾಗದಲ್ಲಿರುವ **ವಿನಿಪೆಗ್** ಎಂಬ ಪಟ್ಟಣವು ಅತಿ ಮಹತ್ವದ್ದಾಗಿರುತ್ತದೆ. ಯಾಕಂದರೆ ಈ ಪ್ರದೇಶ ದೊಳಗಿನ ಗೋದಿಯು ಇಲ್ಲಿಂದ ಪೂರ್ವದ ಕಡೆಗೆ ಇರುವ ದಟ್ಟಾದ ವಸತಿಯ ಪ್ರಾಂತಗಳಿಗೂ ಪರದೇಶಗಳಿಗೂ ಕಳಿಸಲ್ಪಡುತ್ತದೆ. ವಿನಿಪೆಗ್‌ದಿಂದ ಸಾವಿರಾರು ಖಂಡಗ ಗೋದಿಯು ಸುಪೀರಿಯರ್ ಸರೋವರದ ದಂಡೆಯ ಮೇಲಿರುವ ಪೋರ್ಟ ವುಇಲ್ಯಮ್ ಮತ್ತು ಪೋರ್ಟ ಆರ್ಥರ ಎಂಬ ಬಂದರಗಳ ವರೆಗೆ ಉಗಿಬಂಡಿಗಳಿಂದ ಬರುತ್ತದೆ. ಮತ್ತು ಅಲ್ಲಿಂದ ಉಗಿ ಹಡಗಗಳಿಂದ ಸರೋವರಗಳ ಮಾರ್ಗವಾಗಿ ಮಾಂಟ್ರಿಯಲ್ ಬಂದರ ದೊಳಗಿಂದ ಯುರೋಪಕ್ಕೆ ಹೋಗುತ್ತದೆ. ಸುಮಾರು ೭೦ ವರುಷಗಳ ಹಿಂದೆ ಇಲ್ಲಿ ಒಂದು ಸಣ್ಣ ವ್ಯಾಪಾರದ ಪೇಟೆ ಇತ್ತು. ಅದೇ ಸ್ಥಳದಲ್ಲಿ ಈಗ ಎರಡು ಲಕ್ಷ ಜನವಸತಿಯುಳ್ಳ ಪಟ್ಟಣವು ನೆಲಿಸಿರುತ್ತದೆ. ಪೂರ್ವ ಮತ್ತು ಪಶ್ಚಿಮ ದಂಡೆಗಳನ್ನು ಜೋಡಿಸುವ ರೇಲುಮಾರ್ಗಗಳು ವಿನಿಪೆಗ್ ಪಟ್ಟಣದ ಮೇಲಿಂದ ಹೋಗುತ್ತವೆ. ಮತ್ತು ಇಲ್ಲಿಂದಲೇ ಪ್ರೆಅರೀ ಪ್ರದೇಶದೊಳಗಿನ ರೇಲುಮಾರ್ಗಗಳು ಒಡೆದಿರುತ್ತವೆ. ಇದಲ್ಲದೆ ಈ ಪಟ್ಟಣವು ಎರಡು ಹೊಳೆಗಳ ಸಂಗಮದ ಹತ್ತರ ಇದ್ದದರಿಂದ ಇದರ ಮಹತ್ವವು ಬೆಳೆದಿರುತ್ತದೆ. ಇದು ಜಗತ್ತಿನೊಳಗಿನ ಗೋದಿಯ ವ್ಯಾಪಾರದ ಅತಿ ದೊಡ್ಡ ಠಾಣ್ಯವಾಗಿರುತ್ತದೆ.

ಪಶ್ಚಿಮದ ದಂಡೆಯ ಮೇಲೆ ಎರಡು ದೊಡ್ಡ ಪಟ್ಟಣಗಳಿದ್ದು ಅವು ಉತ್ಕೃಷ್ಟವಾದ ಬಂದರಗಳೂ ಆಗಿರುತ್ತವೆ. ಅವುಗಳಲ್ಲಿ **ವ್ಹ್ಯಾಂಕೂವ್ಹರ** ಎಂಬ ಬಂದರವು ಬಹಳ ಅನುಕೂಲವಾಗಿರುತ್ತದೆ. ಮತ್ತು ಅಲ್ಲಿಂದ ಪೆಸಿಫಿಕ ಮಹಾ ಸಾಗರದೊಳಗಿಂದ ಜಪಾನ, ಚೀನ, ಆಸ್ಟ್ರೇಲಿಯಾ ಮುಂತಾದ ದೇಶಗಳ ಸಂಗಡ ಮತ್ತು ಅಮೇರಿಕೆಯ ಪಶ್ಚಿಮ ದಂಡೆಯ ಮೇಲಿರುವ ಬಂದರಗಳ ಸಂಗಡ ವ್ಯಾಪಾರವು ಸಾಗುತ್ತದೆ. ಕಾನಡಾ ದೇಶ ದೊಳಗಿನ ಪೂರ್ವ-ಪಶ್ಚಿಮ ದಂಡೆಗಳನ್ನು ಜೋಡಿಸುವ ರೇಲುಮಾರ್ಗಗಳು ಇಲ್ಲಿಯ ವರೆಗೆ ಬಂದು ನಿಲ್ಲುತ್ತವೆ.

**ಕಾನಡಾ ದೇಶದ ಬಗ್ಗೆ ಹೆಚ್ಚಿನ ಸಂಗತಿಗಳು:**— ಕಾನಡಾ ದೇಶದ ವಿಸ್ತಾರವು ಭಾರತ ದೇಶದ ಸುಮಾರು ಮೂರುಪಟ್ಟಿನಷ್ಟಿದ್ದರೂ ಅದರೊಳಗಿನ ಜನವಸತಿಯು ಮಾತ್ರ ಭಾರತದ ಜನವಸತಿಯ ೧/೨೮ದಷ್ಟು ಅಂದರೆ ಒಂದೂಕಾಲು ಕೋಟಿ ಇರುತ್ತದೆ. ಈ ಜನವಸತಿಯು ಸದ್ಯಕ್ಕೆ ದಕ್ಷಿಣ ಭಾಗದೊಳಗಿಂದ ಹೋಗಿರುವ ರೇಲುಮಾರ್ಗಗಳಗುಂಟ ಇರುವ ಕಿರಿಯಗಲಾದ ಪಟ್ಟಿಯಲ್ಲಿ ಇರುವದು. ಅದರೊಳಗೂ ಪೂರ್ವದ ಕಡೆಗಿರುವ ಸಮುದ್ರದ ಹತ್ತರದ ಪ್ರಾಂತದೊಳಗೆ ಜನವಸತಿಯು ಮೊಟ್ಟಮೊದಲು ಆರಂಭವಾಗಿ, ಸೆಂಟಲಾರೆನ್ಸ ಹೊಳೆಯ ದಂಡೆಗುಂಟ ಅದು ಪಶ್ಚಿಮದ ಕಡೆಗೆ ಪಸರಿಸುತ್ತ ಹೋಯಿತು. ಮಹಾ ಸರೋವರಗಳ ದಂಡೆಯ ಮೇಲೆ ಜನವಸತಿಯಾದ ನಂತರ ಕೆಲವು ಕಾಲದ ವರೆಗೆ ಅದರ ಹೆಜ್ಜೆಯು ಮುಂದೆ ಬೀಳಲಿಲ್ಲ. ಸುಮಾರು ೬೦ ವರುಷಗಳಾಚೆಯಲ್ಲಿ ಪೂರ್ವ ಪಶ್ಚಿಮ ದಂಡೆಗಳನ್ನು ಜೋಡಿಸುವ ಕನೇಡಿಯನ್ ಪೆಸಿಫಿಕ್ ರೇಲು ಮಾರ್ಗವು ಆದ ನಂತರ ಪಶ್ಚಿಮದ ಕಡೆಯ ಭಾಗದೊಳಗೆ ಜನವಸತಿಯು ಭರದಿಂದ ಬೆಳೆಯುತ್ತ ಹೋಯಿತು. ಯಾಕಂದರೆ ಪಶ್ಚಿಮದ ಕಡೆಯ ಪ್ರೇರೀ ಭೂಮಿಯು ಫಲವತ್ತಾಗಿದ್ದರೂ ಹೊರಗಿನ ಜಗತ್ತಿನ ಕೂಡ ಯಾವದೇ ತರದ ಸಂಬಂಧವಿಲ್ಲಾದ್ದರಿಂದ ಹೊರಗಿನಿಂದ ಬರುವ ಸರಕುಗಳಿಗೆ ಮಾರಾಟದ ಅನುವು ಇಲ್ಲಾದ್ದರಿಂದಲೂ ಜನವಸತಿಯು ಬೆಳೆಯಲಿಲ್ಲ. ನಿರ್ಜನವಾಗಿದ್ದ ಸ್ಥಳಗಳಲ್ಲಿ ಹೋಗಿ ಬರೇ ಒಕ್ಕಲತನವನ್ನು ಮಾಡಲು ತಾವೇ ಯಾರೂ ಸಿದ್ಧರಾಗುವದಿಲ್ಲ; ಆದ್ದರಿಂದ ಕಾನಡಾ ದೇಶದ ಜನವಸತಿಯ ಏಳ್ಗೆಯ ನಿಜವಾದ ಆರಂಭವು ಅಲ್ಲಿ ರೇಲುಮಾರ್ಗಗಳನ್ನು ಕಟ್ಟಿದಂದಿನಿಂದ ಆಯಿತೆಂದು ಹೇಳಲು ಪ್ರತ್ಯವಾಯವಿಲ್ಲ.

ನಾಲ್ವತ್ತು ವರ್ಷಗಳ ಹಿಂದೆ ಪ್ರೇರೀ ಪ್ರದೇಶದೊಳಗಿನ ಜನಸಂಖ್ಯೆಯು ಐದು ಲಕ್ಷ ಸಹ ಇದ್ದಿಲ್ಲ. ಆದರೆ ಈಗ ಅದು ೨೫ ಲಕ್ಷಕ್ಕೆ ಮೀರಿರುತ್ತದೆ. ಈ ರೀತಿಯಾಗಿ ಜನವಸತಿಯು ಬೆಳೆಯಲಿಕ್ಕೆ ಕಾರಣವೇನಂದರೆ ಕಾನಡಾ ದೇಶದ ಸರಕಾರವು ಪರದೇಶಗಳ ಜನರಿಗೆ ತೀರ ಕಡಿಮೆ ತೆರಿಗೆಯನ್ನು ತೆಗೆದುಕೊಂಡು ಪ್ರೇರೀ ಪ್ರಾಂತದೊಳಗಿನ ಭೂಮಿಯನ್ನು ಸಾಗುಮಾಡಲಿಕ್ಕೆ ಕೊಟ್ಟು, ಜನವಸತಿಯನ್ನು ಬೆಳಿಸಲಿಕ್ಕೆ ಸಹಾಯ ಮಾಡುತ್ತದೆ. ಪ್ರತಿ ವರುಷ ಸುಮಾರು ೧॥ ಲಕ್ಷ ಜನರು ಯುರೋಪದಿಂದ ಅಲ್ಲಿ

ಮನೆ ಮಾಡಿಕೊಂಡಿರಲಿಕ್ಕೆ ಹೋಗುತ್ತಾರೆ. ಅವರೊಳಗೆ ಸುಮಾರು ೩೦ ಸಾವಿರ ಜನರು ಬ್ರಿಟಿಶ ನಡುಗಡ್ಡೆಗಳಿಂದ ಬರುತ್ತಾರೆ. ಬ್ರಿಟಿಶ ರಾಷ್ಟ್ರ ಕೂಟದ ಮಹತ್ವವು ಇದರಲ್ಲಿಯೇ ಇರುತ್ತದೆ. ಬ್ರಿಟಿಶ ನಡುಗಡ್ಡೆಗಳೊಳಗಿನ ಬೆಳೆಯುತ್ತಿರುವ ಜನವಸತಿಗೆ ಪರದೇಶಗಳಿಗೆ ಹೋಗಿ ವಸಾಹತುಗಳನ್ನು ಮಾಡಲಿಕ್ಕೂ ಉದ್ಯೋಗ-ವ್ಯವಸಾಯಗಳನ್ನು ಮಾಡಿ ಹೆಸರು ಪಡೆಯಲಿಕ್ಕೂ ಆಸ್ಪದವಿರುತ್ತದೆ. ಇಂಗ್ಲಂಡದೊಳಗೆ ಪ್ರೌಢ ವಿದ್ಯಾರ್ಥಿಗಳಿಗೆ ಒಕ್ಕಲತನದ ಶಿಕ್ಷಣವನ್ನು ಕೊಟ್ಟು ಅವರನ್ನು ಇಲ್ಲಿ ಕಳಿಸುತ್ತಾರೆ. ಹುಡಿಗೆಯರು ಸಹ ಇಲ್ಲಿ ಕೆಲಸ ಮಾಡಲು ತಕ್ಕವರಾಗಬೇಕೆಂದು, ಅವರಿಗೆ ಯೋಗ್ಯವಾದ ಶಿಕ್ಷಣವನ್ನು ಕೊಟ್ಟು ಕಳಿಸುತ್ತಾರೆ.

ಕಾನಡಾ ದೇಶದ ಏಳ್ಗೆಯು ಲೋಹಮಾರ್ಗಗಳಿಂದ ಆಯಿತೆಂದು ಮೇಲೆ ಹೇಳಿದೆ. ಹಳೇ ದೇಶಗಳಲ್ಲಿ ಲೋಹಮಾರ್ಗಗಳನ್ನು ಕಟ್ಟುವಾಗ ಜನವಸತಿಯು ದಟ್ಟಾಗಿರುವ ಭಾಗಗಳನ್ನು ಕಂಡುಕೊಂಡು, ಅವುಗಳ ಮಾರ್ಗಗಳನ್ನು ನಿಶ್ಚಯಿಸುತ್ತಿದ್ದರು. ಆದರೆ ಕಾನಡಾದಂಥ ಹೊಸದೇಶಗಳಲ್ಲಿ ಮೊಟ್ಟ ಮೊದಲು ಲೋಹಮಾರ್ಗಗಳನ್ನು ಕಟ್ಟಿದರು. ಆ ಮೇಲೆ ಜನರು ಅವುಗಳ ಸುತ್ತಮುತ್ತಲು ಹೋಗಿ ವಾಸಮಾಡಿದರು. ಕಾನಡಾದೊಳಗೆ ಮುಖ್ಯವಾದ ಎರಡು ಲೋಹಮಾರ್ಗಗಳಿರುತ್ತವೆ. **ಕನೇಡಿಯನ್ ಪಾಸಿಫಿಕ್ ರೇಲು** ಮಾಂಟ್ರಿಯಲದಿಂದ ವ್ಹಂಕೂವ್ಹರದ ವರೆಗೆ ಹೋಗುತ್ತದೆ. ಮತ್ತು **ಕನೇಡಿಯನ್ ನೆಶನಲ್** ಎಂಬ ಎರಡನೇ ರೇಲುದಾರಿಯು ನ್ಯೂಬ್ರನ್ಸ್ವಿಕ ಪ್ರಾಂತಮೊಳಗಿನ ಮಾಂಗ್ಟನ ಎಂಬ ಪಟ್ಟಣದಿಂದ ವ್ಹಂಕೂವ್ಹರ ಪಟ್ಟಣದ ವರೆಗೆ ಹೋಗಿರುತ್ತದೆ. ಎರಡೂ ರೇಲುಮಾರ್ಗಗಳು ವಿನಿಪೆಗ್ ಪಟ್ಟಣದ ಮೇಲಿಂದ ಹೋಗುತ್ತವೆ. ಮತ್ತು ಅವುಗಳಿಗೆ ಬಂದು ಕೂಡುವ ಬೇರೆ ರೇಲು ಮಾರ್ಗಗಳಾದರೂ ಇರುತ್ತವೆ. ಎಲ್ಲಕ್ಕೂ ಹೆಚ್ಚು ಅಂತರವು ಹಲೀಫ್ಯಾಕ್ಸದಿಂದ ವ್ಹಂಕೂವ್ಹರದ ವರೆಗೆ ಇದ್ದು, ಅದು ಸುಮಾರು ನಾಲ್ಕು ಸಾವಿರ ಮೈಲು ಇರುತ್ತದೆ.

ಇತ್ತೀಚೆಗೆ ಕಾನಡಾದೇಶದಲ್ಲಿಯ ಎಲ್ಲ ಮುಖ್ಯ ಪಟ್ಟಣಗಳು ವಿಮಾನ ಮಾರ್ಗಗಳಿಂದ ಜೋಡಿಸಲ್ಪಟ್ಟಿರುವವು.

೧೮ನೇ ಪ್ರಕರಣ

# ವೆಸ್ಟ ಇಂಡೀಜ ದ್ವೀಪಗಳು

ಈ ದ್ವೀಪಗಳ ಮಾಲಿಕೆಯು ಮಧ್ಯ ಅಮೇರಿಕೆಯ ಪೂರ್ವಕ್ಕೆ ಅಂದರೆ ಉತ್ತರ ಅಮೇರಿಕೆಯೊಳಗಿನ ಫ್ಲಾರಿಡಾ ಎಂಬ ದ್ವೀಪಕಲ್ಪದಿಂದ ದಕ್ಷಿಣ ಅಮೇರಿಕೆಯ ದಂಡೆಯ ವರೆಗೆ ಹಬ್ಬಿರುತ್ತದೆ. ಈ ಮಾಲಿಕೆಯ ಉತ್ತರದ ತುದಿಯಲ್ಲಿ ಬಹಾಮಾ ಎಂಬ ನಡುಗಡ್ಡೆಗಳೂ ದಕ್ಷಿಣದ ತುದಿಯಲ್ಲಿ ತ್ರಿನಿದಾದ ಎಂಬ ನಡುಗಡ್ಡೆಯೂ ಇರುತ್ತವೆ. ಬಹಾಮಾ ನಡುಗಡ್ಡೆಗಳಲ್ಲಿಯ ಒಂದು ದ್ವೀಪದ ಮೇಲೆ ಮೊಟ್ಟಮೊದಲು ಕೋಲಂಬಸನು ಹೋದನು. ತಾನು ಹಿಂದುಸ್ತಾನಕ್ಕೆ ಮುಟ್ಟಿದೆನೆಂದು ತಿಳಿದು, ಅವುಗಳಿಗೆ ಆತನು 'ಇಂಡೀಜ' ಎಂಬ ಹೆಸರನ್ನು ಕೊಟ್ಟನು. ಆದರೆ ಹಿಂದುಸ್ತಾನವು ಯುರೋಪ ಖಂಡದ ಪೂರ್ವದಿಕ್ಕಿಗೆ ಇರುತ್ತದೆಂದು ತಿಳಿದ ಮೇಲೆ ಈ ದ್ವೀಪಗಳಿಗೆ 'ವೆಸ್ಟ ಇಂಡೀಜ' ಎಂತಲೂ ಹಿಂದುಸ್ತಾನಕ್ಕೆ 'ಈಸ್ಟ ಇಂಡೀಜ' ಎಂತಲೂ ಕರೆಯ ಹತ್ತಿದರು. ಈ ತಪ್ಪಿನಿಂ ಉತ್ತರ ಅಮೇರಿಕೆಯೊಳಗಿನ ಮೂಲ ನಿವಾಸಿಗಳಿಗೆ 'ರೆಡ್ ಇಂಡಿಯನ್ಸ' ಎಂಬ ಹೆಸರು ಕೊಡಲ್ಪಟ್ಟಿತು.

ವೆಸ್ಟ ಇಂಡೀಜ ದ್ವೀಪಗಳಲ್ಲಿ ಕೆಲವು ದ್ವೀಪಗಳು ಜ್ವಾಲಾಮುಖಿಗಳಿಂ ಮುಂಟಾಗಿದ್ದು, ಬೇರೆ ಕೆಲವು ನಡುಗಡ್ಡೆಗಳು ಹವಳದ ಹುಳಗಳಿಂದಾಗಿರುತ್ತವೆ. ಇಲ್ಲಿ ಪ್ರಾಚೀನಕಾಲದಲ್ಲಿ ದಕ್ಷಿಣ ಮತ್ತು ಉತ್ತರ ಅಮೇರಿಕೆಗಳನ್ನು ಜೋಡಿಸುವ ಪರ್ವತಾವಳಿಯು ಇತ್ತು. ಅದು ಕಾಲಾಂತರದಿಂದ ಸಮುದ್ರದ ಕೆಳಗೆ ಕುಸಿಬಿದ್ದು ಅದರ ಉನ್ನತವಾದ ಶಿಖರಗಳು ಮಾತ್ರ ಇಂದಿಗೆ ದ್ವೀಪಗಳ ರೂಪದಿಂದ ನಮಗೆ ಕಾಣುತ್ತವೆ.

ಈ ದ್ವೀಪಗಳು ವಿಷುವ-ವೃತ್ತ ಪ್ರದೇಶದ ಹತ್ತರ ಇರುವದರಿಂದ ಇಲ್ಲಿಯ ಹವೆಯು ಉಷ್ಣವಾಗಿದ್ದರೂ ಈಶಾನ್ಯದ ಕಡೆಯಿಂದ ಬೀಸುವ ತಂಪು ಗಾಳಿಗಳಿಂದ ಇಲ್ಲಿಯ ಉಷ್ಣತಾಮಾನವು ಕಡಿಮೆಯಾಗಿರುತ್ತದೆ. ಇಲ್ಲಿ ಬೇಸಿಗೆಯಲ್ಲಿ ಜೂನ ತಿಂಗಳಿನಿಂದ ಡಿಸೆಂಬರದ ವರೆಗೆ ವಿಪುಲವಾಗಿ ಮಳೆಯಾಗುತ್ತದೆ. ಎಲ್ಲ ಕಡೆಯಲ್ಲಿಯ ಭೂಮಿಯು ಬೆಳೆಯುಳ್ಳದ್ದಿರುವ ದರಿಂದ ಇಲ್ಲಿ ಉಷ್ಣ ಕಟಿಬಂಧದೊಳಗೆ ಬೆಳೆಯುವ ಎಲ್ಲ ಪ್ರಕಾರದ ಹುಟ್ಟುವಳಿಗಳು ಬೆಳೆಯುತ್ತವೆ.

ಬಹಾಮಾ ನಡುಗಡ್ಡೆಗಳು ಬ್ರಿಟಿಶರ ವಶದಲ್ಲಿರುತ್ತವೆ. ಅಲ್ಲಿರುವ ಉತ್ಕೃಷ್ಟವಾದ ಹವೆಯ ಸಲುವಾಗಿ ಎಷ್ಟೋ ಅಮೇರಿಕನ್ನರು ಅಲ್ಲಿ ಹೋಗುತ್ತಿರುತ್ತಾರೆ. **ನಸಾ** ಎಂಬ ಮುಖ್ಯ ಪಟ್ಟಣವು ಒಂದು ದ್ವೀಪದ ಮೇಲಿರುತ್ತದೆ. ಈ ನಡುಗಡ್ಡೆಯೊಳಗಿನ ಜನರ ಮುಖ್ಯ ಉದ್ಯೋಗವು ಸ್ಪಂಜವನ್ನು ತೆಗೆಯುವದಿರುತ್ತದೆ. ತಳದಲ್ಲಿ ಕಾಜು ಕೂಡ್ರಿಸಿದ ಹಡಗ ದೊಳಗಿಂದ ಸಮುದ್ರದ ತಳದಲ್ಲಿರುವ ಸ್ಪಂಜವು ಸ್ಪಷ್ಟವಾಗಿ ಕಾಣುತ್ತದೆ. ಸ್ಪಂಜವು ಅರ್ಧ ಮರ್ಧ ಪ್ರಾಣಿವರ್ಗಕ್ಕೂ ಅರ್ಧ ಮರ್ಧ ವನಸ್ಪತಿ ವರ್ಗಕ್ಕೂ ಸೇರಿರುತ್ತದೆ. ಇತ್ತಲಾಗಿ ಸ್ಪಂಜದ ಸಣ್ಣ ಸಣ್ಣ ತುಣುಕುಗ ಳನ್ನು ಸಮುದ್ರದ ನೀರಿನೊಳಗೆ ಇಟ್ಟು ಅವುಗಳನ್ನು ಬೆಳೆಸುತ್ತಾರೆ.

ವೆಸ್ಟ ಇಂಡೀಜ ದ್ವೀಪಗಳಲ್ಲಿ ಕ್ಯೂಬಾ ಎಂಬ ನಡುಗಡ್ಡೆಯು ಎಲ್ಲಕ್ಕೂ ದೊಡ್ಡದಾಗಿರುತ್ತದೆ. ಅದರ ದಕ್ಷಿಣಕ್ಕೆ ೯೦ ಮೈಲಿನ ಮೇಲೆ ಬ್ರಿಟಿಶರ ವಶದಲ್ಲಿರುವ **ಜಮೇಕಾ** ಎಂಬ ನಡುಗಡ್ಡೆಯು ಇರುತ್ತದೆ. ಯುರೋಪದಿಂದ ಪನಾಮಾ ಕಾಲುವೆಯ ಕಡೆಗೆ ಹೋಗುವ ಮಾರ್ಗದ ಮೇಲೆ ಈ ದ್ವೀಪವು ಇರುವದರಿಂದ ಇಲ್ಲಿ ಹಡಗುಪಡೆಯನ್ನು ಇಟ್ಟಿರುತ್ತಾರೆ. ೧೬೫೫ ರಲ್ಲಿ ಇದು ಸ್ಪನಿಶ್ ಜನರ ಕೈಯೊಳಗಿಂದ ಬ್ರಿಟಿಶರ ಕೈಸೇರಿತು. ಇಲ್ಲಿಯ ಜನ ಸಂಖ್ಯೆಯು ೧೨॥ ಲಕ್ಷ ಇದ್ದು, ಅದರೊಳಗೆ ೨೦ ಸಾವಿರ ಹಿಂದೀ ಜನರಿರುತ್ತಾರೆ. ಕಬ್ಬಿನಿಂದ ತಯಾರಿಸಿದ ಸಕ್ಕರೆಯೂ, 'ರಮ್' ಎಂಬ ಜಾತಿಯ ಮದ್ಯವೂ ಇಲ್ಲಿಯ ಮುಖ್ಯ ಹುಟ್ಟುವಳಿಗಳಾಗಿರುತ್ತವೆ. ದಿನ್ನೆಗಳ ಮೇಲೆ ಕಾಫೀಗಿಡಗಳನ್ನು ಬೆಳೆಸುತ್ತಾರೆ. ಅಮೇರಿಕೆಗೆ ಮತ್ತು ಯುರೋಪ ಖಂಡಕ್ಕೆ ಕಳಿಸುವದರ ಸಲುವಾಗಿ ಹಣ್ಣುಗಳನ್ನು

ಬಹಳವಾಗಿ ಬೆಳಿಸುತ್ತಾರೆ. ಬಾಳೆ, ಅನನಸ, ಕಿತ್ತಳೆ ಮುಂತಾದ ಹಣ್ಣು ಹಂಪಲುಗಳು **ಕಿಂಗ್ಸ್ಟನ್** ಎಂಬ ಮುಖ್ಯ ಪಟ್ಟಣದ ಹತ್ತರಿರುವ ಪೋರ್ಟ ರಾಯಲ್ ಎಂಬ ಬಂದರದಿಂದ ಕಳಿಸಲ್ಪಡುತ್ತವೆ. ತೋಟಗಳಲ್ಲಿ ದುಡಿ ಯುವದಕ್ಕೋಸ್ಕರ ಆಫ್ರಿಕೆಯಿಂದ ತರಲ್ಪಟ್ಟ ನಿಗ್ರೋ ಜನರ ವಂಶಜರು ಎಲ್ಲ ಕಡೆಯಲ್ಲಿಯೂ ಕಂಡುಬರುತ್ತಾರೆ.

ದಕ್ಷಿಣದ ಕಡೆಗಿರುವ ಲೆಸರ್ ಅಂಟಲೀಜ ಎಂಬ ಹೆಸರಿನ ಒಂದು ಸಣ್ಣ ಸಣ್ಣ ದ್ವೀಪಗಳ ಸಮೂಹವಿರುತ್ತದೆ. ಅವುಗಳೊಳಗಿನ ಹಲವು ನಡು ಗಡ್ಡೆಗಳು ಬ್ರಿಟಿಶರ ವಶದಲ್ಲಿರುತ್ತವೆ. ಈ ಯಾವತ್ತೂ ನಡುಗಡ್ಡೆಗಳ ಪರಿಸ್ಥಿತಿಯೂ, ಹುಟ್ಟುವಳಿಗಳೂ ಜಮೇಕಾ ನಡುಗಡ್ಡೆಗಳಂತೆಯೇ ಇರುತ್ತವೆ. ಅವುಗಳೊಳಗಿನ **ಬಾರ್ಬಾಡೋಜ** ಎಂಬ ದ್ವೀಪದ ಬಗ್ಗೆ ಕೆಲವು ಸಂಗತಿಗಳನ್ನು ಲಕ್ಷದಲ್ಲಿಡತಕ್ಕದ್ದು. ಈ ನಡುಗಡ್ಡೆಯು ಹವಳದ ಬಂಡೆಗಳಿಂದ ನಿರ್ಮಾಣವಾಗಿರುತ್ತದೆ. ಆದ್ದರಿಂದ ಮಾರ್ಗ, ಮನೆಮಾರು, ಮುಂತಾದವುಗಳೆಲ್ಲ ತರತರದ ಬಣ್ಣಗಳುಳ್ಳ ಹೊಳೆಯುವಂಥ ಕಲ್ಲುಗಳಿಂ ದಲೇ ಕಟ್ಟಲ್ಪಟ್ಟಿರುತ್ತವೆ. ಇದರಿಂದ ಮಾರ್ಗಗಳ ಮೇಲೆಲ್ಲ ನೆರಳನ್ನು ಮಾಡಬೇಕಾಗುತ್ತದೆ. ಸಕ್ಕರೆ, ಕಾಕಂಬಿ, ರಮ್ ಮುಂತಾದವುಗಳು ಇಲ್ಲಿಂದ ರಫ್ತಾಗುತ್ತವೆ. ಈ ದ್ವೀಪದೊಳಗೆ ೨ ಲಕ್ಷ ಜನರು ವಾಸಿಸು ತ್ತಾರೆ. ಜನವಸತಿಯು ಬಹು ದಟ್ಟಾಗಿರುವದು. ಒಂದು ಚೌರಸು ಮೈಲಿಗೆ ಜನದಟ್ಟಣಿಯ ಪ್ರಮಾಣವು ೧೨೦೦ ರ ಮೇಲೆ ಬೀಳುತ್ತದೆ.

ದಕ್ಷಿಣ ಅಮೇರಿಕೆಯ ದಂಡೆಯು ಹತ್ತರ **ತ್ರಿನಿದಾದ** ಎಂಬ ಚೌಕೋ ನಾಕೃತಿಯ ದ್ವೀಪವಿರುತ್ತದೆ. ಇದರೊಳಗಿನ ಭೂಮಿಯು ಬಹಳ ಬೆಳೆ ಯುಳ್ಳದ್ದಿದ್ದು, ಜನವಸತಿಯಾದರೂ ಬಹಳ ದಟ್ಟಾಗಿರುತ್ತದೆ. ಇಲ್ಲಿಯ ಹವೆ ಮತ್ತು ಹುಟ್ಟುವಳಿಗಳು ಸಿಲೋನ ದ್ವೀಪದಂತೆಯೇ ಇರುವದರಿಂದ ಇಲ್ಲಿ ಹಿಂದೀ ಜನರು ಬಂದು ವಾಸಿಸಿದ್ದಾರೆ. ಕೋಕೋ, ತೆಂಗು ಮತ್ತು ಸಕ್ಕರೆ ಇವು ಇಲ್ಲಿಯ ಮುಖ್ಯವಾದ ಹುಟ್ಟುವಳಿಗಳು. ಈ ದ್ವೀಪದೊಳಗೆ ಡಾಂಬರಿನ (ಅಸ್ಫಾಲ್ಟ) ಒಂದು ಕೆರೆಯು ಇರುತ್ತದೆ. ಅದರೊಳಗಿನ ಮೇಲಿನ ತರವು ಗಟ್ಟಿಯಾಗಿರುತ್ತದೆ. ಮಾರ್ಗಗಳನ್ನು ತಯಾರಿಸುವದ ಕ್ಕಾಗಿ ಈ ಡಾಂಬರವನ್ನು ಲಾಬ್ರಿಯ ಎಂಬ ಬಂದರದಿಂದ ಪರದೇಶ

ಗಳಿಗೆ ಕಳಿಸಿಕೊಡುತ್ತಾರೆ. **ಪೋರ್ಟ್ ಆಫ ಸ್ಪೇನ** ಎಂಬುದು ಮುಖ್ಯ ವಾದ ಪಟ್ಟಣವಾಗಿರುವದಲ್ಲದೆ ಉತ್ಕೃಷ್ಟವಾದ ಬಂದರವೂ ಆಗಿರುತ್ತದೆ.

**ಬ್ರಿಟಿಶ ಗಿಯಾನಾ** ಎಂಬುದು ನಡುಗಡ್ಡೆಯಾಗಿರದೆ ದಕ್ಷಿಣ ಅಮೇರಿಕೆಯ ಉತ್ತರ ದಂಡೆಯ ಮೇಲಿನದೊಂದು ಪ್ರದೇಶವಾಗಿರುತ್ತದೆ. ಅದು ವಿಷುವ-ವೃತ್ತದ ಹತ್ತರ ಇರುವದರಿಂದ ಅದರ ಬಹು ದೊಡ್ಡ ಭಾಗವು ದಟ್ಟವಾದ ಅರಣ್ಯಗಳಿಂದ ತುಂಬಿರುತ್ತದೆ. ಇಲ್ಲಿ ವಜ್ರ ಮತ್ತು ಬಂಗಾರದ ಖಣಿಗಳಿದ್ದು, ತೆಂಗು, ಅಕ್ಕಿ ಮತ್ತು ಬುಂದುಗಳು ಇಲ್ಲಿಯ ಮುಖ್ಯವಾದ ಹುಟ್ಟುವಳಿಗಳಾಗಿರುತ್ತವೆ. ಇಲ್ಲಿಯ ಜನಸಂಖ್ಯೆಯು ಮೂರು ಲಕ್ಷ ಇದ್ದು ಅದರೊಳಗೆ ೧॥ ಲಕ್ಷ ಜನರು ಹಿಂದೀಯರಾಗಿರುತ್ತಾರೆ. **ಜಾರ್ಜ ಟಾವುನ್** ಎಂಬುದು ಮುಖ್ಯವಾದ ಪಟ್ಟಣವಾಗಿರುತ್ತದೆ.



Paul Popper Ltd.

ಬ್ರಿಟಿಶ ಗಿಯಾನಾದೊಳಗಿನ ನಿವಾಸಿಗಳು

೧೯ನೇ ಪ್ರಕರಣ

# ಆಫ್ರಿಕಾ ಖಂಡದೊಳಗಿನ ಬ್ರಿಟಿಶ ರಾಷ್ಟ್ರಕೂಟದಲ್ಲಿಯ ಪ್ರದೇಶಗಳು

ಆಫ್ರಿಕಾದೇಶದಲ್ಲಿಯ ಪ್ರದೇಶಗಳನ್ನು ನೋಡಿದರೆ ಕೇಪದಿಂದ ಇಜಿಪ್ತದ ವರೆಗಿನ ಪೂರ್ವಭಾಗದೊಳಗೆ ಹಬ್ಬಿದ ಒಂದು ಉದ್ದವಾದ ಪಟ್ಟಿಯೇ ನಮ್ಮ ದೃಷ್ಟಿಗೆ ಬೀಳುವದು. ಇದಲ್ಲದೆ ಪಶ್ಚಿಮ ದಂಡೆಯ ಮೇಲಿನ ಗ್ಯಾಂಬಿಯಾ ಮುಂತಾದ ಪ್ರದೇಶಗಳಾದರೂ ಬ್ರಿಟಿಶ ಒಕ್ಕೂಟದಲ್ಲಿ ಗಣಿಸಲ್ಪಡುವವು. ಇದರಿಂದ ಆಫ್ರಿಕಾ ಖಂಡದೊಳಗಿರುವ ಬ್ರಿಟಿಶ ಒಕ್ಕೂಟಕ್ಕೆ ಸೇರಿದ ಎಲ್ಲ ಪ್ರದೇಶಗಳಲ್ಲಿ ಎಲ್ಲ ತರದ ಸ್ವಾಭಾವಿಕ ವಿಭಾಗಗಳು ಸಮಾವೇಶವಾಗಿರುತ್ತವೆಂಬುದು ಕಂಡುಬರುತ್ತದೆ. ಆಫ್ರಿಕೆಯ ವೈಶಿಷ್ಟ್ಯವೇನಂದರೆ ಅದರ ಮಧ್ಯಭಾಗದೊಳಗಿಂದ ವಿಷುವ-ವೃತ್ತವೂ ಮತ್ತು ಉತ್ತರ ಮತ್ತು ದಕ್ಷಿಣ ಭಾಗದೊಳಗಿಂದ ಕರ್ಕ ಮತ್ತು ಮಕರ-ವೃತ್ತಗಳೂ ಅಡ್ಡವಾಗಿ ಹೋದದ್ದು ಕಂಡುಬರುತ್ತದೆ. ಇದರಿಂದ ಈ ಖಂಡದ ಬಹು ದೊಡ್ಡ ಭಾಗವು ಉಷ್ಣ ಕಟಿಬಂಧದೊಳಗೆ ಬರುತ್ತದೆ. ಮತ್ತು ಖಂಡದ ಉತ್ತರದ ಸೀಮೆಯು ವಿಷುವ-ವೃತ್ತದಿಂದ ದೂರಿರುವಷ್ಟೇ ಅದರ ದಕ್ಷಿಣದ ಸೀಮೆಯಾದರೂ ವಿಷುವ-ವೃತ್ತದಿಂದ ದೂರದಲ್ಲಿರುತ್ತದೆ. ಆಫ್ರಿಕೆಯ ಉತ್ತರ ಭಾಗವು ಬಹಳ ಅಗಲವಾಗಿದ್ದು ಅದರೊಳಗಿಂದ ಕರ್ಕ-ವೃತ್ತವು ಹಾಯ್ದಿರುತ್ತದೆ. ಈ ಭಾಗದೊಳಗೆ ಮಳೆಯಾಗದ್ದರಿಂದ ಜಗತ್ತಿನೊಳಗಿನ ಅತಿ ದೊಡ್ಡ ಮರುಭೂಮಿಯು (ಉಸುಬಿನ ಅರಣ್ಯವು) ಅಲ್ಲಿ ಕಂಡುಬರುತ್ತದೆ. ಮಕರ-ವೃತ್ತದ ಎರಡೂ ಬದಿಯಲ್ಲಿ ಕಲಹಾರೀ ಎಂಬ ಸಣ ಪ್ರದೇಶವಿರುತ್ತದೆ. ವಿಷುವ-ವೃತ್ತದ ಎರಡೂ ಮಗ್ಗಲಿಗೆ, ಅಂದರೆ

ಕಾಂಗೋ ಹೊಳೆಯ ಕೊಳ್ಳದಲ್ಲಿಯೂ ಗಿನೀ ಆಖಾತಕ್ಕೆ ಹೊಂದಿಕೊಂಡಿರುವ ದಂಡೆಯ ಮೇಲೆಯೂ ಮಳೆಯು ಹೆಚ್ಚು ಮತ್ತು ಹನ್ನೆರಡೂ ತಿಂಗಳು ಬೀಳುವದರಿಂದ ಅಲ್ಲಿ ದಟ್ಟಾದ ಹಳವುಗಳುಂಟಾಗಿರುತ್ತವೆ. ಆಫ್ರಿಕೆಯ ಉಳಿದ ಭಾಗವೆಲ್ಲ ಹುಲ್ಲುಗಾವಲುಗಳ ಭೂಮಿಯಿಂದ ವ್ಯಾಪಿಸಿರುತ್ತದೆ.

ಆಫ್ರಿಕಾ ಖಂಡವು ವಿಸ್ತಾರವಾದ ಮತ್ತು ಅವಿಚ್ಛಿನ್ನವಾದದ್ದೊಂದು ತಪ್ಪಲು ಭೂಮಿಯಾಗಿರುತ್ತದೆ. ಆದ್ದರಿಂದ ಸಮುದ್ರದ ಸಮೀಪಕ್ಕಿರುವ ಅಂತರ್ಭಾಗದ ಮೇಲೆ ವಿಶೇಷವಾಗಿ ಪರಿಣಾಮವಾಗುವದಿಲ್ಲ. ಅದರಲ್ಲಿ ಮಳೆಯ ಪ್ರಮಾಣವಾದರೂ ತೀರ ಕಡಿಮೆಯಾಗಿರುತ್ತದೆ. ಆದರೆ ತಪ್ಪಲಿನ ಎತ್ತರದಿಂದ ಅಲ್ಲಿ ತಕ್ಕ ಮಟ್ಟಿಗೆ ಸೌಮ್ಯವಾದ ಹವಾಮಾನವು ಕಂಡುಬರುತ್ತದೆ. ಇದೇ ಕಾರಣದಿಂದ ಉಷ್ಣಕಟಿಬಂಧದೊಳಗೆ ಸಹ ಹಲವು ಕಡೆಯಲ್ಲಿ ಯುರೋಪಿಯನ್ ಜನರು ವಸಾಹತು ಮಾಡಿಕೊಂಡಿದ್ದಾರೆ.

## ಯುನಿಯನ್ ಆಫ್ ಸಾವುಥ ಆಫ್ರಿಕಾ (ದಕ್ಷಿಣ ಆಫ್ರಿಕಾ ಸಂಘ)

ಈ ದೇಶದ ಉತ್ತರ ಸೀಮೆಯು ಝಾಂಬೇಸೀ ಹೊಳೆಯಾಗಿರುತ್ತವೆಂದು ತಿಳಿಯಲ್ಪಡುತ್ತದೆ. ಈ ಭಾಗದೊಳಗಿನ ಜನಸಂಖ್ಯೆಯು ೧ ಕೋಟಿಯ ಮೇಲೆ ಇದ್ದು, ಅದರೊಳಗೆ ೨೪ ಲಕ್ಷ ಜನರು ಯುರೋಪಿಯನ್ನರೂ ಸುಮಾರು ೩ ಲಕ್ಷ ಏಶಿಯಾ ಖಂಡದಿಂದ ಬಂದಿದ್ದು, ಅದರಲ್ಲಿ ಹಿಂದೀ ಜನರು ಬಹಳವಾಗಿರುತ್ತಾರೆ. ಉಳಿದ ಸುಮಾರು ೭೩ ಲಕ್ಷ ಜನರು ದೇಶಿಯ ಬಂಟೂ ಮುಂತಾದ ಆಫ್ರಿಕಾ ದೇಶದ ವಂಶಜರು ಇರುತ್ತಾರೆ. ಯುರೋಪಿಯನ್ ಜನರೊಳಗೆ ಬ್ರಿಟಿಶ ಮತ್ತು ಬೋಅರ ಎಂಬ ಎರಡು ಜಾತಿಯ ಜನರಿರುತ್ತಾರೆ. ಕರೇ ಜನರ ಸಂಖ್ಯೆಯು ಬಹಳ ದೊಡ್ಡದಾಗಿರುವದರಿಂದ ಇಲ್ಲಿಯ ಯುರೋಪಿಯನ್ ಜನರು ಸ್ವತಃ ವಿಶೇಷವಾಗಿ ದುಡಿಯುವದಿಲ್ಲ. ಅವರು ಅಲ್ಲಿಯ ಜನರಿಂದ ಕೆಲಸವನ್ನು ಮಾಡಿಸಿಕೊಳ್ಳುವರು. ಮತ್ತು ಅವರ ಮೇಲೆ ತಾವು ವಿಚಾರಣೆಯನ್ನು ಮಾಡುವರು.

ಬಾರ್ಥೋಲೋಮ್ಯು ಡಾಯಝ್ ಮತ್ತು ವಾಸ್ಕೋದ ಗಾಮಾ ಎಂಬ ಪೋರ್ತುಗೀಜ ಅಂಬಿಗರು ಕೇಪ ಆಫ್ ಗುಡ್ ಹೋಪದ ಶೋಧವನ್ನು

ಮಾಡಿದ ಮೇಲೆ ಡಚ್ ಜನರು ಅಲ್ಲಿ ಹೋದರು. ಮತ್ತು ೧೮ನೇ ಶತಮಾನದ ಕೊನೆಯ ಸಮಯಕ್ಕೆ ಅಲ್ಲಿ ವಸಾಹತು ಮಾಡಿ ಸಮುದ್ರದಂಡೆಯ ಮೇಲೆ ಊರುಗಳನ್ನು ಕಟ್ಟಿದರು. ಅವರ ವಸಾಹತವು ಬೆಳೆಯುತ್ತ ಹೋದಂತೆ ಅವರು ಹಾಟೆಂಟಾಟ ಎಂಬ ಮೂಲನಿವಾಸಿಗಳನ್ನು ಹಿಂದಕ್ಕೆ ಸರಿಸುತ್ತ ಅಂತರ್ಭಾಗದೊಳಗೆ ಅಟ್ಟಿದರು. ೧೮೧೪ರಲ್ಲಿ ಬ್ರಿಟಿಶ ಜನರು ಅಲ್ಲಿ ಹೋಗಿ ವಸಾಹತುಗಳನ್ನು ತಮ್ಮ ಸ್ವಾಧೀನ ಮಾಡಿಕೊಂಡರು. ಮತ್ತು ತಮ್ಮ ಪ್ರಾಂತವನ್ನು ಬೆಳೆಸುವದರ ಸಲುವಾಗಿ ಅಲ್ಲಿಯ ಸ್ಥಾನಿಕ ಜನರ ಭೂಮಿಗಳನ್ನು ತೆಗೆದುಕೊಳ್ಳಲಾರಂಭಿಸಿದರು. ಅದಕ್ಕೋಸ್ಕರ ಅವರಿಗೆ ಎಷ್ಟೋ ಸಾರೆ ಯುದ್ಧವನ್ನು ಮಾಡಬೇಕಾಯಿತು.

ಬ್ರಿಟಿಶ ಜನರ ಆಗಮನದಿಂದ ಬೋಅರ ಜನರು ಕೇಪ ಕಾಲನೀ ಪ್ರಾಂತವನ್ನು ಬಿಟ್ಟು ನಾತಾಳದೊಳಗೆ ಹೋದರು. ಮತ್ತು ಅಲ್ಲಿಂದ ಮುಂದೆ ಡ್ರೇಕನ್ಸಬರ್ಗ ಎಂಬ ಪರ್ವತವನ್ನು ದಾಟಿ ಅವರು ಟ್ರಾನ್ಸವ್ಹಾಲ ಮತ್ತು ಆರೇಂಜ ಫ್ರೀ ಸ್ಟೇಟ ಎಂಬ ಸಂಸ್ಥಾನಗಳನ್ನು ಸ್ಥಾಪಿಸಿದರು. ಅವರಿಗಾದರೂ ಸ್ಥಾನಿಕ ಜನರ ಸಂಗಡ ಎಷ್ಟೋ ಯುದ್ಧಗಳನ್ನು ಮಾಡಬೇಕಾಯಿತು.

ದಕ್ಷಿಣ ಆಫ್ರಿಕೆಯೊಳಗೆ **ಕೇಪ್ ಆಫ್ ಗುಡ್ ಹೋಪ, ನಾತಾಳ, ಟ್ರಾನ್ಸವ್ಹಾಲ** ಮತ್ತು **ಆರೇಂಜ ಫ್ರೀ ಸ್ಟೇಟ** ಎಂಬ ಸಂಸ್ಥಾನಗಳು ಸಮಾವೇಶವಾಗುತ್ತವೆ.

ಇವುಗಳಿಗೆಲ್ಲ ಒಟ್ಟುಗೂಡಿ ಸ್ವತಂತ್ರವಾದ ರಾಜ್ಯವ್ಯವಸ್ಥೆ ಇದ್ದು, ಅವುಗಳ ರಾಜಧಾನಿಯು **ಪ್ರಿಟೋರಿಯಾ** ಎಂಬಲ್ಲಿರುತ್ತದೆ. ಈ ಪ್ರದೇಶದ ಹವೆಯು ಉತ್ತಮವಾಗಿದ್ದು, ಬಹುಭಾಗದಲ್ಲಿ ಹುಲ್ಲುಗಾವಲುಗಳ ಮೇಲೆ ನಡೆಯುವ ಉದ್ಯೋಗಗಳು ಸಾಗುತ್ತವೆ. ಒಕ್ಕಲತನವು ತೀರ ತುಸು ನಡೆಯುತ್ತದೆ. ಅದು ಕಿರಿಯುಗಲಾದ ಕರಾವಳಿಯ ಪಟ್ಟಿಯಲ್ಲಿಯೂ, ಗುಡ್ಡಗಳ ಇಳುಕಲುಗಳ ಮೇಲೆಯೂ, ಅದರಂತೆ ಪೂರ್ವದ ಕಡೆಗಿರುವ ಹೆಚ್ಚು ಮಳೆಯಾಗುವ ಪ್ರದೇಶದಲ್ಲಿಯೂ ಹೊಳೆಗಳ ಕೊಳ್ಳಗಳಲ್ಲಿಯೂ ಮಾತ್ರ ಸಾಗುತ್ತದೆ. ಆದರೆ ವ್ಹೆಲ್ಡದ ವಿಸ್ತಾರವಾದ ಪ್ರದೇಶದೊಳಗೆ ಅಲ್ಲಲ್ಲಿ ಹೊಳೆಗಳಿಗೆ



“ದಕ್ಷಿಣ ಆಫ್ರಿಕಾ ಸಂಘ ಮತ್ತು ಬ್ರಿಟಿಶ ದಕ್ಷಿಣ ಆಫ್ರಿಕಾ”

ಕಾಲುವೆಗಳನ್ನು ಕಟ್ಟಿ ಹೊಲಗಳಿಗೂ ತೋಟಗಳಿಗೂ ನೀರಿನ ಪೂರೈಕೆಯನ್ನು ಮಾಡಿದ್ದರೂ ವ್ಹೆಲ್ಡ್ನ ಪ್ರದೇಶವು ಪ್ರಾಮುಖ್ಯವಾಗಿ ಹುಲ್ಲುಗಾವಲುಗಳ ಭೂಮಿಯಾಗಿರುತ್ತದೆ. ಆದರೆ ಈ ತಪ್ಪಲಿನ ಮೇಲೆ ವಜ್ರಗಳೂ, ಬಂಗಾರವೂ ಸಿಗಲಾರಂಭಿಸಿದಂದಿನಿಂದ ಯುರೋಪಿಯನ್ನರ ಲಕ್ಷವು ಆದರ ಕಡೆಗೆ ಹೋಯಿತು. ಇಲ್ಲಿ ಕಲ್ಲಿದ್ದಲಿಯು ಸಹ ಸಿಗುವದೆಂದು ಆಮೇಲೆ ಕಂಡುಬಂತು. ಇಲ್ಲಿ ಬಂಗಾರದ ಖಣಿಗಳು ಬಹು ಆಳವಾಗಿರುತ್ತವೆ. ಇದರಿಂದ ಬಹು ದೊಡ್ಡ ಬಂಡವಲವನ್ನು ಕೂಡಹಾಕಿ ಮತ್ತು ಯಾಂತ್ರಿಕ ಸಾಧನಗಳನ್ನು ಉಪಯೋಗಿಸಿ ಖಣಿಗಳನ್ನು ನಡೆಸಬೇಕಾಗುತ್ತದೆ. ಈ ಖಣಿಗಳಲ್ಲಿ ಮುಖ್ಯವಾಗಿ ದೇಶೀಯರೂ ಮತ್ತು ಏಶಿಯಾಖಂಡದಿಂದ ಬಂದವರೂ ಕೆಲಸಮಾಡುತ್ತಾರೆ.

ಈ ಸಂಘರಾಷ್ಟ್ರದ ದಕ್ಷಿಣದ ಕರಾವಳಿಯಿಂದ ನಾವು ಉತ್ತರದ ಕಡೆಗೆ ಹೋಗಹತ್ತಿದರೆ, ಸಮುದ್ರದಂಡೆಯ ಪಟ್ಟಿಯ ಪ್ರದೇಶವು ಮುಗಿದಕೂಡಲೆ ಪಾವಟಿಗೆಗಳಂತೆ ಎತ್ತರವಾಗಿರುವ ಸಣ್ಣ ಕಾರೂ ಮತ್ತು ದೊಡ್ಡ ಕಾರೂ ಎಂಬ ಪ್ರದೇಶಗಳನ್ನು ಹತ್ತಿ ಹೋಗಬೇಕಾಗುತ್ತದೆ. ಆಮೇಲೆ ಕೇಪ ಪ್ರಾಂತದೊಳಗಿನ ನ್ಯೂವ್ಹೆಲ್ಡ್ ಪರ್ವತದ ಸಾಲು ಹತ್ತುತ್ತದೆ. ಅದಕ್ಕೆ ಹೊಂದಿಕೊಂಡು ಪೂರ್ವದ ಕಡೆಗೆ ಡ್ರೆಕನ್ಸಬರ್ಗ ಎಂಬ ಹತ್ತು ಸಾವಿರ ಅಡಿ ಉನ್ನತವಾದ ಪರ್ವತಾವಳಿಯು ಇರುತ್ತದೆ. ಈ ಪರ್ವತದ ಪೂರ್ವದ ಇಳುಕಲಿನ ಮೇಲೆ ಮತ್ತು ನಾತಾಳ ಪ್ರಾಂತದೊಳಗೆ ಹಿಂದೀ ಮಹಾ ಸಾಗರದ ಮೇಲಿಂದ ಬರುವ ಗಾಳಿಗಳು ಸಾಕಷ್ಟು ಮಳೆಯನ್ನು ತರುತ್ತವೆ. ಆದರೆ ಡ್ರೆಕನ್ಸಬರ್ಗ ಪರ್ವತದ ಪಶ್ಚಿಮಕ್ಕೆ ಹೋದ ಹಾಗೆ ಮಳೆಯು ಪ್ರಮಾಣವು ಕಡಿಮೆಯಾಗುತ್ತ ಹೋಗುತ್ತದೆ. ಕಟ್ಟಕಡೆಗೆ ಕಲಹಾರೀ ಎಂಬ ಅರಣ್ಯವು ಹತ್ತುತ್ತದೆ.

ಕೇಪ ಪ್ರಾಂತದ ನೈಋತ್ಯ ಭಾಗದೊಳಗೆ ಭೂಮಧ್ಯ ಸಾಮುದ್ರಿಕ ಹವಾಮಾನವಿರುತ್ತದೆ. ಅಂದರೆ ಬೇಸಿಗೆಯಲ್ಲಿ ಮಳೆ ಬೀಳದೆ ಚಳಿಗಾಲದಲ್ಲಿ ಬೀಳುತ್ತದೆ. ಕೇಪ ಟಾವುನದೊಳಗಿನ ಉಷ್ಣತಾಮಾನವು ೫೫° ರಿಂದ ೭೦° ದ ವರೆಗೆ ಇರುತ್ತದೆ. ಭೂಮಧ್ಯಸಾಮುದ್ರಿಕ ಹವೆಯ ಈ ಪ್ರದೇಶದ ಒಳಮಗ್ಗಲಿಗೆ ಮಳೆಯಾಗದ ಪ್ರದೇಶವಿರುತ್ತದೆ. ಅಲ್ಲಿ ಒಮ್ಮೊಮ್ಮೆ

ಒಮ್ಮೆಲೇ ಸರವುಗಳು ಬರುತ್ತವೆ. ಈ ಭಾಗದೊಳಗೆ ಹುಲ್ಲು ಮತ್ತು ಕಂಟಿಗಳು ಮಾತ್ರ ಬೆಳೆಯುತ್ತವೆ. ನಾತಾಳ, ಟ್ರಾನ್ಸವ್ಹಾಲ ಮತ್ತು ಆರೇಂಜ ಫ್ರೀ ಸ್ಟೇಟದ ಪ್ರಾಂತಗಳಲ್ಲಿ ಬೇಸಿಗೆಯಲ್ಲಿ ಮಳೆಯಾಗುತ್ತದೆ. ಟ್ರಾನ್ಸವ್ಹಾಲ ಮತ್ತು ಆರೇಂಜ ಫ್ರೀ ಸ್ಟೇಟಗಳ ಹವೆಯು ಎತ್ತರದ ಮೂಲಕ ಕೆಲಮಟ್ಟಿಗೆ ತಂಪಾಗಿರುತ್ತದೆ. ಚಳಿಗಾಲದಲ್ಲಿ ಮಳೆಯಾಗುವ ದಿಲ್ಲ. ಮತ್ತು ಆಕಾಶವು ನಿರಭ್ರವಾಗಿರುತ್ತದೆ. ಪರ್ವತ ಶಿಖರಗಳ ಹೊರ್ತಾಗಿ ಬೇರೆ ಎಲ್ಲಿಯೂ ಹಿಮವು ಬೀಳುವದಿಲ್ಲ.

**ಕೇಪ ಪ್ರಾಂತವು:**—ಈ ಪ್ರಾಂತದ ಜನಸಂಖ್ಯೆಯು ೪೦ ಲಕ್ಷ ಇದ್ದು ಅದರೊಳಗೆ ೮|| ಲಕ್ಷ ಬಿಳೀ ಜನರಿರುತ್ತಾರೆ. ಮತ್ತು ಉಳಿದವರು ಬೇರೆ ಬೇರೆ ಕುಲದ ಜನರಿರುತ್ತಾರೆ. ದಕ್ಷಿಣ ಆಫ್ರಿಕೆಯೊಳಗಿನ **ಕೇಪ ಟಾವುನ್** ಎಂಬ ಮುಖ್ಯವಾದ ಪಟ್ಟಣವು ಮಹತ್ವವಾದ ಬಂದರವೂ ಆಗಿರುತ್ತದೆ. ಬಿರುಗಾಳಿಯ ಸಮುದ್ರದಿಂದ ಸಂರಕ್ಷಣೆ ಮಾಡಲಿಕ್ಕೆ ಬಂದರದ ಹೊರಗೆ ದೊಡ್ಡ ಧಕ್ಕೆಯನ್ನು ಕಟ್ಟಿದ್ದಾರೆ. ಬಂದರದೊಳಗೆ ಹೋಗುವಾಗ ಅದರ ಹಿಮ್ಮಗ್ಗಲಿಗೆ ಟೇಬಲಿನಂತೆ ಸಪಾಟಾದ ಶಿಖರವಿರುವ ಗುಡ್ಡವು ದೃಷ್ಟಿಗೆ ಬೀಳುತ್ತದೆ. ಪಟ್ಟಣದೊಳಗೆ ಬ್ರಿಟಿಶ ಮತ್ತು ಬೋಅರ್, ನಿಗ್ರೋ ಮತ್ತು ಮಲಾಯೀ ಜನರು ದೃಷ್ಟಿಗೆ ಬೀಳುತ್ತಾರೆ. ಇಲ್ಲಿಂದ ಬಂಗಾರ, ವಜ್ರ, ತೊಗಲು, ಉಣ್ಣೆ ಮತ್ತು ಮದ್ಯ ಮುಂತಾದ ಸರಕುಗಳು ಬ್ರಿಟಿಶ ನಡುಗಡ್ಡೆಗಳಿಗೆ ಹೋಗುತ್ತವೆ. ಮತ್ತು ಅಲ್ಲಿಂದ ಯಂತ್ರ, ಅರಿವೆ, ಮೋಟಾರು ಮುಂತಾದ ಸರಕುಗಳು ಇಲ್ಲಿ ಬರುತ್ತವೆ. ಇಲ್ಲಿ ಬೇಕಾಗುವ ಕಲ್ಲಿದ್ದಲಿಯನ್ನು ದರ್ಬಾನದಿಂದ ತರುತ್ತಾರೆ. ದಕ್ಷಿಣ ಅಮೇರಿಕಾ ಮತ್ತು ಆಸ್ಟ್ರೇಲಿಯಾ ಇವುಗಳ ನಡುವೆ ಓಡಾಡುವ ಉಗಿ ಹಡಗಗಳು ಕಲ್ಲಿದ್ದಲಿಯನ್ನು ತೆಗೆದುಕೊಳ್ಳುವದಕ್ಕೆ ಇಲ್ಲಿ ಉಳುಕೊಳ್ಳುತ್ತವೆ. ಪಾರ್ಲಿಮೆಂಟಿನ ಸಭೆಗಳಾದರೂ ಇಲ್ಲಿಯೇ ಕೂಡುತ್ತವೆ.

ಕೇಪಟಾವುನ್‌ದ ಒಳಬಾಜುವಿನಲ್ಲಿರುವ ಗುಡ್ಡಗಳ ಇಳುಕಲಿನಮೇಲೆ ಉತ್ಕೃಷ್ಟವಾದ ಹಣ್ಣುದೋಟಗಳು ಮಾಡಲ್ಪಟ್ಟಿರುತ್ತವೆ. ಈ ಭಾಗದೊಳಗಿನ ಚಳಿಗಾಲದ ಮಳೆಯಿಂದ ತರತರದ ಹಣ್ಣುಹಂಪಲುಗಳು ಉತ್ತಮವಾಗಿ ಬೆಳೆಯುತ್ತವೆ. ದ್ರಾಕ್ಷೆಯಿಂದ ಮದ್ಯವನ್ನು ತೆಗೆಯುತ್ತಾರೆ. ಮತ್ತು ಅವುಗಳನ್ನು ಒಣಗಿಸಿ ಕಳಿಸುತ್ತಾರೆ.

ಈ ಪ್ರದೇಶದ ಉತ್ತರದಲ್ಲಿ ಕಾರೂಗಳ ಪ್ರದೇಶವು ಹತ್ತುತ್ತದೆ. ಸಣ್ಣ ಕಾರೂವಿನ ಮೇಲೆ ಶಹಾಮೃಗಗಳ ಹಿಂಡುಗಳನ್ನು ಸಾಕುತ್ತಾರೆ. ಆದರೆ ಇತ್ತಲಾಗಿ ಅವುಗಳ ಗರಿಗಳಿಗೆ ಗಿರಾಕಿಗಳು ಕಡಿಮೆಯಾಗಹತ್ತಿದ್ದರಿಂದ, ಶಹಾಮೃಗಗಳ ಬದಲು ಕುರಿಗಳನ್ನು ಸಾಕಹತ್ತಿದ್ದಾರೆ. ಕಾರೂವಿನಲ್ಲಿ ಜಾನೇವರಿಯಿಂದ ಮಾರ್ಚದ ವರೆಗೆ ಮಳೆಯಾಗುತ್ತದೆ. ಒಮ್ಮಿಂದೊಮ್ಮೆ ಸರವುಗಳು ಬರುತ್ತವೆ. ಹೊಳೆಗಳಲ್ಲಿಯ ನೀರು ತೀವ್ರವಾಗಿ ಹರಿದುಹೋಗಿ ಅವು ಮತ್ತೆ ಒಣದಾಗಿ ನಿಲ್ಲುತ್ತವೆ. ಇದರಿಂದ ಅಲ್ಲಲ್ಲಿ ಅಣೆಕಟ್ಟುಗಳನ್ನು ಕಟ್ಟಿ ಅದರ ನೀರಿನಿಂದ ಗೋವಿನ ಜೋಳ, ಜವೆಗೋದಿ, ಓಟ ಮುಂತಾದ ಧಾನ್ಯಗಳನ್ನು ಬೆಳೆಯುತ್ತಾರೆ. ಉಳಿದ ಭಾಗದೊಳಗೆ ಹುಲ್ಲು ಮತ್ತು ಕಂಟಿಗಳ ಹೊರ್ತಾಗಿ ಬೇರೆ ಏನೂ




ಬೆಳೆಯುವದಿಲ್ಲ. ಆದರ ಮೇಲೆ ಕುರಿಗಳನ್ನು ಸಾಕುವ ಕುರುಬರ ಬಿಳೀ ಬಣ್ಣದ ಮನೆಗಳು ದೂರ ದೂರದಲ್ಲಿದ್ದದ್ದು ಕಂಡುಬರುತ್ತವೆ.

ಕೇಪ ಪ್ರಾಂತದ ಪೂರ್ವಭಾಗದಲ್ಲಿ ವ್ಹೆಲ್ಡ ತಪ್ಪಲು ಪ್ರದೇಶವು ಪ್ರಾರಂಭವಾಗುತ್ತದೆ. ಮತ್ತು ಹಾಗೇ ಉತ್ತರಕ್ಕೆ ಈ ಪ್ರದೇಶವು ಹಬ್ಬಿ ಎತ್ತರವಾಗುತ್ತ ಹೋಗಿದೆ. ವ್ಹೆಲ್ಡದ ಹುಲ್ಲಿನ ಬೈಲಿನೊಳಗೆ ವೃಕ್ಷಗಳಿರು

ವದಿಲ್ಲ; ಆದರೆ ಇಲ್ಲಿ ಕಾರೂವಿನಗಿಂತ ಹೆಚ್ಚು ಮಳೆಯಾಗುವದರಿಂದ ದನಗಳೂ ಕುರಿಗಳೂ ಪೋಷಿಸಲ್ಪಡುತ್ತವೆ. ಗೋವಿನ ಜೋಳವಾದರೂ ತಕ್ಕ ಮಟ್ಟಿಗೆ ಬೆಳೆಯುತ್ತದೆ. ಗೋವಿನ ಜೋಳವು ಇಲ್ಲಿಯ ಸ್ಥಾನಿಕ ಜನರ ಮುಖ್ಯವಾದ ಆಹಾರವಾಗಿರುತ್ತದೆ. ಈ ತಪ್ಪಲಿನ ಮೇಲಿನ ಹವೆಯು ಬಹು ಆರೋಗ್ಯಕರವಾಗಿರುತ್ತದೆ.

**ಕಿಂಬರ್ಲೆ** ಪಟ್ಟಣದ ಸುತ್ತಲಿನ ಮರಡಿಯು ಅರಣ್ಯಮಯವಾಗಿದ್ದರೂ ಅಲ್ಲಿ ೧೮೭೦ನೇ ವರುಷದಲ್ಲಿ ವಜ್ರಗಳು ಸಿಗಲಾರಂಭಿಸಿದವು; ಅಂದಿನಿಂದ ಈ ಸ್ಥಳಕ್ಕೆ ಮಹತ್ವವು ಪ್ರಾಪ್ತವಾಗಿದೆ. ಮತ್ತು ಕಿಂಬರ್ಲೆ ಎಂಬ ಆಧುನಿಕ ಪದ್ಧತಿಯ ಪಟ್ಟಣವು ಅಲ್ಲಿ ನಿರ್ಮಾಣವಾಗಿದೆ.

ಕೇಪಟಾವುನ್‌ದ ಪೂರ್ವಕ್ಕೆ ೪೦೦ ಮೈಲಿನ ಮೇಲಿರುವ **ಪೋರ್ಟ ಎಲಿಝಾಬೇಥ** ಎಂಬ ಬಂದರದಿಂದ ಕಾರೂಗಳ ಮೇಲಿನ ದನಗಳಿಂದ ಹುಟ್ಟುವ ಉಣ್ಣೆ, ತೊಗಲು, ಆಡಿನ ಕೂದಲು, ಮತ್ತು ಶಹಾಮೃಗಗಳ ಗರಿಗಳು ಪರದೇಶಗಳಿಗೆ ಹೋಗುತ್ತವೆ. **ಈಸ್ಟ ಲಂಡನ್** ಎಂಬ ಬಂದರವಾದರೂ ತಕ್ಕಮಟ್ಟಿಗೆ ಪ್ರಸಿದ್ಧವಾಗಿರುತ್ತದೆ.

**ನಾತಾಳ :**—ಕೇಪಪ್ರಾಂತದಂತೆಯೇ ಇಲ್ಲಿಯಾದರೂ (೧) ಕರಾವಳಿಯ ಮೇಲಿನ ತಗ್ಗು ಪ್ರದೇಶ, (೨) ಅದರಿಂದ ಮುಂದೆ ಗುಡ್ಡದ ಇಳುಕಲಿನ ಪ್ರದೇಶ ಮತ್ತು (೩) ಅದಕ್ಕೂ ಮುಂದೆ ವ್ಹೆಲ್ಡದ ಎತ್ತರವಾದ ತಪ್ಪಲು ಪ್ರದೇಶಗಳೆಂಬ ಪ್ರಕಾರಗಳಿರುತ್ತವೆ. ಆದರೆ ಈ ಪ್ರಾಂತಗಳಲ್ಲಿ ಬೇರೆ ಬೇರೆ ತರದ ಹುಟ್ಟುವಳಿಗಳು ಆಗುತ್ತವೆ. ಕಬ್ಬು ಇಲ್ಲಿಯ ಮುಖ್ಯವಾದ ಹುಟ್ಟುವಳಿಯಾಗಿದ್ದು, ಅದರ ತೋಟಗಳು ನೂರಾರು ಮೈಲಿನ ವರೆಗೆ ಸಮುದ್ರ ದಂಡೆಯ ತಗ್ಗು ಪ್ರದೇಶದೊಳಗಿದ್ದದ್ದು ಕಂಡುಬರುತ್ತದೆ. ಈ ಭಾಗದೊಳಗೆ ಬೇಸಿಗೆಯಲ್ಲಿ ಗೋವಿನ ಜೋಳ, ಬಾಳೆ, ಅನನಸ, ಮಾವು ಮತ್ತು ನಿಂಬೇ ಹಣ್ಣಿನ ಜಾತಿಯ ಎಲ್ಲ ಹಣ್ಣುಗಳು ಸಹ ಚೆನ್ನಾಗಿ ಬೆಳೆಯುತ್ತವೆ. ಇಲ್ಲಿಯ ಒಕ್ಕಲತನದ ಕೆಲಸದಲ್ಲಿಯೂ, ತೋಟಗಳ ಕೆಲಸಗಳಲ್ಲಿಯೂ ಹಿಂದೀ ಕೂಲಿಕಾರರು ಹೆಚ್ಚಾಗಿ ಉಪಯೋಗವಾಗುತ್ತಾರೆ. ಆಫ್ರಿಕೆಯೊಳಗಿನ ಮೂಲನಿವಾಸಿಗಳು ಖಣಿಗಳಲ್ಲಿ ದುಡಿಯುವರು. ಆದರೆ

ತೋಟಪಟ್ಟಿಗಳಲ್ಲಿಯೂ ಹೊಲಗಳಲ್ಲಿಯೂ ಅವದು ನಿರುಪಯೋಗಿಯಾಗಿರುತ್ತಾರೆ.

ಗುಡ್ಡಗಳ ಇಳುಕಲುಗಳ ಮೇಲೆ ಚಹದ ತೋಟಗಳನ್ನು ಮಾಡಿರುತ್ತಾರೆ. ಈ ಇಳುಕಲುಗಳ ಮೇಲೆ ಮತ್ತು ಅವುಗಳ ಅಡಿಯ ಹತ್ತರ ಹುಲ್ಲು




ಗಾವಲುಗಳಿರುತ್ತವೆ. ಅಲ್ಲಿ ದನಗಳನ್ನೂ, ಆಡು–ಕುರಿಗಳನ್ನೂ, ಕುದುರೆಗಳನ್ನೂ ಸಾಕುತ್ತಾರೆ. ವೆಲ್ಡದ ಹವೆಯು ಕುದುರೆಗಳಿಗೆ ಮಾನಿಸುವದಿಲ್ಲ. ಆದ್ದರಿಂದ ಅಲ್ಲಿ ಎಳೆಯುಲಿಕ್ಕೆ ಎತ್ತುಗಳನ್ನು ಉಪಯೋಗಿಸುತ್ತಾರೆ.

**ದರ್ಬಾನ** ಎಂಬ ಪಟ್ಟಣವು ಪೂರ್ವ ಆಫ್ರಿಕೆಯೊಳಗಿನ ಮಹತ್ವವಾದ ಮತ್ತು ವಿಸ್ತಾರವಾದ ಬಂದರವಾಗಿರುತ್ತದೆ. ಪಟ್ಟಣದ ಸುತ್ತಲು

ತೆಂಗು, ಹಣ್ಣುದೋಟ ಮತ್ತು ಹೂದೋಟಗಳು ದೃಷ್ಟಿಗೆ ಬೀಳುತ್ತವೆ. ಬೈಸುಮಾರ್ಗಗಳ ಮೇಲೆ ಝುಲು ಎಂಬ ಜನರು ರಿಕ್‌ಶಾ ಎಂಬ ಕೈಗಾಡಿಗಳನ್ನು ಜಗ್ಗುತ್ತಿರುವದನ್ನು ಕಾಣಬಹುದು. ಇಲ್ಲಿ ಹಿಂದೀ ಜನರು ಸಹ ಹೆಚ್ಚಾಗಿರುತ್ತಾರೆ. ಈ ಬಂದರದೊಳಗಿಂದ ನ್ಯೂಕಸಲ್ಲದ ಕಲ್ಲಿದ್ದಲಿ, ಉಣ್ಣೆ, ತೊಗಲು, ಸಕ್ಕರೆ, ಧಾನ್ಯ ಮುಂತಾದ ಸರಕುಗಳು ರಫ್ತಾಗುತ್ತವೆ. ನಾತಾಳದೊಳಗೆ ತಯಾರಾಗುವ ಸಕ್ಕರೆಯು ಇಡೀ ದಕ್ಷಿಣ ಆಫ್ರಿಕೆಗೆ ಪೂರೈಸಲ್ಪಡುತ್ತದೆ.

ದರ್ಬಾನದಿಂದ ೭೫ ಮೈಲಿನ ಮೇಲೆ **ಪಿಟರ ಮಾರಿತ್ಸಬರ್ಗ** ಎಂಬ ರಾಜಧಾನಿಯ ಪಟ್ಟಣವು ೨೦೦೦ ಫೂಟು ಎತ್ತರದ ಮೇಲಿದ್ದು ಅದರ ಸುತ್ತಮುತ್ತಲಿನ ಪ್ರದೇಶದೊಳಗೆ ಉತ್ತಮವಾದ ಹಣ್ಣುದೋಟಗಳಿರುತ್ತವೆ. ಇಲ್ಲಿಂದ ಮುಂದೆ ಡ್ರೇಕನ್ಸಬರ್ಗ ಪರ್ವತದ ಪೂರ್ವದ ಇಳುಕಲಿನ ಪ್ರದೇಶವು ಹತ್ತುತ್ತದೆ. ಅದರೊಳಗಿನ ದಟ್ಟವಾದ ಅರಣ್ಯದೊಳಗಿಂದ ರೇಲುಮಾರ್ಗವು ಏರುತ್ತ ನ್ಯೂಕಸಲ್‌ದ ವರೆಗೆ ಹೋಗಿರುತ್ತದೆ. ಅಲ್ಲಿಂದ ಮುಂದೆ ಟ್ರಾನ್ಸವಾಲದಲ್ಲಿಯೂ, ದಕ್ಷಿಣ ಹ್ರೋಡೇಶಿಯಾದಲ್ಲಿಯೂ ಹೋಗಲಿಕ್ಕೆ ಬರುತ್ತದೆ.

ವಾಸ್ಕೋ ದ ಗಾಮಾ ಎಂಬ ನಾವಿಕನು ಹಿಂದುಸ್ತಾನಕ್ಕೆ ಬರುವ ಮುಂದೆ ನಾತಾಳದ ಕರಾವಳಿಯ ಮೇಲೆ ಉಳಿದುಕೊಂಡಿದ್ದನು ಆ ಮೇಲೆ ೧೬೨೪ ರಲ್ಲಿ ಯುರೋಪಿಯನ್ನರು ಅಲ್ಲಿ ನಿಲ್ಲಲಿಕ್ಕೆ ಪ್ರಯತ್ನ ಮಾಡಿದರು. ಆದರೆ ಅದು ಕೊನೆಗಾಣಲಿಲ್ಲ. ೧೮೩೬ ರಲ್ಲಿ ಬೋಅರ ಜನರು ಕೇಪ ಪ್ರಾಂತದೊಳಗಿಂದ ಇಲ್ಲಿಗೆ ಬಂದರು. ಝುಲು ಜನರು ಉತ್ತಮರಾದ ಸಿಪಾಯಿಗಳಾಗಿರುವದರಿಂದ, ಆವರ ಕೂಡ ಬೋಅರ ಜನರಿಗೂ ಅವರ ಹಿಂದಿನಿಂದ ಹೋದ ಬ್ರಿಟಿಶ ಜನರಿಗೂ ಅನೇಕ ವರುಷಗಳ ವರೆಗೆ ಹೋರಾಡಬೇಕಾಯಿತು. ಕಟ್ಟಕಡೆಗೆ ಬೋಅರ ಜನರು ಡ್ರೇಕನ್ಸಬರ್ಗ ಪರ್ವತವನ್ನು ದಾಟಿ ಪಶ್ಚಿಮದ ಕಡೆಗೆ ಹೋದರು. ಮತ್ತು ಈ ಪ್ರಾಂತವು

ಬ್ರಿಟಿಶರ ವಶದಲ್ಲಿ ೧೮೪೩ ರಲ್ಲಿ ಬಂದಿತು. ಇದರಲ್ಲಿ ೨೨ ಲಕ್ಷ ಜನವಸತಿ ಇದ್ದು ಅದರಲ್ಲಿ ಕೇವಲ ೨ ಲಕ್ಷ ಜನ ಯುರೋಪಿಯನ್ನರೂ ೧॥ ಲಕ್ಷ ಹಿಂದೀ ಜನರೂ ಇರುತ್ತಾರೆ. ಉಳಿದವರೆಲ್ಲರೂ ಝುಲು ಕುಲ ದವರಿರುತ್ತಾರೆ.

**ಆರೇಂಜ ಫ್ರೀಸ್ಟೇಟ:—** ಬೆಳೆಯುಳ್ಳ ಹುಲ್ಲುಗಾವಲದ ಈ ಪ್ರದೇಶವು ಕರಾವಳಿಯನ್ನು ಬಿಟ್ಟು ಒಳಗೆ ಪಸರಿಸಿದ್ದು, ಇದರ ಆಕಾರವು ಇಂಗ್ಲಂಡ ದಷ್ಟು ಇರುತ್ತದೆ. ಇಲ್ಲಿ ಮಳೆಯು ಕಡಿಮೆಯಾಗುವದರಿಂದ, ನೀರನ್ನು ಸಂಗ್ರಹಿಸುವ ಬೇರೆ ಬೇರೆ ಯೋಜನೆಗಳನ್ನು ಮಾಡಿ, ಬೇಸಿಗೆಯಲ್ಲಿ ಸಹ ದನಗಳಿಗೆ ಹುಲ್ಲು ಸಿಗುವ ವ್ಯವಸ್ಥೆಯನ್ನು ಮಾಡಿದ್ದಾರೆ. ಆದ್ದರಿಂದ ಇಲ್ಲಿಯ



South African Railways.

ವೆಲ್ಡದ ಮೇಲಿನ ದನಗಳು

ಜನರು ದನ, ಕುರಿ ಮತ್ತು ಆಡುಗಳ ದೊಡ್ಡ ದೊಡ್ಡ ಹಿಂಡುಗಳನ್ನು ಸಾಕುತ್ತಾರೆ. ಹಂದಿ ಮತ್ತು ಕೋಳಿಗಳಾದರೂ ಚೆನ್ನಾಗಿ ಪೋಷಿಸಲ್ಪಡುತ್ತವೆ. ಜಗರ್ಸಫಾಂಟೇನ್ ಮತ್ತು ಕಾಪೀಫಾಂಟೇನ ಎಂಬಲ್ಲಿ ವಜ್ರದ

ಖಣಿಗಳು ಸಿಕ್ಕಿರುತ್ತವೆ. **ಬ್ಲೂಘಾಂಟೀನ್** ಎಂಬ ಮುಖ್ಯವಾದ ಪಟ್ಟಣವು ೪೫೦೦ ಫೂಟು ಎತ್ತರದ ಮೇಲಿದ್ದು ಅದರ ಸುತ್ತಲು ಪರ್ವತದ ಅಡಿಯ ವರೆಗೆ ವ್ಹೆಲ್ಡದ ಅಖಂಡವಾದ ಬೈಲು ಪಸರಿಸಿರುತ್ತದೆ.

ಈ ಪ್ರಾಂತದೊಳಗೆ ಬೋಅರ ಜನರು ೧೮೩೬ರಲ್ಲಿ ನಾತಾಳದಿಂದ ಬಂದು ಇರಹತ್ತಿದರು. ಇದರಲ್ಲಿ ೯ ಲಕ್ಷ ಜನರಿದ್ದು, ಅವರೊಳಗೆ ೨ ಲಕ್ಷ ಬಿಳೀ ಜನರೂ ಉಳಿದವರು ಬಸುಟೋ ಎಂಬ ಕುಲಕ್ಕೆ ಸೇರಿದ ಆಫ್ರಿಕಾ ದೇಶದ ವಂಶಸ್ಥರು ಇರುತ್ತಾರೆ.

**ಟ್ರಾನ್ಸವಾಲ:**—ವಾಲ ಎಂಬ ಹೊಳೆಯ ಆಚೆಗಿರುವ ಈ ಪ್ರಾಂತದೊಳಗೆ ವ್ಹೆಲ್ಡದ ದೊಡ್ಡ ಭಾಗವು ಬರುತ್ತದೆ. ಮತ್ತು ಅದು ಉನ್ನತವಾಗಿರುವದರಿಂದ ಅಲ್ಲಿಯ ಹವೆಯು ಆರೋಗ್ಯಕರವಾಗಿರುತ್ತದೆ. ಉತ್ತರದ ಕಡೆಯ ಭಾಗವು ತಗ್ಗಾಗಿದ್ದು ಅನಾರೋಗ್ಯಕರವಾಗಿರುತ್ತದೆ. ಅಲ್ಲಿ ಬುಂದು ಮತ್ತು ಕಬ್ಬು ಬೆಳೆಯುತ್ತವೆ. ವ್ಹೆಲ್ಡದ ಪ್ರದೇಶದೊಳಗೆ ದನಗಳನ್ನೂ ಕುರಿಗಳನ್ನೂ ಸಾಕುತ್ತಾರೆ. ಇದರೊಳಗಿನ ಇಳುಕಲಾದ ಭಾಗದಲ್ಲಿ ನೀರನ್ನು ಕಟ್ಟಿ ಅನುಕೂಲ ಮಾಡಿದಲ್ಲಿ ಗೋವಿನಜೋಳ, ತಂಬಾಕು ಮತ್ತು ಕಿತ್ತಳಿ ನಿಂಬೆಗಳಂಥ ಹಣ್ಣುಗಳು ಬೆಳೆಯುತ್ತವೆ.

ಆದರೆ ಈ ಪ್ರಾಂತದಲ್ಲಿ ಹುಲ್ಲುಗಾವಲದ ಅಥವಾ ಒಕ್ಕಲತನದ ಹುಟ್ಟುವಳಿಗಳಿಗಿಂತ ಖನಿಜ ಸಂಪತ್ತಿಯು ಹೆಚ್ಚು ಮಹತ್ವದ್ದಾಗಿರುತ್ತದೆ. ಆರೇಂಜ ಹೊಳೆಗೆ ಬಂದು ಕೂಡುವ ವಾಲ ಮತ್ತು ಲಿಂಪೋಪೋ ಹೊಳೆಗಳ ನಡುವೆ ರಂಡದ ತಪ್ಪಲು ಇರುತ್ತದೆ. ಈ ತಪ್ಪಲಿನ ಮೇಲೆ ೬೦ ಮೈಲಿನ ವರೆಗೆ ಬಂಗಾರದ ಖಣಿಗಳು ಪಸರಿಸಿದ್ದು, ಅಲ್ಲಿ **ಜೋಹಾನ್ಸಬರ್ಗ** ಎಂಬ ಪಟ್ಟಣವು ಉದಯವಾಗಿರುತ್ತದೆ. ಮರ್ಕಿಸನ್ ಎಂಬ ಗುಡ್ಡದ ಮೇಲೆ ಸಹ ಬಂಗಾರವು ಸಿಗುತ್ತದೆ. ಪ್ರಿಟೋರಿಯಾದ ಪೂರ್ವಕ್ಕೆ ೩೦ ಮೈಲಿನ ಮೇಲೆ ವಜ್ರದ ಖಣಿಗಳಿರುತ್ತವೆ. ಬಂಗಾರ-ವಜ್ರಗಳ ಈ ಖಣಿಗಳಿಂದ ಟ್ರಾನ್ಸವಾಲದೊಳಗೆ ಅಲ್ಲಲ್ಲಿ ದಟ್ಟಾದ ಜನವಸತಿಯಾಗಿರುತ್ತದೆ. **ಪ್ರಿಟೋರಿಯಾ** ಎಂಬ ಪಟ್ಟಣವೂ, ಜೋಹಾನ್ಸಬರ್ಗ ಮತ್ತು ಜರ್ಮಿಸ್ಟನ ಎಂಬ ಮುಖ್ಯ ಪಟ್ಟಣಗಳೂ ಇತ್ತಲಾಗಿ ಬಹಳ

ಮಹತ್ವವನ್ನು ಪಡೆದಿರುತ್ತವೆ. ಜೋಹಾನ್ಸಬರ್ಗದ ಖಣಿಗಳಲ್ಲಿ ಸದ್ಯಕ್ಕೆ ಒಂದು ಲಕ್ಷ ಜನರು ದುಡಿಯುತ್ತಿರುತ್ತಾರೆ. ಜರ್ಮಿಸ್ಟನ ಎಂಬುದು ರೇಲ್ವೆ ಜಂಕ್ಶನ್ನದ ಸ್ಥಳವಿದ್ದು ಅಲ್ಲಿ ಧಾತುಗಳನ್ನು ಶುದ್ಧಮಾಡುವ ಕಾರಖಾನೆಗಳೂ, ಯಂತ್ರಗಳನ್ನು ತಯಾರಿಸುವ ಕಾರಖಾನೆಗಳೂ ಇರುತ್ತವೆ. ಪ್ರಿಟೋರಿಯಾ ಪಟ್ಟಣವು ದಕ್ಷಿಣ ಆಫ್ರಿಕೆಯ ಸಂಘರಾಜ್ಯದ ರಾಜ್ಯಕಾರಬಾರದ ಮುಖ್ಯ ಠಾಣ್ಯವಾಗಿರುತ್ತದೆ.

ಟ್ರಾನ್ಸವಾಲದ ಜನವಸತಿಯು ೪೧ ಲಕ್ಷ ಇದ್ದು, ಅದರೊಳಗೆ ೧೦ ಲಕ್ಷ ಯುರೋಪಿಯನ್ನರೂ ೩೧ ಲಕ್ಷ ಕರೆ ಮತ್ತು ಬಂಟೂ ಕುಲದವರೂ ಇರುತ್ತಾರೆ. ಈ ಪ್ರಾಂತವೂ ಆರೆಂಜ ಫ್ರೀ ಸ್ಟೇಟವೂ ಮೊದಲು ಬೋಅರ ಜನರ ವಶದಲ್ಲಿದ್ದವು. ಬ್ರಿಟಿಶರು ಅವುಗಳನ್ನು ೧೯೦೧ರಲ್ಲಿ ಆದ ಯುದ್ಧದಲ್ಲಿ ಸಂಪಾದಿಸಿದರು.

೨೦ನೇ ಪ್ರಕರಣ

# ಬ್ರಿಟಿಶ ದಕ್ಷಿಣ ಆಫ್ರಿಕಾ ಮತ್ತು ನೈಋತ್ಯ ಆಫ್ರಿಕಾ

ಬ್ರಿಟಿಶ ದಕ್ಷಿಣ ಆಫ್ರಿಕಾ ಪ್ರದೇಶದಲ್ಲಿ ಮುಂದೆ ಹೇಳಿದ ಪ್ರಾಂತಗಳ ಸಮಾವೇಶವಾಗಿದೆ. (೧) ಬೇಚುಆನಾ ಲಾಂಡ, (೨) ಸ್ವಾಝೀ ಲಾಂಡ, (೩) ಬಾಸೂಟೋ ಲಾಂಡ, (೪) ದಕ್ಷಿಣ-ಹ್ರೋಡೇಶಿಯಾ, (೫) ಉತ್ತರ ಹ್ರೋಡೇಶಿಯಾ, (೬) ನ್ಯಾಸ ಲಾಂಡ.

**ಬೇಚುಆನಾ ಲಾಂಡ :**—ಈ ಪ್ರಾಂತವು ೧೮೮೫ರಲ್ಲಿ ಬ್ರಿಟಿಶರ ಕೈಸೇರಿತು. ಇದರಲ್ಲಿ ಸುಮಾರು ೩ ಲಕ್ಷ ಜನವಸತಿ ಇದ್ದು ಅದರಲ್ಲಿ ೨ ಸಾವಿರ ಬಿಳೀ ಜನರು ಇರುತ್ತಾರೆ. ಉಳಿದವರು ದೇಶಿಯರಿದ್ದು ಬಂಟೂ ಜಾತಿಯ ಜನರು ಹೆಚ್ಚಾಗಿದ್ದಾರೆ. ಈ ಪ್ರಾಂತದೊಳಗೆ ಕಲಹಾರಿಯ ಮರುಭೂಮಿಯೂ ಅದರ ಹತ್ತರದ ಪ್ರದೇಶವೂ ಬರುತ್ತವೆ. ಬಹುತರ ಯಾವತ್ತೂ ಪ್ರದೇಶದೊಳಗೆ ಕಂಟಿ ಮತ್ತು ಹುಲ್ಲುಗಳ ಹೊರ್ತಾಗಿ ಬೇರೆ ಏನೂ ಬೆಳೆಯುವದಿಲ್ಲ. ಒಕ್ಕಲತನ ಮತ್ತು ದನಗಳನ್ನು ಸಾಕುವದು ಅಲ್ಲಿಯ ಜನರ ಮುಖ್ಯವಾದ ಉದ್ಯೋಗಗಳಾಗಿರುತ್ತವೆ. ಬಂಟೂ ಜನರು ಬುದ್ಧಿವಂತರೂ ಶೂರರೂ ಆಗಿರುತ್ತಾರೆ. ಅವರು ಇತ್ತಲಾಗಿ ಖಣಿಗಳಲ್ಲಿ ಕೆಲಸ ಮಾಡಲಿಕ್ಕೂ ಇಲ್ಲವೆ ವ್ಹೆಲ್ಡದ ತಪ್ಪಲಿನ ಮೇಲೆ ಕುರಿಗಳನ್ನೂ ಸಾಕಲಿಕ್ಕೂ ಹೋಗುತ್ತಾರೆ.

ಕಲಹಾರಿಯ ಬೈಲು ಒಂದು ಕಾಲಕ್ಕೆ ಬಹಳ ಬೆಳೆಯುಳ್ಳದ್ದಾಗಿತ್ತು; ಆದರೆ ಅಲ್ಲಿ ಈಗ ಮರುಭೂಮಿಯು ದೃಷ್ಟಿಗೆ ಬೀಳುತ್ತದೆ. ಇದರೊಳಗೆ ಜೀವಿಸುವ ಬುಶ್‌ಮೆನ್ ಎಂಬ ಜನರು ದಕ್ಷಿಣ ಮತ್ತು ಮಧ್ಯ ಆಫ್ರಿಕೆ

ಯೊಳಗಿನ ಮೂಲನಿವಾಸಿಗಳಾಗಿರುತ್ತಾರೆ. ಬಂಟೂ ಜನರು ಅವರನ್ನು ಹೊಡದೋಡಿಸಿ ಅವರ ದೇಶವನ್ನು ತಾವು ತೆಗೆದುಕೊಂಡರು. ಈ ಮರು ಭೂಮಿಯಲ್ಲಿ ಬುಶ್‌ಮೆನ್‌ರು ಸ್ಥಾಯಿಕರಾಗಿ ನಿಲ್ಲಲಾರರು. ಅವರು ಬೇಟೆಯಾಡಿ ಹೊಟ್ಟೆ ತುಂಬಿಕೊಳ್ಳುತ್ತಾರೆ; ಮತ್ತು ಬೇಟೆಯನ್ನು ಹುಡು ಕುತ್ತ ಯಾವಾಗಲೂ ಅಡ್ಡಾಡುತ್ತಾರೆ.

**ಸ್ವಾಝಿಲ್ಯಾಂಡ :**—ಈ ಪ್ರಾಂತವು ೧೯೦೭ ರಲ್ಲಿ ಬ್ರಿಟಿಶರ ಕೈಯಲ್ಲಿ ಬಂದಿತು. ಇದರೊಳಗೆ ಸುಮಾರು ೨ ಲಕ್ಷ ಜನರಿದ್ದು, ಅವರೆಲ್ಲರೂ ಬಹುತರವಾಗಿ ಬಂಟೂ ಜಾತಿಯವರಿರುತ್ತಾರೆ. ಬಿಳೇ ಜನರು ಕೇವಲ ಎರಡು ಸಾವಿರ ಇರುತ್ತಾರೆ. ಇಲ್ಲಿಯ ಬಂಟೂ ಜನರು ಬಹು ಶೂರರೂ, ಗಟ್ಟಿಗರೂ, ಯುದ್ಧ ಪ್ರಿಯರೂ ಆಗಿರುತ್ತಾರೆ. ಈ ಪ್ರಾಂತದೊಳಗಿನ ಗುಡ್ಡಗಳ ಅಡಿಯ ಹತ್ತರದ ಪ್ರದೇಶವು ಅನಾರೋಗ್ಯಕರವಾಗಿದ್ದರೂ ಉಳಿದ ಹುಲ್ಲುಗಾವಲಿನ ಪ್ರಾಂತದೊಳಗೆ ದನಗಳು ಬಹು ಚೆನ್ನಾಗಿ ಪೋಷಿ ಸಲ್ಪಡುತ್ತವೆ. ಮತ್ತು ಅಲ್ಲಿಯ ಹವೆಯಾದರೂ ಬಹಳ ಚೆನ್ನಾಗಿದ್ದು ಆರೋಗ್ಯಕಾರಕವಿರುತ್ತದೆ. ಇದರೊಳಗೆ ಬಂಗಾರದ ಮತ್ತು ತವರಿನ ದೊಡ್ಡ ದೊಡ್ಡ ಖಣಿಗಳು ಸಿಕ್ಕಿದ್ದರಿಂದ, ಇಲ್ಲಿ ಬಿಳೇ ಜನರು ಹೋಗಿ ನಿಂತಿ ರುತ್ತಾರೆ. ಇತ್ತಲಾಗಿ ಹತ್ತಿಯನ್ನು ಸಹ ಬೆಳೆಯಹತ್ತಿದ್ದಾರೆ.

**ಬಾಸೂಟೋ ಲ್ಯಾಂಡ :**—ಈ ಪ್ರಾಂತವು ನಮ್ಮ ದೇಶದೊಳಗಿನ ನೇಪಾಳದೇಶದಂತೆ ಡ್ರೇಕನ್ಸಬರ್ಗ ಪರ್ವತದ ದರಿ ಕಂದರಗಳಲ್ಲಿ ನೆಲೆಸಿರು ತ್ತದೆ. ಇದರ ಗುಡ್ಡಗಾಡ ಸ್ವರೂಪದ ಮೇಲಿಂದಲೂ ಇಲ್ಲಿಯ ಉತ್ಕೃಷ್ಟ ವಾದ ಹವೆಯಿಂದಲೂ ಇದಕ್ಕೆ ಆಫ್ರಿಕೆಯೊಳಗಿನ ಸ್ವಿತ್ಝರ್ಲಂಡ ಎಂದು ಕರೆಯುತ್ತಾರೆ. ಇದರೊಳಗೆ ಪ್ರವೇಶಿಸಲಿಕ್ಕೆ ಒಂದೇ ಕಣಿವೆಯ ಮಾರ್ಗ ವಿರುತ್ತದೆ. ಈ ಸುರಕ್ಷಿತವಾದ ಪ್ರಾಂತದೊಳಗಿನ ಜನರನ್ನು ಜಯಿಸಲಿಕ್ಕೆ ಬ್ರಿಟಿಶರಿಗೆ ಎಷ್ಟೋ ವರುಷಗಳವರೆಗೆ ಸಾಧ್ಯವಾಗಲಿಲ್ಲ. ಆದರೆ ಬಹು ಪ್ರಯಾಸದಿಂದ ೧೮೮೪ರಲ್ಲಿ ಈ ಪ್ರಾಂತವು ಅವರ ಕೈಸೇರಿತು. ಆದರೂ ಸಹ ಅಮಲುದಾರರ ಹೊರ್ತಾಗಿ ಬೇರೆ ಬಿಳೇ ಜನರಿಗೆ ಇಲ್ಲಿ ಇರಗೊಡುವ ದಿಲ್ಲ. ಒಟ್ಟು ಜನವಸತಿಯು ೫॥ ಲಕ್ಷ ಇದ್ದು ಅವರೊಳಗೆ ೧॥ ಸಾವಿರ ಜನರು ಯುರೋಪಿಯನ್ನರಿರುತ್ತಾರೆ. ಇಲ್ಲಿಯ ಬಂಟೂ ಜನರು ಗುಳೆ

ಕಟ್ಟಿಕೊಂಡಿರುತ್ತಾರೆ. ಅವರು ತಮ್ಮ ಮುಖ್ಯಸ್ಥನು ಹೇಳಿದಂತೆ ಕೇಳಿ ಕೊಂಡಿರುತ್ತಾರೆ.

**ಹ್ರೋಡೇಶಿಯಾ :**—ಹ್ರೋಡೇಶಿಯಾ ಎಂಬ ಪ್ರಾಂತಕ್ಕೆ ಸೆಸಿಲ್ ಹ್ರೋಡ್‌ಸನೆಂಬ ಮುತ್ಸದ್ದಿಯ ಹೆಸರನ್ನು ಕೊಟ್ಟಿದ್ದಾರೆ. ಟ್ರಾನ್ಸವಾಲದ ಉತ್ತರದ ಕಡೆಗೆ ಬ್ರಿಟಿಶ ಜನರಿಗೆ ವಸಾಹತು ಮಾಡಲಿಕ್ಕೆ ಪ್ರದೇಶವಿರುತ್ತ ದೆಂತಲೂ ಅವರು ಅಲ್ಲಿ ಹೋಗಿ ನಿಲ್ಲಬೇಕೆಂತಲೂ ಆತನ ಬಲವಾದ ಇಚ್ಛೆ ಯಿತ್ತು. ಎತ್ತರದ ಮೇಲಿರುವದರಿಂದ ಇಲ್ಲಿಯ ಹವೆಯು ಸೌಮ್ಯವಾಗಿರು ವದು; ಮತ್ತು ಹುಲ್ಲುಗಾವಲದ ಪ್ರದೇಶವು ವಿಪುಲವಾಗಿರುವದು. ಇವರೊಳಗೆ ವಾಸವಾಗಿದ್ದ ಮೇಟಾಬೆಲ್ ಮತ್ತು ಮಸೋನಾ ಎಂಬ ಜಾತಿಯ ಜನರು ತಮ್ಮ ತಮ್ಮೊಳಗೆ ಜಗಳಾಡುತ್ತಿದ್ದರು. ಇದಲ್ಲದೆ ಅಲ್ಲಿ ಕ್ರೂರ ಮೃಗಗಳು ಜೀವಿಸುತ್ತಿದ್ದವು. ಆದರೆ ಅದೇ ಸ್ಥಳದಲ್ಲಿ ಕಳೆದ ೪೦-೫೦ ವರುಷಗಳೊಳಗೆ ಎಷ್ಟೋ ಲೈನು ದಾರಿಗಳೂ ರೇಲು ಮಾರ್ಗಗಳೂ ಆಗಿದ್ದು ಒಕ್ಕಲತನ ಮತ್ತು ಹುಲ್ಲುಗಾವಲದ ಉದ್ಯೋಗಗಳು ಬೆಳದಿ ರುತ್ತವೆ. ಇಲ್ಲಿ ಸುಮಾರು ೫೦ ಸಾವಿರದ ಮೇಲೆ ಬ್ರಿಟಿಶ ಜನರು ಬಂದು ನಿಂತಿದ್ದಾರೆ. ಝಾಂಬೇಸೀ ಹೊಳೆಯಿಂದ ಇದರೊಳಗೆ ಉತ್ತರ ಮತ್ತು ದಕ್ಷಿಣ ಹ್ರೋಡೇಶಿಯಾ ಎಂಬ ಎರಡು ಭಾಗಗಳಾಗಿರುತ್ತವೆ. ಅವುಗಳಲ್ಲಿ ದಕ್ಷಿಣ ಭಾಗವು ಹೆಚ್ಚು ಮುಂದುವರೆದ ಭಾಗವಾಗಿದೆ.

**ದಕ್ಷಿಣ ಹ್ರೋಡೇಶಿಯಾ :**—ಈ ಪ್ರಾಂತವು ೧೮೮೮ ರಲ್ಲಿ ಬ್ರಿಟಿಶರ ಕೈಸೇರಿತು. ಇದರೊಳಗೆ ೨೧ ಲಕ್ಷ ಜನವಸತಿಯಿದ್ದು ಅದರೊಳಗೆ ೧। ಲಕ್ಷ ಬ್ರಿಟಿಶ ಜನರಿರುತ್ತಾರೆ. ಟ್ರಾನ್ಸವಾಲದ ಉತ್ತರಕ್ಕೆ ಲಿಂಪೋಪೋ ಹೊಳೆಯ ಆಚೆಗಿರುವ ತಪ್ಪಲಿನಂತೆ ಈ ಪ್ರಾಂತವಾದರೂ ವ್ಹೆಲ್ಡದ ತಪ್ಪಲು ಪ್ರದೇಶವಾಗಿರುತ್ತದೆ. ಇದರೊಳಗೆ ಬಂಗಾರ ಮತ್ತು ಕಲ್ಲಿದ್ದಲಿಗಳು ವಿಪುಲ ವಾಗಿ ಸಿಗುತ್ತವೆ. ಈ ಪ್ರದೇಶವು ಉಷ್ಣಕಟಿಬಂಧದೊಳಗೆ ಬರುತ್ತದೆ. ಇಲ್ಲಿ ಬೇಸಿಗೆಯೊಳಗೆ ಮಳೆಯಾಗುತ್ತದೆ; ಮತ್ತು ಅದು ನಿಶ್ಚಿತವಾಗಿರುತ್ತದೆ. ಹುಲ್ಲುಗಾವಲಿನ ಬೈಲಿನಲ್ಲಿ ದನಗಳು ಉತ್ತಮವಾಗಿ ಪೋಷಿಸಲ್ಪಡುತ್ತವೆ. ಇಲ್ಲಿಯ ಹವಾಮಾನವು ಯುರೋಪಿಯನ್ನರಿಗೆ ತಕ್ಕಂತೆ ಇರುತ್ತದೆ. ದಕ್ಷಿಣ ಭಾಗದೊಳಗೆ ಗೋವಿನಜೋಳ ಮತ್ತು ತಂಬಾಕುಗಳು ಚೆನ್ನಾಗಿ ಬೆಳೆಯು ತ್ತವೆ. ಹತ್ತಿಯು ಬೆಳೆಯಾದರೂ ಹೆಚ್ಚುತ್ತಲಿದೆ.

ಹವಾಮಾನದ ಪ್ರಕಾರ ದಕ್ಷಿಣ ಹ್ರೋಡೇಶಿಯಾ ಪ್ರಾಂತವನ್ನು ದಕ್ಷಿಣ ಆಫ್ರಿಕೆಯಲ್ಲಿಯೂ ಉತ್ತರ ಹ್ರೋಡೇಶಿಯಾ ಪ್ರಾಂತವನ್ನು ಮಧ್ಯ ಆಫ್ರಿಕೆಯಲ್ಲಿಯೂ ಸಮಾವೇಶ ಮಾಡುವದು ಯೋಗ್ಯವಾದ ಮಾತಾಗಿರುತ್ತದೆ. **ಬುಲಾವಾಯೋ** ಎಂಬ ಪಟ್ಟಣವು ವ್ಯಾಪಾರದಲ್ಲಿ ದಕ್ಷಿಣ ಹ್ರೋಡೇಶಿಯಾದೊಳಗಿನ ಮುಖ್ಯವಾದ ಸ್ಥಳವಾಗಿರುತ್ತದೆ. ಆದರೆ ಈ ಪ್ರಾಂತದಿಂದ ಪರದೇಶಗಳಿಗೆ ಹೋಗುವ ಸರಕುಗಳನ್ನು ರೇಲಿನಿಂದ ಪೋರ್ತುಗೀಜ ಪ್ರಾಂತದೊಳಗಿನ ಬೇಇರಾ ಎಂಬ ಬಂದರದೊಳಗಿಂದ ಕಳಿಸಬೇಕಾಗುತ್ತದೆ. ವಾಂಕಿ ಎಂಬಲ್ಲಿ ಕಲ್ಲಿದ್ದಲ್ಲಿಯ ದೊಡ್ಡ ಖಣಿಗಳಿರುತ್ತವೆ. ಬುಲಾವಾಯೋ ಮತ್ತು **ವಾಂಕೀ** ಪಟ್ಟಣಗಳು ಕೇಪಕೈರೋ ರೇಲುಮಾರ್ಗದ ಮೇಲಿರುತ್ತವೆ. ಈ ರೇಲುದಾರಿಯ ಒಂದು ಶಾಖೆಯು ರಾಜಧಾನಿಯ ಸ್ಥಳವಾದ **ಸಾಲಿಸಬರೀ** ಎಂಬ ಪಟ್ಟಣಕ್ಕೆ ಹೋಗುತ್ತದೆ. ಈ ಪಟ್ಟಣವು ಮಾಟೋಪೋ ಎಂಬ ಗುಡ್ಡದ ಕಣಿವೆಯಲ್ಲಿರುತ್ತದೆ. ಈ ಗುಡ್ಡದ ಮೇಲೆ ಹ್ರೋಡ್‌ಸನ ಸಮಾಧಿಯು ಇರುತ್ತದೆ.

**ಉತ್ತರ ಹ್ರೋಡೇಶೀಯಾ:**—ಈ ಪ್ರಾಂತದೊಳಗೆ ಬಂಟೂ ಜಾತಿಯ ಜನರ ಸುಮಾರು ೧೫ ಲಕ್ಷ ಜನವಸತಿಯುಂಟು. ಈ ಪ್ರಾಂತವು ಕ್ರಮೇಣ ಉದಯಕ್ಕೆ ಬರುತ್ತಲಿದೆ. ಇಲ್ಲಿ ಆನೆ, ಕಾಡುಕೋಣ, ಅನೇಕ ಜಾತಿಯ ಚಿಗರೆ ಮುಂತಾದ ಬೇಟೆಯ ದೊಡ್ಡ ದೊಡ್ಡ ಪ್ರಾಣಿಗಳು ಸಿಗುತ್ತವೆ. ಈ ಪ್ರಾಂತದೊಳಗಿನ **ಬ್ರೋಕನ್ ಹಿಲ್** ಎಂಬ ಪಟ್ಟಣದ ಸುತ್ತಮುತ್ತಲು ಧಾತುಗಳು ಸಿಗುತ್ತವೆ. ವಾಂಕೀಯಿಂದ ಉತ್ತರಕ್ಕೆ ಹೋಗುವ ರೇಲುಮಾರ್ಗವು ಝೂಂಬೇಸೀ ಹೊಳೆಗೆ ಕಟ್ಟಿದ ಪೂಲಿನ ಮೇಲಿಂದ ಹೋಗುತ್ತದೆ. ಇಲ್ಲಿ ಹೊಳೆಯ ಮೇಲೆ **'ವ್ಹಿಕ್ಟೋರಿಯಾ ಫಾಲ್ಸ್'** ಎಂಬ ಹೆಸರಿನ ಪ್ರಸಿದ್ಧವಾದ ತಡಸಲು ಇರುತ್ತದೆ. ಸುತ್ತಲೂ ಹಸರು ಮುರಿಯುವ ಹಳವುಗಳಿರುವದರಿಂದ ನಾಯಗಾರಾದ ತಡಸಲಿಗಿಂತ ಇದರ ನೋಟವು ಹೆಚ್ಚು ಸುಂದರವಾಗಿರುತ್ತದೆ ಇಲ್ಲಿ ಒಂದೂಕಾಲು ಮೈಲು ಅಗಲಾದ ಹೊಳೆಯು ಸುಮಾರು ೪೦೦ ಫೂಟು ಎತ್ತರವಾದಂಥ ಕಿರಿಯಗಲಾದ ಕೊಳ್ಳದೊಳಗೆ ಧುಮುಕುತ್ತದೆ. ಹೊಳೆಯ ಆಚೆಯ ಕಡೆಗೆ ಹತ್ತರದಲ್ಲಿಯೇ **ಲಿವ್ಹಿಂಗಸ್ಟನ್** ಎಂಬ ಮುಖ್ಯವಾದ ಪಟ್ಟಣವು ನೆಲೆಸಿರುತ್ತದೆ. ಲಿವ್ಹಿಂಗಸ್ಟನ್ ಎಂಬ ಹೆಸರಿನ ಸ್ಕಾಟೀಶ್ ಪಾದ್ರಿಯು ಈ ಧಬೆಧಬೆ

ಯನ್ನು ೧೮೫೫ ರಲ್ಲಿ ಮೊಟ್ಟಮೊದಲು ಕಂಡನು. ಆತನ ಹೆಸರನ್ನೆ ಈ ಪಟ್ಟಣಕ್ಕೆ ಕೊಟ್ಟಿರುತ್ತಾರೆ. ಧಬೆಧಬೆಯ ಅಬ್ಬರವು ದೂರದಿಂದಲೇ ಕೇಳಿ ಬರುತ್ತದೆ. ಆದರೆ ನಾಯಗಾರಾ ತಡಸಲದ ಉಪಯೋಗವನ್ನು ವಿದ್ಯುಚ್ಛಕ್ತಿಯನ್ನು ಹುಟ್ಟಿಸಲಿಕ್ಕೆ ಮಾಡಿಕೊಂಡಂತೆ ಈ ತಡಸಲಿನ ಉಪಯೋಗವನ್ನು ಮಾಡಿಕೊಂಡಿರುವದಿಲ್ಲ. ಝಾಂಬೇಸೀ ನದಿಯು ಮುಖದಿಂದ ೪೦೦ ಮೈಲಿನ ವರೆಗೆ ಹೋಗುಬರುವದಕ್ಕೆ ಉಪಯೋಗವಾಗುತ್ತದೆ. ನ್ಯಾಸಾ ಸರೋವರದೊಳಗಿಂದ ಉಗಮವಾದ ಒಂದು ಹೊಳೆಯು ಝಾಂಬೇಸೀ ಹೊಳೆಗೆ ಅದರ ಮುಖದ ಹತ್ತರ ಬಂದು ಕೂಡುತ್ತದೆ.

**ನ್ಯಾಸಾಲ್ಯಾಂಡ:**—ಉತ್ತರ ಹ್ರೋಡೇಶಿಯಾದ ಪೂರ್ವ ಬದಿಗೆ ನ್ಯಾಸಾ ಸರೋವರದ ದಂಡೆಯಲ್ಲಿ ಈ ಪ್ರಾಂತವಿರುತ್ತದೆ. ಸಮುದ್ರದಿಂದ ಉತ್ತರ ಹ್ರೋಡೇಶಿಯಾದಕ್ಕಿಂತ ಹೆಚ್ಚು ಸಮೀಪವಿರುವದರಿಂದ ಇಲ್ಲಿ ಮಳೆಯು ವಿಪುಲವಾಗುತ್ತದೆ. ವಿಶೇಷತಃ ಸರೋವರದ ದಂಡೆಯ ಮೇಲಿನ ತಗ್ಗು ಪ್ರದೇಶವು ಮತ್ತು ಶಿರೆ ಹೊಳೆಯ ಕೊಳ್ಳದೊಳಗಿನ ಪ್ರದೇಶವು ಬಹು ಮಹತ್ವವಾದವುಗಳೂ ದಟ್ಟಾದ ಜನವಸತಿಯುಳ್ಳವುಗಳೂ ಆಗಿರುತ್ತವೆ. ಈ ಪ್ರಾಂತದ ಜನಸಂಖ್ಯೆಯು ೨೪ ಲಕ್ಷ ಇದ್ದು, ಈ ಪ್ರಾಂತವನ್ನು ಬ್ರಿಟಿಶರು ೧೮೯೧ ರಲ್ಲಿ ತಮ್ಮ ಕೈವಶಮಾಡಿಕೊಂಡರು.

ತಗ್ಗು ಪ್ರದೇಶದಲ್ಲಿ ಬೇಸಿಗೆಯಲ್ಲಿ ಮಳೆಯಾಗುತ್ತದೆ. ಮತ್ತು ಚಳಿಗಾಲದಲ್ಲಿ ದಟ್ಟಾದ ಮಂಜು ಬೀಳುತ್ತದೆ. ಅದರಂತೆ ಸೀಸೀ ಎಂಬ ಜಾತಿಯ ನೊಣಗಳ ಉಪದ್ರವವು ಹೆಚ್ಚಾಗಿರುತ್ತದೆ. ಅರಣ್ಯಗಳೊಳಗಿನ ಆನೆ ಮತ್ತು ಜೇನ್ನೊಣಗಳಿಂದ ಆನೇಹಲ್ಲು ಮತ್ತು ಮೇಣಗಳ ಹುಟ್ಟುವಳಿಗಳು ಬಹಳವಾಗಿರುತ್ತವೆ. ಗೋವಿನ ಜೋಳವು ಇಲ್ಲಿಯ ಜನರ ಮುಖ್ಯವಾದ ಆಹಾರವಾಗಿರುತ್ತದೆ. ಹೊಲಗಳಲ್ಲಿ ಗೋವಿನ ಜೋಳದ ಹೊರ್ತಾಗಿ ಅಕ್ಕಿ, ಜೋಳ, ಸೆಜ್ಜಿ, ಅವರಿ, ತಂಬಾಕು, ಹತ್ತಿ ಮುಂತಾದವುಗಳು ಬಹಳ ಬೆಳೆಯುತ್ತವೆ. ಗೋವಿನಜೋಳದ ಮೇಲೆ ಹಂದಿಗಳೂ ಪೋಷಿಸಲ್ಪಡುತ್ತವೆ. ಪಶ್ಚಿಮ ಭಾಗದೊಳಗಿನ ಹುಲ್ಲುಗಾವಲಿನ ಮೇಲೆ ದನಗಳನ್ನು ಸಾಕುವ ಉದ್ಯೋಗವು ನಡೆಯುತ್ತದೆ. ಗುಡ್ಡಗಳ ಮೇಲೆ ಚಹ ಮತ್ತು ಬುಂದಿನ ತೋಟಗಳು ಇರುತ್ತವೆ.

**ಬ್ಲಂಟಾಯರ್** ಈ ಪ್ರಾಂತದ ಮುಖ್ಯ ಪಟ್ಟಣವು ಇರುತ್ತದೆ. ಲಿವ್ಹಿಂಗಸ್ಟನ್ನನು ಈ ಪ್ರಾಂತದ ಸಂಶೋಧನೆಯನ್ನು ಮೊಟ್ಟಮೊದಲು




ಬ್ರಿಟಿಶ ಪೂರ್ವ ಆಫ್ರಿಕಾ

ಮಾಡಿದನು. ಆತನ ಸ್ಕಾಟ್ಲಂಡದೊಳಗಿನ ಜನ್ಮಸ್ಥಳವು ಬ್ಲಂಟಾಯರ್ ಎಂಬ ಪಟ್ಟಣವಾಗಿರುತ್ತದೆ. ಅದೇ ಹೆಸರನ್ನು ಈ ಪಟ್ಟಣಕ್ಕೆ ಕೊಟ್ಟಿರುತ್ತಾರೆ.

**ನೈಋತ್ಯ ಆಫ್ರಿಕೆಯು :**—ಈ ಪ್ರಾಂತವು ಮೊದಲನೆಯ (೧೯೧೪–೧೮) ಮಹಾಯುದ್ಧದ ಪೂರ್ವದಲ್ಲಿ ಜರ್ಮನರ ವಶದಲ್ಲಿತ್ತು. ಯುದ್ಧವು ಮುಗಿದನಂತರ ಅದನ್ನು ರಾಷ್ಟ್ರಸಂಘವು ಬ್ರಿಟಿಶರ ಕೈಯಲ್ಲಿ ಕೊಟ್ಟಿರುತ್ತದೆ. ಜನವಸತಿಯು ಸುಮಾರು ೪॥ ಲಕ್ಷ ಇದ್ದು ಅವರೆಲ್ಲರೂ ಬಹುತರವಾಗಿ ಬಂಟೂ ವಂಶಜರು ಇರುತ್ತಾರೆ. ಮತ್ತು ೨೦ ಸಾವಿರ ಯುರೋಪಿಯನ್ನರು ಇರುತ್ತಾರೆ. ಕಲಹಾರಿಯ ಉತ್ತರಕ್ಕೆ ತೀರ ಹೊಂದಿಕೊಂಡಿದ್ದ ಈ ಪ್ರಾಂತದೊಳಗೆ ಮಳೆಯ ಪ್ರಮಾಣವು ಕಡಿಮೆಯಾಗಿರುವದರಿಂದ, ಅದು ಒಕ್ಕಲತನಕ್ಕೆ ಉಪಯೋಗವಾಗುವದಿಲ್ಲ. ದನಗಳನ್ನು ಮತ್ತು ಕುರಿಗಳನ್ನು ಸಾಕುವದೇ ಇಲ್ಲಿಯ ಮುಖ್ಯ ಉದ್ಯೋಗವಾಗಿರುತ್ತದೆ. ಆದರೆ ಇತ್ತಲಾಗಿ ವಜ್ರದ ಖಣಿಗಳು ಸಿಕ್ಕಿದ್ದರಿಂದ ಈ ಪ್ರಾಂತಕ್ಕೆ ಹೆಚ್ಚು ಮಹತ್ವವು ಬಂದಿರುತ್ತದೆ. ಜನರು ತೀರ ಹಿಂದುಳಿದವರಿರುತ್ತಾರೆ. **ವಾಲವಿಸ್ ಬೇ** ಎಂಬದೊಂದೇ ಉಪಯುಕ್ತವಾದ ಬಂದರವಾಗಿರುತ್ತದೆ.

೨೧ನೇ ಪ್ರಕರಣ

# ಬ್ರಿಟಿಶ ಪೂರ್ವ ಆಫ್ರಿಕಾ

## ಆಂಗ್ಲೋ-ಇಜಿಪ್ಶಿಯನ್ ಸುದಾನ, ಬ್ರಿಟಿಶ ಸೋಮಾಲಿಲ್ಯಾಂಡ ಮತ್ತು ಹಿಂದೀ ಮಹಾಸಾಗರದಲ್ಲಿಯ ನಡುಗಡ್ಡೆಗಳು.

**ಬ್ರಿಟಿಶ ಪೂರ್ವ ಆಫ್ರಿಕಾ:**— ಇದರೊಳಗೆ **ಟಾಂಗಾನಿಕಾ, ಕೇನಿಯಾ, ಝಾಂಝಿಬಾರ** ಮತ್ತು **ಯುಗಾಂಡಾ** ಎಂಬ ಪ್ರಾಂತಗಳ ಸಮಾವೇಶವಾಗಿರುತ್ತವೆ. ಇದರೊಳಗಿನ ಬಹುತರ ಯಾವತ್ತೂ ಪ್ರದೇಶವು ತಪ್ಪಲು ಭೂಮಿಯಾಗಿದ್ದು, ಮೂರರಿಂದ ಆರುಸಾವಿರ ಫೂಟು ಎತ್ತರದವರೆಗೆ ಅದು ಕರಾವಳಿಯಿಂದ ಎತ್ತರವಾಗುತ್ತ ಹೋಗಿರುತ್ತದೆ. ಈ ತಪ್ಪಲಿನ ಮೇಲೆ ಕೇನಿಯಾ ಮತ್ತು ಕಿಲಿಮಾಂಜಾರೋಗಳಂಥ ಜ್ವಾಲಾಮುಖೀ ನಿರ್ಮಿತವಾದ ಉನ್ನತವಾದ ಶಿಖರಗಳು ದೃಷ್ಟಿಗೆ ಬೀಳುತ್ತವೆ. ಅವುಗಳಲ್ಲಿ ಕೆಲವು ಜಾಗೃತವಾಗಿರುವವು. ಈ ಭಾಗದೊಳಗೆ ದರಿಯಂತಿರುವ ಒಂದು ಕಿರಿಯುಗಲಾದ ಪ್ರದೇಶವು ಕುಸಿಬಿದ್ದದ್ದರಿಂದ ಎರಡು ತಗ್ಗಾದ ಪಟ್ಟಿಗಳು (ಕಚ್ಚುಗಳು) ನಿರ್ಮಾಣವಾಗಿರುತ್ತವೆ. ಅವುಗಳಿಗೆ ರಿಫ್ಟ ಕೊಳ್ಳಗಳೆಂದೆನ್ನುತ್ತಾರೆ.

ಈ ರೀತಿಯಿಂದ ತಯಾರಾದ ಕೊಳ್ಳಗಳೊಳಗೆ ನೀರು ನಿಂತು ಒಂದರಲ್ಲಿ ಆಲ್ಬರ್ಟ, ಎಡ್ವರ್ಡ ಮತ್ತು ಟಾಂಗಾನಿಕಾ ಎಂಬ ಸರೋವರಗಳೂ ಇನ್ನೊಂದರಲ್ಲಿ ರುಡಾಲ್ಫ, ಮಗಾಡಿ ಮತ್ತು ಎಮಾಸೀ ಎಂಬ ಸರೋವರಗಳೂ ನಿರ್ಮಾಣವಾದವು. ಪಶ್ಚಿಮದ ತಗ್ಗಿನೊಳಗಿನ ನೀರು ನಾಯಿಲ ಮುಂತಾದ ಹೊಳೆಗಳಿಂದ ಹೊರಗೆ ಹೋಗಲು ಅನುವಿರುವದರಿಂದ ಆ ನೀರು ಸವಿಯಾಗಿರುತ್ತದೆ. ಆದರೆ ಪೂರ್ವದ ತಗ್ಗಿನಲ್ಲಿರುವ ಸರೋವರಗಳ ನೀರು ಉಪ್ಪಾಗಿರುತ್ತದೆ. ಇವೆರಡೂ ತಗ್ಗು ಪಟ್ಟಿಗಳ ನಡುವಿನ ೪೦೦೦ ಫೂಟು ಎತ್ತರವಾದ ತಪ್ಪಲಿನ ಮೇಲೆ ವ್ಹಿಕ್ಟೋರಿಯಾ ಎಂಬ ಅತಿ




ಪ್ರದೇಶವು ಕಳಚಿಬಿದ್ದದ್ದರಿಂದಾದ ರಿಫ್ಟಕೊಳ್ಳಗಳು

ವಿಸ್ತಾರವಾದ ಆದರೆ ಕಿರಿಯಾಳವಾದ ನೀರಿನ ಸರೋವರವಿರುತ್ತದೆ. ಉಳಿದ ಸರೋವರಗಳೆಲ್ಲ ಕಿರಿಯಗಲಾಗಿಯೂ, ಆಳವಾಗಿಯೂ, ಇರುತ್ತವೆ. ಆಲ್ಬರ್ಟ, ಎಡ್‌ವರ್ಡ ಮತ್ತು ವ್ಹಿಕ್ಟೋರಿಯಾ ಎಂಬ ಸರೋವರಗಳ ನೀರನ್ನು ನಾಯಿಲ ಹೊಳೆಯು ಒಯ್ಯುತ್ತದೆ. ಮತ್ತು ಟಾಂಗಾನಿಕಾ ಸರೋವರದ ನೀರು ಕಾಂಗೋ ಹೊಳೆಗೆ ಕೂಡುತ್ತದೆ.

ಈ ಪ್ರದೇಶವೆಲ್ಲ ವಿಷುವ-ವೃತ್ತದ ಮೇಲಿರುವದರಿಂದ ಅಲ್ಲಿಯ ಹವೆಯು ಉಷ್ಣವಾಗಿರುವದು ಸ್ವಾಭಾವಿಕವಾಗಿರುತ್ತದೆ; ಆದರೆ ಅದು ಎತ್ತರವಾಗಿರುವದರಿಂದ ಅದರ ಹವೆಯಲ್ಲಿ ಸೌಮ್ಯತೆಯು ಬಂದಿರುತ್ತದೆ. ಎಪ್ರಿಲ ತಿಂಗಳಲ್ಲಿ ತುಸು ಮಳೆಯ ಅಬ್ಬರವು ಆರಂಭವಾಗುತ್ತದೆ. ಮತ್ತು ಆಕ್ಟೋಬರ ತಿಂಗಳಲ್ಲಿ ತುಸು ಮಳೆಯಾಗುತ್ತದೆ. ಝಾಂಝೀಬಾರ ಮತ್ತು ಪೆಂಬಾ ಎಂಬ ದ್ವೀಪಗಳಲ್ಲಿಯೂ ಕರಾವಳಿಯ ಮೇಲಿನ ಉಷ್ಣ ವಾದ ಆರ್ದ್ರ ಹವೆಯಲ್ಲಿಯೂ ತೆಂಗು ಮತ್ತು ಲವಂಗಗಳು ಚೆನ್ನಾಗಿ ಬೆಳೆ ಯುತ್ತವೆ. ಸಮುದ್ರ ದಂಡೆಯ ಪಟ್ಟಿಯನ್ನು ಬಿಟ್ಟು ತಪ್ಪಲಿನ ಕಡೆಗೆ ಒಳಸೇರಿದಂತೆ ಮಳೆಯ ಪ್ರಮಾಣವು ಕಡಿಮೆಯಾಗುತ್ತದೆ. ಆದ್ದರಿಂದ ಅಲ್ಲಿ ಅತಿ ವಿಸ್ತಾರವಾದ ಹುಲ್ಲುಗಾವಲುಗಳ ಭೂಮಿಯು ದೃಷ್ಟಿಗೆ ಬೀಳು ತ್ತದೆ. ಇದರಲ್ಲಿಯೇ ಸಿಂಹ, ಝಿಬ್ರಾ, ಜಿರಾಫ್ ಮುಂತಾದ ಪ್ರಾಣಿಗಳು ವಾಸಿಸುತ್ತವೆ. ರಿಫ್ಟದಲ್ಲಿಯೂ ವ್ಹಿಕ್ಟೋರಿಯಾ ಸರೋವರದ ಸುತ್ತಲು ಇರುವ ದಟ್ಟಾದ ಅರಣ್ಯದಲ್ಲಿಯೂ ಕಾಡಾನೆಗಳ ಹಿಂಡುಗಳು ಅಲೆಯುವ ದನ್ನು ಕಾಣಬಹುದು. ಇದೇ ಪ್ರದೇಶವು ನಿದ್ರಾ ರೋಗದ ತವರುಮನೆ ಯಾಗಿರುತ್ತದೆ.

**ಟಾಂಗಾನಿಕಾ:**—೧೮೮೪ ರಲ್ಲಿ ಜರ್ಮನ್ನರು ಈ ಪ್ರಾಂತವನ್ನು ಸಂಪಾದಿಸಿದರು. ಮೊದಲನೆ (೧೯೧೪-೧೮) ಮಹಾಯುದ್ಧದ ನಂತರ ಅದು ಬ್ರಿಟಿಶರ ಕೈಯಲ್ಲಿ ಬಂದಿತು. ಇಲ್ಲಿ ನೌಕರಿಯ ಸಲುವಾಗಿ ಮತ್ತು ತೋಟ ಗಳನ್ನು ಮಾಡಲಿಕ್ಕೆ ತೋಟಿಗರಾಗಿ ಹೋದ ಯುರೋಪಿಯನ್ನ ಜನರ ಸಂಖ್ಯೆಯು ೧೬ ಸಾವಿರ ಇರುತ್ತದೆ. ಇದಲ್ಲದೆ ೬೦ ಸಾವಿರ ಜನರು ಏಶಿಯಾ ಖಂಡದಿಂದ (ಹಿಂದೀ ಜನರು ಸಹಿತ) ಲೂ ಮತ್ತು ೭೫ ಲಕ್ಷ ದೇಶೀಯ ಜನರೂ ಇರುತ್ತಾರೆ.

ಸಮುದ್ರದ ದಂಡೆಯು ಮೇಲೆ ಹಳವುಗಳಿದ್ದು, ಅಲ್ಲಿ ಕಟ್ಟಿಗೆ ಬಿದುರು ಮತ್ತು ಮೇಣಗಳು ಸಿಗುತ್ತವೆ. ಗಿಡಗಳನ್ನು ಕಡಿದು ತೆರವಾದ ಸ್ಥಳಗಳಲ್ಲಿ ಅಕ್ಕಿ, ಕಬ್ಬು, ತೆಂಗು ಮತ್ತು ರಬ್ಬರುಗಳನ್ನು ಬೆಳೆಯುತ್ತಾರೆ. ಇಳುಕಲಿನ ಮೇಲೆ ಬುಂದು ಮತ್ತು ತಪ್ಪಲಿನ ಮೇಲೆ ಹತ್ತಿ, ತಂಬಾಕುಗಳು ಚೆನ್ನಾಗಿ ಬರುತ್ತವೆ. ಹುಲ್ಲುಗಾವಲಿನ ಮೇಲೆ ದನಗಳನ್ನು ಸಾಕುವ ಉದ್ಯೋಗವು ಸಾಗುತ್ತದೆ. ಬಂಗಾರ ಮತ್ತು ಅಭ್ರಕದ ಖಣಿಗಳೂ ಶೋಧಿಸಲ್ಪಟ್ಟಿವೆ. **ದಾರೇಸಲಾಮು** ಎಂಬುದು ಮುಖ್ಯವಾದ ಪಟ್ಟಣವೂ ಬಂದರದ ಸ್ಥಳವೂ ಆಗಿದ್ದು, ಅಲ್ಲಿಂದ ಟಾಂಗಾನಿಕಾ ಸರೋವರದ ಮೇಲಿನ **ಕಿಗೋಮಾ**ದ ವರೆಗೆ ರೇಲುಮಾರ್ಗವಾಗಿರುತ್ತದೆ.

**ಝಾಂಝೀಬಾರ ಮತ್ತು ಪೆಂಬಾ ದ್ವೀಪಗಳು :—** ಈ ನಡುಗಡ್ಡೆಗಳು ಟಾಂಗಾನಿಕಾದ ದಂಡೆಯು ಹತ್ತರ ಇರುತ್ತವೆ. ಇವುಗಳ ಜನಸಂಖ್ಯೆಯು ೨॥ ಲಕ್ಷ ಇದ್ದು, ಈ ದ್ವೀಪಗಳಲ್ಲಿ ತೆಂಗು ಮತ್ತು ಲವಂಗಗಳು ಚೆನ್ನಾಗಿ ಬೆಳೆಯುತ್ತವೆ. ಸಬಕಾರವನ್ನು ತಯಾರಿಸಲಿಕ್ಕೆ ಮಾರ್ಸೆಲ್ಸ ಮತ್ತು ಜಿನೋಆ ಪಟ್ಟಣಗಳಿಗೆ ಕೊಬ್ಬರೀ ಎಣ್ಣೆಯನ್ನು ಕಳಿಸುತ್ತಾರೆ. ಜಗತ್ತಿನೊಳಗೆ ಬೆಳೆಯುವ ಯಾವತ್ತೂ ಲವಂಗದ $\frac{೯}{೧೦}$ ದಷ್ಟು ಲವಂಗವು ಈ ದ್ವೀಪಗಳಲ್ಲಿ ಬೆಳೆಯುತ್ತದೆ. ಝಾಂಝೀಬಾರವು ಮುಖ್ಯವಾದ ಪಟ್ಟಣವೂ ಬಂದರವೂ ಆಗಿರುತ್ತದೆ.

**ಕೇನಿಯಾ :—**೩೪ ಲಕ್ಷ ಜನವಸತಿಯುಳ್ಳ ಈ ಪ್ರಾಂತದ ಕರಾವಳಿಯ ಮೇಲಿನ ಹವೆಯು ಬಹಳ ಉಷ್ಣವಾಗಿರುತ್ತದೆ. ಅಲ್ಲಿ ಬಿಳೀ ಜನರು ವಾಸಿಸುವದಿಲ್ಲ. ಅಲ್ಲಿ ತೆಂಗು, ಅಕ್ಕಿ, ಕಬ್ಬು, ಹತ್ತಿ, ಮತ್ತು ನೆಲಗಡಲೆಯು ಬೆಳೆಗಳು ದೃಷ್ಟಿಗೆ ಬೀಳುತ್ತವೆ. **ಮೊಂಬಾಸಾ** ಎಂಬ ಮುಖ್ಯ ಪಟ್ಟಣವು ಸಣ್ಣದೊಂದು ನಡುಗಡ್ಡೆಯ ಮೇಲಿರುತ್ತದೆ. ಅದರ ಎರಡನೇ ಬದಿಗೆ **ಕಿಲಿಂದಿನೀ** ಎಂಬ ಉತ್ಕೃಷ್ಟವಾದ ಬಂದರವು ಕಟ್ಟಲ್ಪಟ್ಟಿರುತ್ತದೆ. ಬೇರೆ ಬೇರೆ ಉದ್ಯೋಗಗಳಲ್ಲಿ ತೊಡಗಿದ ಹಿಂದೀ ಜನರು ಮೊಂಬಾಸಾದೊಳಗೆ ಬಹಳ ದಿವಸಗಳಿಂದ ಮನೆಮಾಡಿಕೊಂಡಿದ್ದಾರೆ. ಪ್ರಾಚೀನ ಕಾಲದಲ್ಲಿ ಆರಬರು ಗುಲಾಮರ ವ್ಯಾಪಾರವನ್ನೂ ಹಸ್ತಿದಂತಗಳ ವ್ಯಾಪಾರವನ್ನೂ ಇಲ್ಲಿ ಸಾಗಿಸುತ್ತಿದ್ದರು. ಈ ಆರಬ ಜನರು ಝಾಂಝೀಬಾರದ ವರೆಗಿನ ಸಮುದ್ರದಂಡೆಯ ಮೇಲೆ ಹಬ್ಬಿರುತ್ತಾರೆ.

ಕೇನಿಯಾದ ತಪ್ಪಲಿನ ಮೇಲಿನ ಹವೆಯು ತಂಪಾಗಿರುವದರಿಂದ ಅಲ್ಲಿ ಬಿಳೀ ಜನರು ವಾಸಿಸುತ್ತಾರೆ. ಅವರ ವಶದಲ್ಲಿ ಎಷ್ಟೋ ಒಕ್ಕಲತನದ ಭೂಮಿಗಳೂ ತೋಟಪಟ್ಟಿಗಳ ಭೂಮಿಗಳೂ ಇರುತ್ತವೆ. ಮೊಂಬಾಸಾದಿಂದ ೩೦೦ ಮೈಲಿನ ಮೇಲಿರುವ **ನೈರೋಬೀ** ಎಂಬ ಮುಖ್ಯ ಪಟ್ಟಣದವರೆಗೆ ರೇಲು ಮಾರ್ಗವನ್ನೂ, ಮೋಟಾರುಗಳ ಸಲುವಾಗಿ ಲೈನುದಾರಿಯನ್ನೂ ಮಾಡಿದ್ದಾರೆ. ತಪ್ಪಲಿನ ಮೇಲಿರುವ ಹುಲ್ಲು ಪ್ರದೇಶದಲ್ಲಿ ಜಿರಾಫ್, ಝಿಬ್ರಾ, ಚಿಗರಿ ಮುಂತಾದ ಬೇಟೆಯ ಪಶುಗಳು ಸಿಗುತ್ತವೆ. ಆದ್ದರಿಂದ ಬೇಟೆಗಾರರು ಬೇಟೆಯಾಡಲಿಕ್ಕೆ ಆಗಾಗ್ಗೆ ಅಲ್ಲಿ ಬರುತ್ತಿರುತ್ತಾರೆ. ಆನೆ, ಗಂಡಕ, ಸಿಂಹ ಮುಂತಾದ ವನ್ಯ ಪಶುಗಳು ದೃಷ್ಟಿಗೆ ಬೀಳುತ್ತವೆ.

ಬಿಳೀ ಜನರು ವಿಶೇಷವಾಗಿ ಬುಂದು ಮತ್ತು ಸಿಸಲಗಳನ್ನು ಬೆಳೆಯುತ್ತಾರೆ. ಸಿಸಲ ಎಂಬ ಗಿಡವು ಅನನಸದ ಗಿಡದ ಹಾಗೆ ಇರುತ್ತದೆ. ಅದರ ಉದ್ದವಾದ ಗರಿಗಳಿಂದ ಗಟ್ಟಿಯಾದ ಎಳೆಗಳು ಹೊರಡುತ್ತವೆ. ಅವುಗಳಿಂದ ತಯಾರಿಸಿದ ಹಗ್ಗಗಳನ್ನು ಆಸ್ಟ್ರೇಲಿಯಾ ಮತ್ತು ಕಾನಡಾ ದೇಶಗಳಿಗೆ ಗೋದಿಯನ್ನು ಕೊಯ್ದು ಬಳಿಕ ಸಿವುಡುಗಳನ್ನು ಕಟ್ಟುವದರ ಸಲುವಾಗಿ ಕಳಿಸುತ್ತಾರೆ. ಗೋದಿ, ಜವೆಗೋದಿ, ಮತ್ತು ಗೋವಿನ ಜೋಳಗಳು ತಪ್ಪಲಿನ ಮೇಲಿನ ಹುಟ್ಟುವಳಿಗಳಾಗಿರುತ್ತವೆ. ಹುಲ್ಲುಗಾವಲುಗಳ ಮೇಲೆ ದನಗಳ ದೊಡ್ಡ ದೊಡ್ಡ ಹಿಂಡುಗಳನ್ನು ಸಾಕುತ್ತಾರೆ. ಆದರೆ ಇಲ್ಲಿಯ ಮಸಾಈ ಎಂಬ ಜನರು ದನಗಳೇ ತಮ್ಮ ಸಂಪತ್ತು ಎಂದು ತಿಳಿಯುವದರಿಂದ ಅವರು ಅವುಗಳನ್ನು ಮಾರುವದಿಲ್ಲ. ಅಥವಾ ಕಟುಕರಿಗೂ ಕೊಡುವದಿಲ್ಲ. ಇದರಿಂದ ಮಾಂಸ ಮತ್ತು ತೊಗಲುಗಳ ವ್ಯಾಪಾರವು ಚೆನ್ನಾಗಿ ಸಾಗುವಂತಿದ್ದರೂ ಅದು ನಡೆಯುವದಿಲ್ಲ.

ನೈರೋಬೀಯಿಂದ ಹೊರಟ ರೇಲು ಮುಂದೆ ರಿಫ್ಟದ ಕಿರಿಯಗಲಾದ ಕೊಳ್ಳದೊಳಗೆ ಇಳಿದು ಪುನಃ ತಪ್ಪಲವನ್ನು ಏರಿ, ವ್ಹಿಕ್ಟೋರಿಯಾ ಸರೋವರದ ದಂಡೆಯ ಮೇಲಿನ **ಕಿಸುಮೂ** ಬಂದರದ ಮೇಲಿಂದ ಕೆಳಗಿಳಿಯುತ್ತದೆ. ಈ ಸರೋವರದೊಳಗಿಂದ ಹಡಗದಿಂದ ಯುಗಾಂಡಾ ಪ್ರಾಂತಕ್ಕೆ ಹೋಗಲಿಕ್ಕೆ ಬರುತ್ತದೆ. ಇದರೊಳಗೆ ಎಷ್ಟೋ ರಮಣೀಯವಾದ ನಡುಗಡ್ಡೆಗಳುಂಟು. ಅವುಗಳ ಮೇಲೆಲ್ಲ ಸೀಸೀ ನೊಣಗಳ ಉಪದ್ರವವು ಬಹಳವಾಗಿರುವದರಿಂದ ಅಲ್ಲಿ ಜನವಸತಿಯೇ ಇರುವದಿಲ್ಲ.

**ಯುಗಾಂಡಾ:—** ಇದು ತಪ್ಪಲು ಭೂಮಿಯ ಪ್ರಾಂತವಾಗಿದ್ದು ಅಲ್ಲಿಯ ಹವೆಯು ಉಷ್ಣವಾಗಿದ್ದರೂ, ಅದು ಎತ್ತರವಾಗಿರುವದರಿಂದ ಹವೆಯು ಸೌಮ್ಯವಾಗಿರುತ್ತದೆ. ಹತ್ತಿಯು ಈ ಪ್ರಾಂತದೊಳಗಿನ ಮುಖ್ಯ ವಾದ ಹುಟ್ಟುವಳಿಯು. ಬುಂದು ಮತ್ತು ರಬ್ಬರುಗಳನ್ನಾದರೂ ಇಲ್ಲಿ ಬೆಳೆ ಯುತ್ತಾರೆ. ತೊಗಲು, ಹಸ್ತಿದಂತ ಮತ್ತು ತವರುಗಳು ಪರದೇಶಗಳಿಗೆ ಹೋಗುತ್ತವೆ. ಅವು ನಾಯಿಲ ಹೊಳೆಯ ಮಾರ್ಗದಿಂದಲೂ, ಮೊಂಬಾಸಾ ಬಂದರದಿಂದಲೂ ರಫ್ತಾಗುತ್ತವೆ.

ಈ ಪ್ರಾಂತದ ಜನಸಂಖ್ಯೆಯು ೩೦ ಲಕ್ಷ ಇದ್ದು, ಅದರೊಳಗೆ ೧೩ ಲಕ್ಷ ಜನರು ಬಂಗಾಡಾ ಕುಲದವರಿರುತ್ತಾರೆ. ಹತ್ತಿಯ ಹೊಲಗಳಲ್ಲಿ ಈ ಜನರೇ ದುಡಿಯುತ್ತಾರೆ. **ಏಟೇಬೀ** ಎಂಬುದು ರಾಜ್ಯಕಾರಭಾರದ ಸ್ಥಳ ವಾಗಿದ್ದರೂ **ಕಂಪಾಲಾ** ಎಂಬುದು ಮುಖ್ಯವಾದ ಪಟ್ಟಣವಾಗಿರುತ್ತದೆ. ಈ ಪಟ್ಟಣಗಳ ನಡುವೆ ಸರೋವರದ ಮೇಲಿಂದ ಉಗಿ ಹಡಗಗಳು ಓಡಾ ಡುತ್ತವೆ. ಆದರೆ ಈಗ ಯುಗಾಂಡಾದೊಳಗೆ ಉತ್ತಮವಾದ ಲೈನುದಾರಿ ಗಳಾಗಿರುತ್ತವೆ. ಕಂಪಾಲಾದಿಂದ **ಜಿಂಜಾದ** ವರೆಗೆ ಮೋಟಾರಿನಿಂದ ಹೋಗಲಿಕ್ಕೆ ಬರುತ್ತದೆ. ಇಲ್ಲಿಂದ ನಾಯಿಲ ಹೊಳೆಯು ವ್ಹಿಕ್ಟೋರಿಯಾ ಸರೋವರದಿಂದ ಹೊರಹೊರಡುತ್ತದೆ. ಮತ್ತು ಮುಂದೆ ರಿಪನ್ ಎಂಬ ತಡಸಲವನ್ನು ನುಗ್ಗಿ ಆ ಮೇಲೆ ಅಲ್ಬರ್ಟ ಸರೋವರಕ್ಕೆ ಬಂದು ಕೂಡು ತ್ತದೆ. ಅದರೊಳಗಿಂದ ಹೊರಟ ಮೇಲೆ ತುಸು ಅಂತರದ ವರೆಗೆ ಸಣ್ಣ ಸಣ್ಣ ಧಬೆಧಬೆಗಳಿರುವದರಿಂದ ಹಡಗುಗಳಿಂದ ಹೋಗಲಿಕ್ಕೆ ಬರುವದಿಲ್ಲ.

**ಆಂಗ್ಲೋ-ಇಜಿಪ್ಶಿಯನ್ ಸುದಾನ :—** ಈ ಪ್ರಾಂತವು ಆಂಗ್ಲೋ-ಇಜಿಪ್ಶಿಯನ್ ಸುದಾನವೆಂದು ಕರೆಯಲ್ಪಡುವ ಕಾರಣವೇನೆಂದರೆ ಇದರ ರಾಜ್ಯಕಾರಭಾರವನ್ನು ನೋಡುವಂಥ ಪ್ರಮುಖನಾದ ಬ್ರಿಟಿಶ ಅಧಿಕಾರಿ ಯನ್ನು ಇಜಿಪ್ತದ ರಾಜನು ನಿಯಮಿಸುತ್ತಾನೆ. ಇಜಿಪ್ತ ದೇಶದಂತೆಯೇ ನಾಯಿಲ ನದಿಯು ಈ ದೇಶದ ಜೀವಪ್ರಾಣವಾಗಿರುತ್ತದೆ. ಈ ಹೊಳೆಯ ನೀರು ಬಹಳ ರಾಡಿಯಾಗಿರುತ್ತದೆ. ಮತ್ತು ಅದರ ದಂಡೆಯ ಮೇಲೆ ಬೆಳೆ ಯುವ ಹುಲ್ಲಿನ ಗಡ್ಡೆಗಳು ಬಿಚ್ಚಿ ಅವು ನೀರಿನ ಮೇಲಿಂದ ತೇಲುತ್ತ ಬರು ತ್ತವೆ. ಈ ಗಡ್ಡೆಗಳಿಗೆ ಸೂದ ಎಂದೆನ್ನುತ್ತಾರೆ. ಇದರ ಮೇಲಿಂದಲೇ ಈ ಪ್ರಾಂತಕ್ಕೆ ಸುದಾನ ಎಂಬ ಹೆಸರು ಬಿದ್ದಿರುತ್ತದೆಂದು ತಿಳಿಯುತ್ತಾರೆ.

೮೩ ಲಕ್ಷ ಜನವಸತಿಯುಳ್ಳ ಈ ಪ್ರಾಂತದೊಳಗೆ ದಕ್ಷಿಣ ಭಾಗದಲ್ಲಿ ಡೀಂಕಾ ಜಾತಿಯ ನಿಗ್ರೋ ಜನರು ವಾಸಿಸುತ್ತಾರೆ. ಮತ್ತು ಉತ್ತರ ಭಾಗದೊಳಗೆ ಅರಬ ಜನರ ವಂಶಜರಿರುತ್ತಾರೆ. ದಕ್ಷಿಣ ಭಾಗವು ಉತ್ತರ ಭಾಗಕ್ಕಿಂತ ಹೆಚ್ಚು ಎತ್ತರವಾಗಿರುತ್ತದೆ; ಮತ್ತು ಅಲ್ಲಿ ಮಳೆಯಾದರೂ ಹೆಚ್ಚಾಗಿ ಆಗುತ್ತದೆ. ದಕ್ಷಿಣ ಸೀಮೆಯ ಹತ್ತರ ದಟ್ಟಾದ ಅರಣ್ಯವಿದ್ದು ಆದರ ಉತ್ತರದ ಕಡೆಗೆ ಹುಲ್ಲಿನ ಪ್ರದೇಶವಿರುತ್ತದೆ. ಬರ್ಬರದಿಂದ ಉತ್ತರಕ್ಕೆ ಮರುಭೂಮಿಯು ಇರುತ್ತದೆ. ಕೇವಲ ನಾಯಿಲ ಹೊಳೆಯ ದಂಡೆಯಲ್ಲಿ ಬೆಳೆಯುಳ್ಳ ಭೂಮಿಯು ದೃಷ್ಟಿಗೆ ಬೀಳುತ್ತದೆ.

ದಟ್ಟಾದ ಅರಣ್ಯಗಳಲ್ಲಿರುವ ಆನೆಗಳಿಂದ ಬರುವ ಹಸ್ತಿದಂತವೂ ಗಿಡಗಳಿಂದ ಸಿಗುವ ಅಂಟೂ ಮಹತ್ವವಾದ ಹುಟ್ಟುವಳಿಯಾಗಿರುತ್ತವೆ. ಹುಲ್ಲಿನ ಭೂಮಿಯಲ್ಲಿ ದನಗಳನ್ನೂ, ಕುರಿಗಳನ್ನೂ, ಆಡು-ಒಂಟೆಗಳನ್ನೂ ಸಾಕುತ್ತಾರೆ. ನೀರಿನ ಪೂರೈಕೆಯಾದಲ್ಲಿ ಸುದಾನದೊಳಗಿನ ಭೂಮಿಯು ಬಹು ಬೆಳೆಯುಳ್ಳದ್ದಾಗಿರುತ್ತದೆ. ಅದರಿಂದ ಅಬಿಸಿನಿಯಾದೊಳಗಿಂದ ಬಂದ ನೀಲ ನಾಯಿಲ ಹೊಳೆಗೆ ಮಕ್ವಾರಾ ಎಂಬಲ್ಲಿ ಸೆನ್ನಾರ ಎಂಬ ಹೆಸರಿನ ಎರಡು ಮೈಲು ಉದ್ದವಾದ ಅಣೆಕಟ್ಟನ್ನು ಕಟ್ಟಿ ಕಾಲುವೆಗಳಿಂದ ನೀರಿನ ಪೂರೈಕೆಯನ್ನು ಮಾಡಿದ್ದಾರೆ. ಈ ನೀರಿನ ಮೇಲೆ ಹತ್ತಿ ಮತ್ತು ತಂಬಾಕುಗಳ ಬಹು ದೊಡ್ಡ ಬೆಳೆಗಳನ್ನು ತೆಗೆಯುತ್ತಾರೆ. ಇಲ್ಲಿ ಹುಟ್ಟುವ ಹತ್ತಿಯಿಂದ ಉದ್ದ ದಾರವನ್ನು ತೆಗೆಯಲ್ಪಡುವದರಿಂದ ಅವಕ್ಕೆ ಪರದೇಶಗಳಿಂದ ಬಹಳ ಬೇಡಿಕೆಯು ಬರುತ್ತದೆ.

ನೀಲ ನಾಯಿಲ ಮತ್ತು ಶ್ವೇತ ನಾಯಿಲ ಹೊಳೆಗಳ ಸಂಗಮದ ಹತ್ತರ ಇರುವ **ಖಾರ್ಟೂಮ** ಎಂಬುದು ಈ ಪ್ರಾಂತದೊಳಗಿನ ಮುಖ್ಯ ಪಟ್ಟಣವಾಗಿರುತ್ತದೆ. ಇದು ಖಾರ್ಟುಮದ ಭಾಗವೆಂದೇ ಎಣಿಸಲ್ಪಡುತ್ತದೆ. ಅಬಿಸಿನಿಯಾದೊಳಗಿಂದ ಹರಿದು ಬಂದ ಅತಬಾರಾ ಎಂಬ ಹೊಳೆಯು **ಬರ್ಬರ** ಎಂಬ ಪಟ್ಟಣದ ಹತ್ತರ ನಾಯಿಲ ನದಿಗೆ ಬಂದು ಕೂಡುತ್ತದೆ. ಇಲ್ಲಿಂದ ಕೆಂಪು ಸಮುದ್ರದ ಮೇಲಿರುವ **ಪೋರ್ಟಸುದಾನ** ಮತ್ತು **ಸ್ವಾಕಿನ್** ಎಂಬ ಬಂದರಗಳ ವರೆಗೆ ರೇಲುಮಾರ್ಗವು ಹೋಗಿರುತ್ತದೆ. ವಾಡೀಹಾಫಾದಿಂದ ಬಂದ ಮುಖ್ಯವಾದ ರೇಲು ದಾರಿಯು

ಖಾರ್ಟುಮದ ಮೇಲಿಂದ **ಸೆನ್ನಾರ**ದ ವರೆಗೆ ಹೋಗಿರುತ್ತದೆ. ಮತ್ತು ಅದರದೊಂದು ಶಾಖೆಯು ಪಶ್ಚಿಮದ ಕಡೆಗೆ **ಅಲ್ ಓಬೀದ** ಎಂಬ ಓಯಾಸಿಸದೊಳಗಿನ ಪಟ್ಟಣದ ವರೆಗೆ ಹೋಗಿರುತ್ತದೆ.

**ಬ್ರಿಟಿಶ್ ಸೋಮಾಲೀ ಲಂಡ:**— ಈ ಪ್ರಾಂತವೂ ಸೋಕೋತ್ರಾ ಎಂಬ ನಡುಗಡ್ಡೆಯೂ ಕೆಂಪು ಸಮುದ್ರದ ಮುಖದ ಮೇಲಿರುವದರಿಂದ ಅವುಗಳಿಗೆ ಮಹತ್ವವು ಬಂದಿರುತ್ತದೆ. ೭ ಲಕ್ಷ ಜನ ವಸತಿಯುಳ್ಳ ಈ ಪ್ರಾಂತದೊಳಗೆ ಸಮುದ್ರ ದಂಡೆಯ ಹತ್ತರ ಉಸುಬಿನ ತಗ್ಗು ಪ್ರದೇಶವಿರುತ್ತದೆ. ಮತ್ತು ಅದರ ಒಳ ಬದಿಗೆ ಗುಡ್ಡಗಳು ಕಾಣುತ್ತವೆ. ಈ ಪ್ರಾಂತದೊಳಗೆ ತೀರ ಕಡಿಮೆ ಮಳೆಯಾಗುತ್ತದೆ. ಹನ್ನೆರಡೂ ತಿಂಗಳು ಹರಿಯುವಂಥ ಹೊಳೆಗಳಿರುವದಿಲ್ಲ. ಅತಿ ಉಷ್ಣತೆಯು ಇರುತ್ತದೆ. ಗುಡ್ಡದೊಳಗಿನ ಕಲ್ಲುಗಳು ಮಿದುವಾದ ಸುಣ್ಣದ ಕಲ್ಲುಗಳಾಗಿರುವದರಿಂದಲೂ ಅವು ನೀರನ್ನು ಹೀರಿಕೊಳ್ಳುವದರಿಂದಲೂ ಅಲ್ಲಿ ದೊಡ್ಡ ದೊಡ್ಡ ಗಿಡಗಳು ಬೆಳೆಯುವದಿಲ್ಲ. ಕಂಟಿ-ಹುಲ್ಲುಗಳ ಹೊರ್ತಾಗಿ ಬೇರೆ ಏನೂ ಬೆಳೆಯುವದಿಲ್ಲ. ಜಾಲಿಯ ಜಾತಿಯ ಗಿಡಗಳು ಮಾತ್ರ ಬೆಳೆಯುತ್ತವೆ. ಅವುಗಳಿಂದ ಅಂಟು ಸಿಗುತ್ತವೆ. ಸೋಮಾಲೀ ಜನರು ಹುಲ್ಲಿನ ಮೇಲೆ ದನ, ಕುರಿ, ಆಡು, ಒಂಟೆ, ಕತ್ತೆ ಮುಂತಾದ ಪ್ರಾಣಿಗಳ ಹಿಂಡುಗಳನ್ನು ಸಾಕುತ್ತಾರೆ. ತೊಗಲು ಮತ್ತು ಅಂಟು **ಬರ್ಬೆರಾ** ಮತ್ತು ಝೀಲಾ ಬಂದರುಗಳಿಂದ ಏಡನಕ್ಕೆ ಹೋಗಿ, ಅಲ್ಲಿಂದ ಮುಂದೆ ಅವು ಯುರೋಪಕ್ಕೆ ಕಳಿಸಲ್ಪಡುತ್ತವೆ. **ಸೋಕೋತ್ರಾ** ದ್ವೀಪದ ಹವೆಯು ಆರ್ದ್ರವಾದದ್ದಿರುತ್ತದೆ. ಅಲ್ಲಿಯ ಭೂಮಿಯು ಬೆಳೆಯುಳ್ಳದ್ದಿರುತ್ತದೆ. ಆದರೆ ಮಹತ್ವವಾದ ಪಟ್ಟಣಗಳಿರುವದಿಲ್ಲ.

**ಹಿಂದೀ ಮಹಾ ಸಾಗರದೊಳಗಿನ ಕೆಲ ನಡುಗಡ್ಡೆಗಳು :**— ಹಿಂದೀ ಮಹಾ ಸಾಗರದೊಳಗೆ **ಸೆಶೆಲ್** ಎಂಬ ಹೆಸರಿನ ದ್ವೀಪಗಳ ಒಂದು ಗುಂಪು ವಿಷುವ-ವೃತ್ತದ ಪ್ರದೇಶದೊಳಗಿರುತ್ತದೆ. ಪ್ರಾಚೀನ ಕಾಲದಲ್ಲಿ ಸಮುದ್ರಗಳ್ಳರು ಇಲ್ಲಿ ಆಶ್ರಯಿಸುತ್ತಿದ್ದರು. ಆದರೆ ಈಗ ಇಲ್ಲಿಂದ ಕೊಬ್ಬರಿ ಮತ್ತು ಮಸಾಲೆಯ ಸಾಮಾನುಗಳನ್ನು ಪರದೇಶಗಳಿಗೆ ಕಳಿಸುತ್ತಾರೆ. ಈ ದ್ವೀಪಗಳ ದಂಡೆಯಲ್ಲಿ ಆವಿಗಳು ಸಿಗುತ್ತವೆ. ಅವುಗಳ ಬೆನ್ನುಗಳನ್ನು

ಯುರೋಪಕ್ಕೆ ಕಳಿಸುತ್ತಾರೆ. ಇಲ್ಲಿಯ ಜನವಸತಿಯು ಸುಮಾರು ೩೬ ಸಾವಿರ ಇರುತ್ತದೆ.

ಇಲ್ಲಿಂದ ಸುಮಾರು ಒಂದು ಸಾವಿರ ಮೈಲಿನ ಮೇಲೆ **ಮಾರಿಶಸ್** ಎಂಬ ದ್ವೀಪವಿರುತ್ತದೆ. ಇದು ಅನುಕ್ರಮವಾಗಿ ಪೋರ್ತಗೀಜ, ಫ್ರೆಂಚ ಮತ್ತು ಬ್ರಿಟಿಶರ ವಶದಲ್ಲಿ ಬಂದಿತು. ಇಲ್ಲಿ ಕಬ್ಬು ವಿಪುಲವಾಗಿ ಬೆಳೆಯು ವದಲ್ಲದೆ ಅದು ಬಹು ಮೇಲಾದದ್ದಿರುತ್ತದೆ. ಇಲ್ಲಿಯ ಮುಖ್ಯ ಪಟ್ಟಣವು **ಪೋರ್ಟ ಲುಈ** ಎಂಬುದಾಗಿರುತ್ತದೆ. ಸುಏಜದ ಕಾಲುವೆಯು ಆಗುವದ ಕ್ಕಿಂತ ಮುಂಚೆ, ಯುರೋಪದಿಂದ ಹಿಂದುಸ್ಥಾನಕ್ಕೆ ಬರುವ ಹಾದಿಯಲ್ಲಿ ಈ ದ್ವೀಪವು ಇರುವದರಿಂದ, ಅದಕ್ಕೂ **ಪೋರ್ಟ ಲುಈ** ಪಟ್ಟಣಕ್ಕೂ ಆ ಕಾಲದಲ್ಲಿ ಬಹಳ ಮಹತ್ವವಿತ್ತು. ಈಗ ಅದು ಸ್ವಾಭಾವಿಕವಾಗಿಯೇ ಕಡಿ ಮೆಯಾಗಿರುತ್ತದೆ. ಈ ನಡುಗಡ್ಡೆಯಲ್ಲಿ ೪॥ ಲಕ್ಷ ಜನವಸತಿಯಿದು ಅದ ರಲ್ಲಿ ೨॥ ಲಕ್ಷ ಹಿಂದೀ ಜನರಿರುತ್ತಾರೆ.

## ೨೨ನೇ ಪ್ರಕರಣ

# ಬ್ರಿಟಿಶ ಪಶ್ಚಿಮ ಆಫ್ರಿಕಾ

### ಅಟಲಾಂಟಿಕ ಮಹಾ ಸಾಗರದಲ್ಲಿರುವ ಬ್ರಿಟಿಶರ ಅಧೀನ ದಲ್ಲಿರುವ ನಡುಗಡ್ಡೆಗಳು, ಬ್ರಿಟಿಶರ ಆಳಿಕೆಯಲ್ಲಿರುವ ಬೇರೆ ಪ್ರದೇಶಗಳು, ಸುಯೇಜದ ಕಾಲುವೆ, ಪಲೆಸ್ಟಾಯಿನ್, ಮತ್ತು ಇರಾಕ.

**ಬ್ರಿಟಿಶ ಪಶ್ಚಿಮ ಆಫ್ರಿಕಾ :— ಗ್ಯಾಂಬಿಯಾ, ಸಿಯಿರಾಲಿಓನ, ಗೋಲ್ಡ ಕೋಸ್ಟ, ಮತ್ತು ನಾಯಜೇರಿಯಾ** ಎಂಬ ನಾಲ್ಕು ಪ್ರಾಂತ ಗಳು ಈ ವಿಭಾಗದಲ್ಲಿ ಬರುತ್ತವೆ. ಇವುಗಳಿಗೆ ಗಿನೀ ಆಖಾತದೊಳಗಿನ ಪ್ರದೇ ಶಗಳೆಂತಲೂ ಅನ್ನುವರು. ಇವುಗಳಲ್ಲಿ ನಾಯಜೇರಿಯಾ ಪ್ರಾಂತವು ಎಲ್ಲಕ್ಕೂ ದೊಡ್ಡದಾಗಿರುತ್ತದೆ. ಆಫ್ರಿಕೆಯ ಪೂರ್ವ ಭಾಗದೊಳಗೆ ಬ್ರಿಟಿ ಶರ ರಾಷ್ಟ್ರಕೂಟದ ಪ್ರದೇಶವು ಸುದಾನದಿಂದ ಆಫ್ರಿಕೆಯ ದಕ್ಷಿಣದ ತುದಿಯ ವರೆಗೆ ಒಂದೇ ಸವನೆ ಹಬ್ಬಿರುತ್ತದೆ; ಆದರೆ ಪಶ್ಚಿಮ ದಂಡೆಯ ಮೇಲಿನ ಪ್ರದೇಶಗಳು ಒಂದರಿಂದೊಂದು ವಿಂಗಡಿಸಲ್ಪಟ್ಟಿದ್ದು, ನಡುವೆ ಫ್ರಾನ್ಸಕ್ಕೆ ಸೇರಿದ ಪ್ರಾಂತವಿರುತ್ತವೆ. ಪೂರ್ವದ ಕಡೆಗಿರುವ ಪ್ರದೇಶದೊಳಗೆ ಉನ್ನತ ವಾದ ತಪ್ಪಲು ಪ್ರದೇಶದ ಬಹು ದೊಡ್ಡ ಭಾಗವು ಸಮಾವೇಶವಾಗಿರುವದ ರಿಂದ, ಅಲ್ಲಿ ಯುರೋಪಿಯನ್ ಜನರಿಗೆ ಮನೆ ಮಾಡಿಕೊಂಡಿರಲಿಕ್ಕೆ ಅನು ಕೂಲವಾಗಿರುತ್ತದೆ. ಆ ಮಾನದಿಂದ ಪಶ್ಚಿಮದ ಕಡೆಗಿರುವ ಪ್ರದೇಶವು ತಗ್ಗಾಗಿದ್ದರಿಂದ ಅಲ್ಲಿಯ ಹವೆಯು ಆರ್ದ್ರವಾದದ್ದೂ, ಉಷ್ಣವಾದದ್ದೂ ಆಗಿ ರುವದಲ್ಲದೆ ಅನಾರೋಗ್ಯಕರವಾಗಿರುತ್ತದೆ. ಆದ್ದರಿಂದ ಅದಕ್ಕೆ 'ಬಿಳೀ ಜನರ ಸ್ಮಶಾನ' ವೆಂದು ಕರೆಯುತ್ತಾರೆ. ಪೂರ್ವದ ಕಡೆಯ ಪ್ರಾಂತವು ಬ್ರಿಟಿಶರಿಗೆ ತೀರ ಇತ್ತಲಾಗಿ ಸಿಕ್ಕಿರುತ್ತದೆ; ಆದರೆ ಪಶ್ಚಿಮದ ಕಡೆಯ ಪ್ರದೇಶವು ಎರಡು ಮೂರು ನೂರು ವರ್ಷಗಳ ಹಿಂದೆ ಅವರ ವಶದಲ್ಲಿ ಬಂದಿ


ಸೆನೆಗಾಲ ನದಿ
ಸೆನೆಗಾಲ (ಫ್ರೆಂಚ)
ಟಿಂಬಕ್ಟು
ನಾಯಜರ ನದಿ
ಟಿಂಬಕ್ಟೂಕಡೆ
ತ್ರಿಪೋಲಿಕಡೆ
ಈಜಿಪ್ತದಕಡೆ
ಚಾಡಸರೋವರ
ಭಾಥರ್ಸ್ಟ
ಗ್ಯಾಂಬಿಯಾ
ಗ್ಯಾಂಬಿಯಾ ನದಿ
ಫ್ರೆಂಚ
ಸುದಾನ
ಪೋರ್ತುಗೀಜ ಗಿನಿ
ಕಾನೋ
ಝರಿಯಾ
ನಾ ಯ ಜೀ ರಿ ಯಾ
ಗೋಲ್ಡ
ಡಾಹೋಮೆ (ಫ್ರೆಂಚ)
ಜೆಬಾ
ಕೋಸ್ಟ
ಕುಮಾಸೀ
ಸಿಏರಾ
ಫ್ರೀಟಾವುನ
ಲಿಓನ್
ಮನ್ರೋವಿಯಾ
ಲಾಯಬೇರಿಯಾ
ಆಯವ್ಹರಿ ಕೋಸ್ಟ (ಫ್ರೆಂಚ)
ಆಕ್ರಾ
ಸಕೊಂಡೀ
ಟಾಕೋರಾಡೀ
ಲಗೋಸ
ಬೆನೂನದಿ
ಉದೀ
ಪೋರ್ಟಹಾರ್ಕೋರ್ಟ
ಫ್ರೆಂಚರ ಪ್ರದೇಶ
ಫರ್ನಾಂಡೋಪೋ
ಗಿನೀ ಆಖಾತವು

ರುತ್ತದೆ. ಗಿನೀ ಆಖಾತದ ಮೇಲಿರುವ ಗೋಲ್ಡಕೋಸ್ಟಕ್ಕೂ ಇಂಗ್ಲಂಡದೊಳಗಿನ ಗಿನೀ ಎಂಬ ಬಂಗಾರದ ನಾಣ್ಯಕ್ಕೂ ಇರುವ ಸಂಬಂಧವನ್ನು ಲಕ್ಷದಲ್ಲಿಡುವಂತೆ ಆದೆ.

ಸಮುದ್ರ ದಂಡೆಯಿಂದ ಈ ಪ್ರದೇಶದ ಒಳಬಾಜುವಿಗೆ ಹೋದಂತೆ ಮೂರು ಪ್ರಕಾರಗಳು ಕಂಡುಬರುತ್ತವೆ. ಮೊಟ್ಟಮೊದಲು ತಗ್ಗಾದ, ಸಪಾಟಾದ ಮತ್ತು ಅನಾರೋಗ್ಯಕರವಾದ ಸಮುದ್ರ ದಂಡೆಯ ಪಟ್ಟಿಯು ದೃಷ್ಟಿಗೆ ಬೀಳುತ್ತದೆ. ತೀರ ಸಮುದ್ರದ ದಂಡೆಗೆ ಹತ್ತಿ ಜವುಳು ಭೂಮಿಯಲ್ಲಿ ಬೆಳೆಯುವಂಥ ಗಿಡಗಂಟೆಗಳ ಹಳವುಗಳಿರುತ್ತವೆ. ಮತ್ತು ಅಲ್ಲಿ ಚಳಿಜ್ವರದ ಪಿಡುಗು ಇರುತ್ತದೆ. ಈ ಪ್ರಕಾರದ ಪ್ರದೇಶವು ವಿಶೇಷವಾಗಿ ನಾಯಜರ ಎಂಬ ಹೊಳೆಯ ಮುಖದ ಹತ್ತರ ಕಂಡು ಬರುತ್ತದೆ. ನಾಯಜರದ ಹೊರ್ತಾಗಿ ಸಣ್ಣಪುಟ್ಟ ಹೊಳೆಗಳು ಎಷ್ಟೋ ಇರುತ್ತವೆ. ಅವು ತಮ್ಮ ಸಂಗಡ ರೇವೆಯನ್ನು ಬಹಳವಾಗಿ ತರುತ್ತವೆ. ಆದರೆ ಇಲ್ಲಿ ಮಹಾಸಾಗರಕ್ಕೆ ಕಸುವಿನಿಂದ ಏರಿಕೆಯು ಬರುವದರಿಂದ ಈ ರೇವೆಯು ಸಮುದ್ರದೊಳಗೆ ಹರಿದುಹೋಗದೆ ಅದು ದಂಡೆಯ ಮೇಲೆ ಕೂಡಿಬೀಳುತ್ತದೆ.

ಸಮುದ್ರದಂಡೆಯ ಪಟ್ಟಿಯು ಮುಗಿದ ಬಳಿಕ ಒಳಭಾಗದಲ್ಲಿರುವ ತಪ್ಪಲಿನ ಮೇಲೆ ಏರಿ ಹೋಗಬೇಕಾಗುತ್ತದೆ. ಅಲ್ಲಿಯ ಉಷ್ಣತಾಮಾನವು ೮೦° ಇರುತ್ತದೆ; ಮತ್ತು ಅಲ್ಲಿ ಎರಡು ಮೂರು ನೂರು ಇಂಚಿನಷ್ಟು ಮಳೆಯಾಗುತ್ತದೆ. ಇದರಿಂದ ಅಲ್ಲಿ ದಟ್ಟಾದ ಅರಣ್ಯವು ಮನಬಂದಂತೆ ಬೆಳೆದಿರುತ್ತದೆ. ಅದನ್ನು ದಾಟಿ ಹೋದ ಮೇಲೆ ಉಷ್ಣವಾದ ಸೇವ್ಹನಾದ ಹುಲ್ಲಿನ ಪ್ರದೇಶವು ಇರುತ್ತದೆ. ಅಲ್ಲಿ ಒಕ್ಕಲತನಕ್ಕೆ ಯೋಗ್ಯವಾದ ಭೂಮಿಯೂ, ದನಗಳನ್ನು ಮೇಯಿಸಲಿಕ್ಕೆ ಬರುವ ವಿಸ್ತಾರವಾದ ಉತ್ಕೃಷ್ಟ ಹುಲ್ಲುಗಾವಲುಗಳೂ ಇರುತ್ತವೆ.

**ಗ್ಯಾಂಬಿಯಾ :—** ಈ ಕಿರಿಯಗಲಾದ ಪ್ರದೇಶವು ಗ್ಯಾಂಬಿಯಾ ಹೊಳೆಯ ಎರಡೂ ದಂಡೆಗಳ ಮೇಲೆ ಪಸರಿಸಿರುತ್ತದೆ. ಈ ಹೊಳೆಯ ಮೇಲಿಂದಲೇ ಈ ಪ್ರಾಂತಕ್ಕೆ ಗ್ಯಾಂಬಿಯಾ ಎಂಬ ಹೆಸರು ಬಂದಿರುತ್ತದೆ. ಹೊಳೆಯ ಮುಖದ ಮೇಲಿರುವ **ಬ್ಯಾಥರ್ಸ್ಟ** ಎಂಬುದು ಮುಖ್ಯವಾದ ಪಟ್ಟಣವೂ ಬಂದರದ ಸ್ಥಳವೂ ಆಗಿರುತ್ತದೆ. ಹೊಳೆಯೊಳಗಿಂದ ಹೋಗು

ವಾಗ ಎಷ್ಟೋ ಕಾಡಕೋಣಗಳೂ ಮೊಸಳೆಗಳೂ ಅವುಗಳ ಹಿಂಭಾಗದಲ್ಲಿ ನಿಗ್ರೋ ಜನರು ಮಾಡಿದ ಭತ್ತದ ಗದ್ದೆಗಳೂ ಕಂಡುಬರುವವು. ಹೊಲಗಳ ಆಚೆಗೆ ಇಳುಕಲಿನ ಮೇಲೆ ಹಳವುಗಳಿರುತ್ತವೆ. ಈ ಅರಣ್ಯಗಳ ಆಚೆಯ ಕಡೆಯಲ್ಲಿ ಹುಲ್ಲುಗಾವಲುಗಳ ಭೂಮಿಯ ಮೇಲೆ ದನಗಳ ಹಿಂಡುಗಳು ಮೇಯುವುದನ್ನು ನೋಡಬಹುದು.

ಗ್ಯಾಂಬಿಯಾದಲ್ಲಿ ಜುಲೈ ತಿಂಗಳಿನಿಂದ ಆಕ್ಟೋಬರದ ವರೆಗೆ ಮಳೆಯಾಗುತ್ತದೆ. ಆಗ ಹೊಳೆಯ ಮೇಲಿನ ದೋಣಿಗಳ ಮತ್ತು ಸಣ್ಣ ಸಣ್ಣ ಉಗಿಹಡಗುಗಳ ಓಡಾಟವು ಕಟ್ಟಾಗುತ್ತದೆ. ಅದು ಪುನಃ ನೊವ್ಹೆಂಬರದಿಂದ ಆರಂಭವಾಗುತ್ತದೆ. ಆಗ ಲಿವ್ಹರಪೂಲ ಮತ್ತು ಮಾರ್ಸೆಲ್ಸಗಳಿಂದ ದೊಡ್ಡ ಹಡಗುಗಳು ಬಂದಿರುತ್ತವೆ. ಗ್ಯಾಂಬಿಯಾದೊಳಗೆ ನೆಲಗಡಲೆಯು ವಿಪುಲವಾಗಿ ಬೆಳೆಯುತ್ತದೆ. ಅದನ್ನು ಈ ಹಡಗುಗಳು ಯುರೋಪಕ್ಕೆ ಒಯ್ಯುತ್ತವೆ. ಅಲ್ಲಿ ಅದರಿಂದ ಎಣ್ಣೆಯನ್ನು ತೆಗೆದು ಆ ಎಣ್ಣೆಯಿಂದ ಸಬಕಾರವನ್ನು ಮತ್ತು ಮಾರ್ಗಾರಿನ್ ಎಂಬ ಕೃತ್ರಿಮ ಬೆಣ್ಣೆಯನ್ನು ತಯಾರಿಸುತ್ತಾರೆ; ಮತ್ತು ಚರಟಿನಿಂದ ದನಗಳಿಗೆ ಹಿಂಡಿಯು ಸಿಗುತ್ತದೆ.

ಓಡಾಟದ ದಿವಸಗಳಲ್ಲಿ ಕರಾವಳಿಯ ಮೇಲೆ ದುಡಿಯಲಿಕ್ಕೆ ಬರುವ ನಿಗ್ರೋ ಜನರು ಮಳೆಗಾಲದಲ್ಲಿ ಹಳ್ಳಿಗಳಲ್ಲಿ ಹೊಲಗಳನ್ನು ಮಾಡಲಿಕ್ಕೆ ಹೋಗುತ್ತಾರೆ. ಅಕ್ಕಿ ಮತ್ತು ನೆಲಗಡಲೆಗಳ ಬೆಳೆಗಳು ಕೈಗೆ ಬಂದಕೂಡಲೆ ಬೇಸಿಗೆಯಲ್ಲಿ ಪುನಃ ಉದ್ಯೋಗ ವ್ಯವಸಾಯಗಳ ಸಲುವಾಗಿ ಹೊಳೆಗಳ ಮೇಲೆ ಅಥವಾ ಬಂದರಗಳ ಮೇಲೆ ಬರುತ್ತಾರೆ.

**ಸಿಏರಾಲಿಓನ :**—ಈ ಪ್ರಾಂತದ ಮುಖ್ಯ ಪಟ್ಟಣವಾದ ಫ್ರೀಟಾವುನ್ ಎಂಬುದು ಪಶ್ಚಿಮ ದಂಡೆಯ ಮೇಲಿನ ಎಲ್ಲಕ್ಕೂ ಉತ್ತಮವಾದ ಬಂದರವಾಗಿರುತ್ತದೆ. ಸಿಏರಾಲಿಓನ್ ಈ ಶಬ್ದದ ಅರ್ಥವು ಸಿಂಹ-ಪರ್ವತವೆಂದಿರುತ್ತದೆ. ಬಂದರದ ಹಿಂಬದಿಯಲ್ಲಿ ಸಿಂಹದ ಆಕಾರದ ಒಂದು ಪರ್ವತವಿರುತ್ತದೆ. ಅದರ ಮೇಲಿಂದ ಈ ಪ್ರಾಂತಕ್ಕೆ ಸಿಏರಾಲಿಓನ ಎಂಬ ಹೆಸರು ಬಂದಿರುತ್ತದೆ. **ಫ್ರೀಟಾವುನ್** ದಿಂದ ರೇಲಿನಿಂದ ಅಂತರ್ಭಾಗದೊಳಗೆ ಹೋದರೆ ಅರಣ್ಯವನ್ನು ಕಡಿದು ಹಸನು ಮಾಡಿದ ಬೈಲುಗಳಲ್ಲಿ ನಡುನಡುವೆ ಹಳ್ಳಿಗಳಿದ್ದದ್ದು ಕಂಡು ಬರುತ್ತದೆ. ಅದರಂತೆ ತಾಡವೃಕ್ಷ

ಗಳೂ, ನೆಲಗಡಲೆ ಮತ್ತು ಅಲ್ಲದ (ಕಾರಗೆಣಸು) ಹೊಲಗಳೂ ಕಾಣುವವು. ನಿಗ್ರೋ ಜನರು ತಾಡಫಲಗಳಿಂದ ಎಣ್ಣೆಯನ್ನು ತೆಗೆದು ಅದನ್ನು ಬಂದರಕ್ಕೆ ತರುವರು. ಮತ್ತು ಅಲ್ಲಿ ಅದನ್ನು ದೊಡ್ಡ ದೊಡ್ಡ ಹಡಗುಗಳಿಂದ ಪರ ದೇಶಗಳಿಗೆ ಕಳಿಸುವರು.

**ಗೋಲ್ಡ ಕೋಸ್ಟ :**— ಫ್ರೀಟಾವುನ್‌ವನ್ನು ಬಿಟ್ಟ ಬಳಿಕ ಲಾಯಬೇರಿಯಾ ಮತ್ತು ಆಯನ್ನರೀ ಕೋಸ್ಟ ಎಂಬ ಪ್ರಾಂತಗಳ ಅರಣ್ಯಮಯವಾದ ದಂಡೆಯ ಹೊರಬದಿಯಿಂದ ನಾವು **ಟಾಕೋರಾಡೀ** ಎಂಬ ಬಂದರಕ್ಕೆ ಬರುವೆವು. ಈ ಬಂದರವನ್ನು ದೊಡ್ಡ ರಕಮು ವೆಚ್ಚಮಾಡಿ ೧೯೨೮ರಲ್ಲಿ ತಯಾರಿಸಿದರು. ಈ ದಂಡೆಯ ಮೇಲೆ ಉಸುಕು ಮತ್ತು ಕೆಸರು ಕೂಡಿ ಬೀಳುತ್ತವೆ. ಈ ದೊಡ್ಡ ತೊಂದರೆಯನ್ನು ದೂರಮಾಡಬೇಕಾಯಿತು. ಈ ಬಂದರದಿಂದ ಗೋಲ್ಡಕೋಸ್ಟದೊಳಗಿನ ಮುಖ್ಯ ಪಟ್ಟಣವೂ ಬಂದರವೂ ಆದ **ಅಕ್ರಾ** ಎಂಬದರ ಮಹತ್ವವು ಕಡಿಮೆಯಾಯಿತು. ಅಲ್ಲಿ ಉಗಿಹಡಗುಗಳು ದಂಡೆಯನ್ನು ಬಿಟ್ಟು ದೂರದಲ್ಲಿ ನಿಲ್ಲುತ್ತವೆ. ಜನರನ್ನೂ ಸರಕುಗಳನ್ನೂ ತೊಟ್ಟಿಲಗಳಿಂದ ಸಣ್ಣ ಸಣ್ಣ ಡೋಣಿಗಳಲ್ಲಿ ಇಳಿಸಿ ಬಿಡುತ್ತಾರೆ. ಡೋಣಿಗಳಿಂದ ಸರಕುಗಳನ್ನು ತಲೆಗಳ ಮೇಲೆ ಹೊತ್ತುಕೊಂಡು ದಂಡೆಯ ಮೇಲೆ ಇಳಿಸಬೇಕಾಗುತ್ತದೆ. ಇಲ್ಲಿಂದ ಪರದೇಶಗಳಿಗೆ ಹೋಗುವ ಸರಕುಗಳಲ್ಲಿ ಕೋಕೋ ಇದು ಮಹತ್ವದ್ದಾಗಿರುತ್ತದೆ.

ಕರಾವಳಿಯಿಂದ ಒಳಬದಿಯಲ್ಲಿ ಕೋಕೋದ ದೊಡ್ಡ ದೊಡ್ಡ ತೋಟಗಳಿರುತ್ತವೆ. ಇದರ ಹಣ್ಣುಗಳು ೮–೧೦ ಇಂಚು ಉದ್ದವಾಗಿರುತ್ತವೆ. ಮತ್ತು ಅವು ಹಣ್ಣಾಗಿ ಕೆಂಪಗಾದ ಬಳಿಕ ಅವುಗಳನ್ನು ಇಳಿಸುತ್ತಾರೆ. ಅವುಗಳೊಳಗಿನ ಬೀಜಗಳನ್ನು ತೆಗೆದು ಒಣಗಿಸಿ ಆ ಮೇಲೆ ಅವುಗಳನ್ನು ಚೀಲುಗಳಲ್ಲಿ ತುಂಬುತ್ತಾರೆ. ಅಕ್ರಾ ಅಥವಾ **ಸೆಕೊಂಡೀ** ಬಂದರಗಳಿಂದ ಈ ಚೀಲುಗಳು ದೊಡ್ಡ ದೊಡ್ಡ ಉಗಿಹಡಗುಗಳಿಂದ ಲಿವ್ಹರಪೂಲ ಮತ್ತು ಬ್ರಿಸ್ಟಲ ಪಟ್ಟಣಗಳಿಗೆ ಕಳಿಸಲ್ಪಡುತ್ತವೆ.

**ನಾಯಜೇರಿಯಾ :**— ಗೋಲ್ಡ ಕೋಸ್ಟ ಪ್ರಾಂತವನ್ನು ಬಿಟ್ಟ ಬಳಿಕ ಉಗಿಹಡಗದಿಂದ ನಾವು ಲೇಗಾಸ ಎಂಬ ಬಂದರಕ್ಕೆ ತಲಪುತ್ತೇವೆ. ಪೂರ್ವಕಾಲದಲ್ಲಿ ಈ ಬಂದರದೊಳಗಿಂದ ಗುಲಾಮರ ವ್ಯಾಪಾರವು ಸಾಗು

ತ್ತಿತ್ತು. ಅದನ್ನು ತಡೆಯುವದಕ್ಕಾಗಿ ೧೮೬೧ರಲ್ಲಿ ಬ್ರಿಟಿಶರು **ಲೆಗಾಸ** ಬಂದರವಿರುವ ನಡುಗಡ್ಡೆಯನ್ನು ತಮ್ಮ ಕೈವಶಮಾಡಿಕೊಂಡರು. ಆ ಮೇಲೆ ಕ್ರಮೇಣ ಒಳಬದಿಗಿರುವ ನಾಯಜೇರಿಯಾ ಪ್ರಾಂತವನ್ನು ಸಂಪಾದಿಸಿದರು. ಈ ಪ್ರಾಂತವ ಜನಸಂಖ್ಯೆಯು ೨ ಕೋಟಿ ಇದ್ದು, ಅಲ್ಲಿ ಲೆಗಾಸ ಎಂಬ ಮುಖ್ಯ ಪಟ್ಟಣವಿರುತ್ತದೆ.

ಲೆಗಾಸದಿಂದ ರೇಲಿನಿಂದ ಅಂತರ್ಭಾಗದೊಳಗೆ ಹೋಗುವಾಗ ಮೊಟ್ಟ ಮೊದಲು ಉಷ್ಣಪ್ರದೇಶದೊಳಗಿನ ಬಹಳ ಮಳೆಯಾಗುವ ದಟ್ಟಾದ ಅರಣ್ಯ ದೊಳಗಿಂದ ಹೋಗಬೇಕಾಗುತ್ತದೆ. ಈ ಅರಣ್ಯದಲ್ಲಿ ತಾಡವೃಕ್ಷ, ರಬ್ಬರ, ಮಹೋಗನೀ ಮುಂತಾದ ವೃಕ್ಷಗಳು ದಟ್ಟಾಗಿ ಬೆಳೆದಿರುತ್ತವೆ. ಗಿಡ ಗಳನ್ನು ಕಡಿದು ಬೈಲು ಮಾಡಿದ ಸ್ಥಳಗಳಲ್ಲಿ ಬಾಳೆ, ಕೋಕೋ ಮುಂತಾ ದವುಗಳನ್ನು ಹಚ್ಚಿರುತ್ತಾರೆ. ಆದರೂ ಈ ಅರಣ್ಯಮಯವಾದ ಪ್ರದೇಶ ದೊಳಗಿನ ಜನವಸತಿಯು ತೀರ ವಿರಲವಾಗಿರುತ್ತದೆ. ಬಹತರ ಯಾವತ್ತೂ ಜನರು ಪಟ್ಟಣಗಳಲ್ಲಿ ವಾಸಿಸುತ್ತಾರೆ. ಅಲ್ಲಿ ಕೈಮಗ್ಗದ ಮೇಲೆ ನೇಯುವ, ಧಾತುವಿನ ವಸ್ತು ಮತ್ತು ಪಾತ್ರೆಗಳನ್ನು ತಯಾರು ಮಾಡುವ ಉದ್ಯೋಗ ಗಳನ್ನು ಮಾಡುತ್ತಾರೆ.

ಈ ಹಳವುಗಳೊಳಗಿಂದ ರೇಲುದಾರಿಯು ಮುಂದೆ ತಂಪಾದ ತಪ್ಪಲು ಭೂಮಿಯ ಮೇಲೆ ಏರುತ್ತ ಹೋಗುತ್ತದೆ. ಅಲ್ಲಿಂದ ಮುಂದೆ ಒಣಗಾದ ಹುಲ್ಲಿನ ಪ್ರದೇಶವು ಹತ್ತುತ್ತದೆ. ಈ ಪ್ರದೇಶವಲ್ಲಿ ಮಳೆಯು ತೀರ ತುಸು ಆಗುತ್ತದೆ. ಅಲ್ಲಿ ದನಗಳ ಹಿಂಡುಗಳು ಮೇಯುತ್ತವೆ. ಭೂಮಿಯಲ್ಲಿ ಗೋವಿನ ಜೋಳ, ಹತ್ತಿ, ಕಬ್ಬು ಮತ್ತು ಯಾಮ ಮುಂತಾದ ಬೆಳೆಗಳನ್ನು ಬೆಳೆಯುತ್ತಾರೆ.

**ಜೆಬ್ಬಾ** ಎಂಬಲ್ಲಿ ನಾಯಜರ ಹೊಳೆಯನ್ನು ದಾಟಿ ಆಚೆಯ ಕಡೆಗಿ ರುವ ಉತ್ತರ ನಾಯಜೇರಿಯಾದೊಳಗೆ ಹೋಗಬೇಕಾಗುತ್ತದೆ. ಈ ಭಾಗವು ಹವೆಯ ದೃಷ್ಟಿಯಿಂದ ಒಳಿತಾಗಿರುತ್ತದೆ. ಅದರೊಳಗೆ ಒಂದು ಕೋಟಿ ನಿಗ್ರೋ ಜನರೂ ಒಂದು ಸಾವಿರ ಯುರೋಪಿಯನ್ನರೂ ವಾಸಿಸು ತ್ತಾರೆ. ಸಂಸ್ಥಾನಿಕರೂ ಬ್ರಿಟಿಶರ ಮೇಲ್ವಿಚಾರಣೆಯ ಕೆಳಗೆ ರಾಜ್ಯಕಾರ ಭಾರವನ್ನು ನಡೆಯಿಸುತ್ತಾರೆ. ಇದಕ್ಕೂ ಮುಂದೆ ಹೋಗಲು ತಪ್ಪಲಿನ

ಮೇಲಿನ ಬೈಲುಗಳು ದೃಷ್ಟಿಗೆ ಬೀಳುತ್ತವೆ. ಅಲ್ಲಿ ಗೋಡೆಗಳನ್ನು ಕಟ್ಟಿ ಭದ್ರಮಾಡಿದ ಊರುಗಳೂ ಊರ ಹೊರಗೆ ಗೋವಿನ ಜೋಳ ಮತ್ತು ಹತ್ತಿಯ ಹೊಲಗಳೂ ಕಂಡು ಬರುತ್ತವೆ.

**ಝೂರಿಯಾ**ದಿಂದ **ಬೌಚೀ** ವರೆಗೆ ತಪ್ಪಲಿನ ಮೇಲಿಂದ ರೇಲು ಮಾರ್ಗದ ಒಂದು ಶಾಖೆಯು ಹೋಗಿರುತ್ತದೆ. ಈ ತಪ್ಪಲಿನ ಮೇಲೆ ತವರು ವಿಪುಲವಾಗಿ ಸಿಗುತ್ತದೆ. ಝೂರಿಯಾದಿಂದ **ಕಾನೋ**ದ ವರೆಗೆ ರೇಲು ದಾರಿಯುಂಟು. ಮತ್ತು ಲೈನುದಾರಿಯಾದರೂ ಇರುತ್ತದೆ. ಈ ಲೈನು ದಾರಿಯಿಂದ ಹತ್ತಿ, ನೆಲಗಡಲೆ, ತೊಗಲು ಮುಂತಾದ ಸರಕುಗಳನ್ನು ಕುದುರೆ, ಕತ್ತೆ, ಒಂಟೆ, ಎತ್ತು ಮುಂತಾದವುಗಳ ಮೇಲೆ ಹೇರಿಕೊಂಡು ತರುತ್ತಾರೆ. ಈ ಲಮಾಣಿ ಜನರು ದಾರಿಯೊಳಗಿನ ಹಿಂಸ್ರ ಪಶುಗಳ ಅಂಜಿಕೆಯಿಂದ ಯಾವಾಗಲೂ ಸಶಸ್ತ್ರರಾಗಿರುತ್ತಾರೆ.

ಕಾನೋದಿಂದ ಮುಂದೆ ಮರುಭೂಮಿಯು ಆರಂಭವಾಗುತ್ತದೆ. ನೂರಾರು ವರುಷಗಳಿಂದ ಕಾನೋ ಪಟ್ಟಣವು ವ್ಯಾಪಾರದ ಸ್ಥಳವೆಂದು ಪ್ರಸಿದ್ಧಿಯನ್ನು ಪಡೆದಿರುತ್ತದೆ. ಇಲ್ಲಿ ಇಜಿಪ್ತ, ತ್ರಿಪೋಲಿ, ಟಿಂಬಕ್ಟೂ, ಗಿನೀ ಆಖಾತ ಮುಂತಾದ ನಾಲ್ಕೂ ಕಡೆಯ ದೇಶಗಳಿಂದ ಬರುವ ಸರಕುಗಳ ವ್ಯಾಪಾರವು ಸಾಗುತ್ತದೆ. ಇಲ್ಲಿಯ ಪೇಟೆಯೊಳಗೆ ತೊಗಲು, ಶಹಾಮೃಗದ ಗರಿ, ಉಪ್ಪು, ಅರಿವೆ, ಖಜೂರು, ಪಾತ್ರೆ, ಚಾಪಿ, ಗುಡಾರು ಮುಂತಾದ ಎಷ್ಟೋ ತರದ ಸರಕುಗಳು ದೃಷ್ಟಿಗೆ ಬೀಳುತ್ತವೆ. ನಾಯಜೇರಿಯಾ ದೊಳಗೆ ರೇಲು ಮಾರ್ಗವು ಹೆಚ್ಚಾದ ಹಾಗೆ ಲೈನುದಾರಿಗಳ ಮೇಲಿನ ಓಡಾಟವು ಕಡಿಮೆಯಾಗುತ್ತಲಿದೆ.

**ಅಟ್ಲಾಂಟಿಕ ಮಹಾ ಸಾಗರದಲ್ಲಿ ಬ್ರಿಟಿಶರ ಅಧೀನದಲ್ಲಿದ್ದ ನಡುಗಡ್ಡೆಗಳು :—** ಅಟಲಾಂಟಿಕ ಮಹಾ ಸಾಗರದೊಳಗೆ **ಅಸೆನ್ಶನ್** ಮತ್ತು **ಸೆಂಟ ಹೆಲಿನಾ** ಎಂಬ ಜ್ವಾಲಾಮುಖೀ ನಿರ್ಮಿತವಾದ ಎರಡು ದ್ವೀಪಗಳುಂಟು. ಇವು ಉಷ್ಣಕಟಿಬಂಧದೊಳಗಿವೆ. ಅವು ಸಣ್ಣವೂ, ಎತ್ತರವೂ ಇರುವವಲ್ಲದೆ ಆಗ್ನೇಯ ದಿಕ್ಕಿನಿಂದ ಬೀಸುವ ಗಾಳಿಗಳ ಮಾರ್ಗ ದೆಯಲ್ಲಿ ಬರುತ್ತವೆ. ಆದ್ದರಿಂದ ಅವುಗಳ ಹವೆಯು ಸಮಶೀತೋಷ್ಣ ಮತ್ತು ಆರೋಗ್ಯಕರವಾಗಿರುತ್ತದೆ. ಅಸೆನ್ಶನ್ ದ್ವೀಪದ ಮೇಲೆ ನೀರಿನ ಕೊರತೆ

ಇರುವದರಿಂದ ಅಲ್ಲಿ ಒಕ್ಕಲತನವು ಸಾಗುವದಿಲ್ಲ. ಸಮುದ್ರ ದಂಡೆಯ ಮೇಲೆ ಆವಿಗಳ ಬೆನ್ನುಗಳನ್ನು ತೆಗೆದು ಮಾರುವ ಉದ್ಯೋಗವು ನಡೆಯುತ್ತದೆ.

ಇದರ ಆಗ್ನೇಯ ದಿಕ್ಕಿನಲ್ಲಿ ೭೦೦ ಮೈಲಿನ ಮೇಲೆ ಸೆಂಟ್ ಹೆಲಿನಾ ನಡುಗಡ್ಡೆಯು ಇರುತ್ತದೆ. **ಜೇಮ್ಸ ಟಾವುನ್** ಎಂಬ ಮುಖ್ಯ ಪಟ್ಟಣವು ಒಂದು ಉಪಸಾಗರದ ಮೇಲಿರುತ್ತದೆ. ಪಟದ ಹಡಗುಗಳ ಕಾಲದಲ್ಲಿ ಇಲ್ಲಿ ಉಳಕೊಳ್ಳಬೇಕಾಗುತ್ತಿತ್ತು. ಆದರೆ ಈಗ ವೇಗದಿಂದ ಹೋಗುವ ಉಗಿಹಡಗುಗಳಿಗೆ ಉಳಕೊಳ್ಳುವ ಅವಶ್ಯಕತೆ ಬೀಳುವದಿಲ್ಲ. ವಿಶೇಷತಃ ಸುಏಜದ ಕಾಲುವೆಯಾದಾಗಿನಿಂದ ಈ ದ್ವೀಪದ ಮಹತ್ವವು ಉಳಿಯಲಿಲ್ಲ. ಇದರಲ್ಲಿ ಮೊದಲು ದಟ್ಟಾದ ಅರಣ್ಯವಿತ್ತು. ಆದರೆ ಅದೆಲ್ಲ ಮನಬಂದಂತೆ ಕಡಿಯಲ್ಪಟ್ಟಿತು. ಈಗ ಮಹತ್ವದ ಹುಟ್ಟುವಳಿಗಳೇ ಇರುವದಿಲ್ಲ. ಫ್ರಾನ್ಸ ದೇಶದ ಪರಾಕ್ರಮಿಯಾದ ನೆಪೋಲಿಯನ್ ಬೋನಾಪಾರ್ಟನನ್ನು ಕಡೆಗೆ ಇದೇ ದ್ವೀಪದಲ್ಲಿ ಸೆರೆಯಲ್ಲಿಟ್ಟರು. ಮುಂದೆ ಆತನು ಅಲ್ಲಿಯೇ ಮರಣ ಹೊಂದಿದನು.

## ಬ್ರಿಟಿಶರ ಅಧೀನದಲ್ಲಿದ್ದ ಬೇರೆ ಪ್ರದೇಶಗಳು

ಕರಾಚಿಯಿಂದ ಏಡನ್‌ದ ಕಡೆಗೆ ಹೋಗುವಾಗ ದಾರಿಯಲ್ಲಿ **ಕುರಿಯಾ ಮುರಿಯಾ** ಎಂಬ ದ್ವೀಪಗಳು ಆರಬಸ್ತಾನದ ದಂಡೆಯ ಹತ್ತರ ಹತ್ತುತ್ತವೆ. ಮುಂದೆ ಏಡನ್‌ದ ದ್ವೀಪಕಲ್ಪವು ದೃಷ್ಟಿಗೆ ಬೀಳುತ್ತದೆ. **ಏಡನ್** ಬಂದರವು ಬಹು ಮಹತ್ವದ್ದಾಗಿರುತ್ತದೆ. ಅಲ್ಲಿ ಭದ್ರವಾದ ಕೋಟೆಯಿದ್ದು ದಂಡಿನ ಠಾಣ್ಯವಿರುತ್ತದೆ. ಉಗಿಹಡಗುಗಳು ಕಲ್ಲಿದ್ದಲಿಯನ್ನು ತೆಗೆದುಕೊಳ್ಳಲಿಕ್ಕೆ ಅಲ್ಲಿ ನಿಲ್ಲುತ್ತವೆ. ಸುತ್ತುಮುತ್ತಲಿನ ಪ್ರಾಂತದ ವ್ಯಾಪಾರವೂ ಎದುರಿಗಿರುವ ಆಫ್ರಿಕೆಯ ದಂಡೆಯ ವ್ಯಾಪಾರವೂ ಇಲ್ಲಿಂದ ಸಾಗುತ್ತದೆ. ಅರಬಸ್ತಾನದ ದಂಡೆಯ ಮೇಲಿನ ದಕ್ಷಿಣ ಭಾಗವು ಸಹ ಬ್ರಿಟಿಶರ ಛತ್ರದ ಕೆಳಗೆ ಇರುತ್ತದೆ. ಏಡನ್‌ದಿಂದ ಮುಂದೆ ಹೋಗುವಾಗ ಬಾಬೆಲ ಮಾಂಡೆಬ್ ಎಂಬ ಸಾಮುದ್ರಧುನಿಯ ಮೇಲೆ **ಪೆರಿಮ್** ಎಂಬ ನಡುಗಡ್ಡೆಯು ಹತ್ತುತ್ತದೆ. ಇಲ್ಲಿಂದ ಹಡಗುಗಳು ಕೆಂಪು ಸಮುದ್ರದೊಳಗಿಂದ ಹಾಯ್ದು ಸುಏಜದ ಕಾಲುವೆಯೊಳಗೆ ಪ್ರವೇಶ ಮಾಡುತ್ತವೆ.

**ಸಾಯುಪ್ರಸ್ :**—ಪೂರ್ವದಂಡೆಯ ವ್ಯಾಪಾರದ ಮಾರ್ಗವು ಭೂಮಧ್ಯ ಸಮುದ್ರದೊಳಗಿಂದ ಹೋಗಿರುವದರಿಂದ ಜಿಬ್ರಾಲ್ಟರ, ಮಾಲ್ಟಾ ಮತ್ತು ಸಾಯುಪ್ರಸ್ ಎಂಬ ಸ್ಥಳಗಳನ್ನು ಬ್ರಿಟಿಶರು ತಮ್ಮ ವಶದಲ್ಲಿಟ್ಟು ಕೊಂಡಿರುತ್ತಾರೆ. ಸುಏಜ ಕಾಲುವೆಯೊಳಗಿಂದಲೂ ಪಲೆಸ್ಟಾಯಿನ್-ಇರಾಕದೊಳಗಿಂದಲೂ ಹೋಗುವ ವ್ಯಾಪಾರದ ಮಾರ್ಗಗಳ ಮೇಲೆ ಲಕ್ಷ ವಿಡಲಿಕ್ಕೆ ಸಾಯುಪ್ರಸ್ ದ್ವೀಪವು ತಕ್ಕದ್ದಾಗಿರುವದರಿಂದ, ಅದಕ್ಕೆ ಮಹತ್ವವು ಬಂದಿರುತ್ತದೆ. ಇಲ್ಲಿ ಪೂರ್ವಕಾಲದಲ್ಲಿ ತಾಮ್ರವು ಸಿಗುತ್ತಿತ್ತು. ಆದ್ದರಿಂದ ಇದಕ್ಕೆ ಸಾಯುಪ್ರಸ್ ಎಂಬ ಹೆಸರು ಬಂದಿರುತ್ತದೆ. ಸದ್ಯಕ್ಕೆ ಇಲ್ಲಿ ತಾಮ್ರ ಮತ್ತು ಎಸ್ಬೆಸ್ಟಾಸ್ ಎಂಬ ಪದಾರ್ಥವು ಸಿಗುತ್ತವೆ. ಭೂಮಧ್ಯ ಸಾಮುದ್ರಿಕ ಹವೆಯಿರುವದರಿಂದ ಇಲ್ಲಿ ಹಣ್ಣು ಹಂಪಲುಗಳೂ ಕಾಯಿಪಲ್ಯಗಳೂ ಚೆನ್ನಾಗಿ ಬೆಳೆಯುತ್ತವೆ.

**ಮಾಲ್ಟಾ :**— ಇದೊಂದು ಸಣ್ಣ ನಡುಗಡ್ಡೆಯಾಗಿದ್ದರೂ ಅದು ಭೂಮಧ್ಯ ಸಮುದ್ರದ ಮಧ್ಯದಲ್ಲಿರುವದರಿಂದಲೂ, ಸಿಸಿಲೀ ಮತ್ತು ಟ್ಯೂನಿಸ್ ಇವುಗಳ ನಡುವೆ ಇರುವದರಿಂದಲೂ ಅದಕ್ಕೆ ಮಹತ್ವವು ಬಂದಿರುತ್ತದೆ. ಇದು ಆಯುಕಟ್ಟಿನ ಸ್ಥಳದಲ್ಲಿರುವದರಿಂದ ಇದನ್ನು ಒಂದರ ಹಿಂದೊಂದು ಎಷ್ಟೋ ರಾಷ್ಟ್ರಗಳು ಗೆದ್ದುಕೊಂಡವು. ಆದರೆ ನೆಪೋಲಿಯನ್ನನ ಕೂಡ ಆದ ಯುದ್ಧದಲ್ಲಿ ಫ್ರೆಂಚರಿಂದ ಈ ದ್ವೀಪವು ಇಂಗ್ಲೀಷರಿಗೆ ಸಿಕ್ಕಿತು. ಇದರೊಳಗಿನ ಮುಖ್ಯ ಪಟ್ಟಣವಾದ **ವ್ಹಲೆಟ್ಟಾ** ಎಂಬಲ್ಲಿ ಹಡಗುಪಡೆಯನ್ನು ಇಟ್ಟಿರುತ್ತಾರೆ. ಇದು ಉಗಿ ಹಡಗುಗಳಿಗೆ ಕಲ್ಲಿದ್ದಲಿಯನ್ನು ಪೂರೈಸುವ ಸ್ಥಾನವಾಗಿದ್ದು, ವಿಮಾನಗಳ ಠಾಣ್ಯವೂ ಆಗಿರುತ್ತದೆ. ಇಲ್ಲಿಯ ಹವೆಯು ಬಹಳ ಚೆನ್ನಾಗಿರುತ್ತದೆ. ಭೂಮಿಯು ಫಲವತ್ತಾಗಿದ್ದು, ಬಟಾಟೆ ಮತ್ತು ಹಣ್ಣುಗಳು ವಿಪುಲವಾಗಿ ಬೆಳೆಯುತ್ತವೆ. ಕೆತ್ತಿಗೆಯ ಕೆಲಸ ಮಾಡುವದು, ಜಾಳಿಗೆಯ ಅರಿವೆಗಳನ್ನು ನೇಯುವದು ಮಾಲ್ಟೀ ಜನರ ಮುಖ್ಯವಾದ ಉದ್ಯೋಗಗಳಾಗಿರುತ್ತವೆ.

**ಜಿಬ್ರಾಲ್ಟರ್ :**—ಭೂಮಧ್ಯ ಸಮುದ್ರದ ಬಾಯಿಗೆ ಇದ್ದ ೧೪೦೦ ಫೂಟು ಎತ್ತರವಾದ ಈ ಕಲ್ಲುಬಂಡೆಯು ೧೭೧೩ ರಲ್ಲಿ ಬ್ರಿಟಿಶರ ವಶದಲ್ಲಿ ಬಂದಿತು. ಹಡಗುಗಳ ಚಲನವಲನಗಳ ಮೇಲೆ ದೃಷ್ಟಿಯನ್ನಿಡಲಿಕ್ಕೆ

ಇದು ಬಹಳ ಉಪಯೋಗವಾಗಿರುವದರಿಂದ, ಇದನ್ನು ಭದ್ರವಾಗಿ ಮಾಡಿ ಸೈನ್ಯವನ್ನೂ ಮದ್ದು-ಗುಂಡುಗಳನ್ನೂ ಅಲ್ಲಿ ಇಟ್ಟಿರುತ್ತಾರೆ. ಇಲ್ಲಿ ಹಡಗು ಪಡೆಯ ಠಾಣ್ಯವಾದರೂ ಇರುತ್ತದೆ.




ಸುಯೇಜದ ಕಾಲುವೆ

**ಸುಯೇಜ ಕಾಲುವೆ:**—ಸುಯೇಜ ಕಾಲುವೆಯ ಎರಡೂ ಬದಿಯ ಭೂಮಿಯು ಪ್ರತ್ಯಕ್ಷವಾಗಿ ಬ್ರಿಟಿಶರ ಅಧಿಕಾರದಲ್ಲಿರುವದಿಲ್ಲ. ಆ ಪ್ರದೇಶವು ಇಜಿಪ್ತದ ಮಾಲಕೀ ಹಕ್ಕಿನದಾಗಿದೆ. ಆದರೆ ೧೯೩೬ ನೇ ಆಂಗ್ಲೋ-

ಇಜಿಪ್ಸಿಯನ್ ಕರಾರದನ್ವಯ ಸುಯೇಜದ ಕಾಲುವೆಯ ಪ್ರದೇಶದಲ್ಲಿ ಬ್ರಿಟಿಶ ಸೈನ್ಯವು ಕಾಲುವೆಯ ಸಂರಕ್ಷಣೆಯ ಸಲುವಾಗಿ ಇರಿಸಲ್ಪಟ್ಟಿರುವದು. ಈಗ ಇದೇ ಸಂಬಂಧವಾಗಿ ಇಜಿಪ್ತ ಮತ್ತು ಇಂಗ್ಲಂಡ ದೇಶಗಳಲ್ಲಿ ತಿಕ್ಕಾಟ ನಡೆದಿರುವದು. ಮೇಲೆ ಹೇಳಿದ ಠರಾವಿನನ್ವಯ ಮತ್ತು ಸುಯೇಜ ಕಾಲುವೆಯ ಜಾಗತಿಕ ಮಹತ್ವವನ್ನು ನೋಡಿದರೆ ಈ ಕಾಲುವೆಯ ವಿಷಯವಾಗಿ ಹೆಚ್ಚಿಗೆ ತಿಳಿಯುವದು ಅವಶ್ಯವಾಗಿದೆ.

ಕೆಂಪು ಮತ್ತು ಭೂಮಧ್ಯ ಈ ಎರಡೂ ಸಮುದ್ರಗಳನ್ನು ಕಾಲುವೆಯಿಂದ ಒಂದಾಗಿಸುವ ಕಲ್ಪನೆಯು ಇಂದಿನದಲ್ಲ. ಪೂರ್ವದಲ್ಲಿ ಈಗಿದ್ದ ಕಾಲುವೆಯ ಬದಲು ಮತ್ತೊಂದು ಕಾಲುವೆಯಿತ್ತು. ಅದರಂತೆ ಸುಯೇಜದಿಂದ ನಾಯಿಲ ನದಿಯನ್ನು ಕೂಡಿಸುವ ಒಂದು ಕಾಲುವೆಯನ್ನೂ ಕಟ್ಟಿದ್ದರು. ಆದರೆ ಈ ಎರಡೂ ಕಾಲುವೆಗಳು ಕಾಲಾಂತರ ಮುಚ್ಚಿ ಹೋದವು. ಈಗಿದ್ದ ಸುಯೇಜ ಕಾಲುವೆಯನ್ನು ಲೆಸೆಪ್ಸ ಎಂಬ ಫ್ರೆಂಚ ಇಂಜಿನಿಯರನು ತಯಾರಿಸಿದನು. ಈ ಕಾಲುವೆಯು ಸನ್ ೧೮೬೯ ರಿಂದ ಉಪಯೋಗದಲ್ಲಿರುವದು. ಈ ಕಾಲುವೆಯಲ್ಲಿಯ ಹೊಲಸನ್ನು ತೆಗೆದು ಅದನ್ನು ಯಾವಾಗಲೂ ಸ್ವಚ್ಛವಾಗಿಡಬೇಕಾಗುತ್ತದೆ. ಈ ಕಾಲುವೆಯು ಸುಮಾರು ೩೪ ಫೂಟು ಆಳವಿರುವದರಿಂದ ಇದರಲ್ಲಿ ಬಹಳ ದೊಡ್ಡ ಹಡಗುಗಳು ಹೋಗುವದಿಲ್ಲ. ಇದರ ಉದ್ದಳತೆಯು ೧೦೩ ಮೈಲು ಇರುವದು. ಮತ್ತು ಸುಮಾರು ೨೦೦ ಫೂಟು ಅಗಲವಾಗಿರುವದು.

**ಪಲೆಸ್ಟಾಯಿನ್ :**—ಪಲೆಸ್ಟಾಯಿನ್ ಪ್ರದೇಶವು ೧೯೪೮ ರ ವರೆಗೆ ಬ್ರಿಟಿಶರ ಅಧೀನದಲ್ಲಿದ್ದಿತು. ಆದರೆ ೧೯೪೮ ರಲ್ಲಿ ಅದರಲ್ಲಿ ಬಹು ಭಾಗವು ಜ್ಯೂ ಜನರ ಪ್ರಾಂತವಾಗಿ ನಿರ್ಮಿಸಲ್ಪಟ್ಟಿತು. ಆ ಪ್ರದೇಶಕ್ಕೆ 'ಇಸ್ರಾಯಿಲ್' ಎಂಬ ಹೊಸ ಹೆಸರನ್ನು ಇಡಲಾಯಿತು. ಪೂರ್ವದಲ್ಲಿ ಈ ಪ್ರದೇಶವು ಬ್ರಿಟಿಶರ ಸಂರಕ್ಷಣೆಗೆ ಒಳಪಟ್ಟಿದ್ದರಿಂದ ಅದರ ಸಂಕ್ಷಿಪ್ತ ಮಾಹಿತಿಯನ್ನು ಕೊಡಲಾಗಿದೆ.

ಪೋರ್ಟಸಯ್ಯದದಿಂದ ಸುಯೇಜದ ಕಾಲುವೆಯಿಂದ ಹೊರಗೆ ಬಂದ ಮೇಲೆ ಭೂಮಧ್ಯ ಸಮುದ್ರವು ಹತ್ತುವದು. ಆದರೆ ಪೂರ್ವ ದಂಡೆಯಲ್ಲಿ ದಕ್ಷಿಣೋತ್ತರವಾಗಿ "ಇಸ್ರಾಯಿಲ್" ಪ್ರದೇಶವು ಪಸರಿಸಿದೆ. ಈ ಹೊಸ

ದೇಶದ ಕ್ಷೇತ್ರಫಲವು ಸುಮಾರು ೮ ಸಾವಿರ ಚೌ. ಮೈಲು ಇದ್ದು ಸುಮಾರು ೧೪ ಲಕ್ಷ ಜನವಸತಿಯಿರುತ್ತವೆ. **ಟೆಲ್ ಅವ್ವಿವ** ಇಲ್ಲಿಯ ಮುಖ್ಯ ಪಟ್ಟಣ ವಿರುವದು. ಮತ್ತು ಅದರ ಬಂದರವು **ಜಾಫಾ** ಎಂದು ಕರೆಯಲ್ಪಡುವದು. **ಜೆರುಸಲೇಮು** ಎಂಬ ಪ್ರಾಚೀನ ಪಟ್ಟಣದ ಹತ್ತಿರ ಏಸೂ ಕ್ರಿಸ್ತನ ಜನ್ಮ ವಾಗಿದೆ. ಈ ಪಟ್ಟಣದ ಹೊಸ **ಜೆರುಸಲೇಮು** ಎಂಬ ಭಾಗವು ಇಸ್ರಾಯಿಲ್ ರಾಷ್ಟ್ರದ ಅಧಿಕಾರದಲ್ಲಿದ್ದು ಇದೇ ಭಾಗದಲ್ಲಿ ರಾಷ್ಟ್ರದ ರಾಜಧಾನಿ ಯನ್ನು ಸ್ಥಾಪಿಸಿದ್ದಾರೆ.

ಸಮುದ್ರದ ದಂಡೆಗೆ ಹತ್ತಿ ಈ ಪ್ರಾಂತದೊಳಗೆ ತಗ್ಗಾದ ಪ್ರದೇಶ ವಿದ್ದು, ಲೆಬನಾನ್ ಪರ್ವತದ ಪೂರ್ವಕ್ಕೆ ಉಸುಕಿನ ತಪ್ಪಲು ಪ್ರದೇಶವಿರು ತ್ತದೆ. ಸಮುದ್ರ ದಂಡೆಯ ಹತ್ತರ ಭೂಮಧ್ಯ ಸಾಮುದ್ರಿಕ ಹವೆಯಿರುವದ ರಿಂದ (ಚಳಿಗಾಲದಲ್ಲಿ ಮಳೆಯಾಗುವ ಹವೆ) ಕಿತ್ತಳಿ, ನಿಂಬೆ, ದ್ರಾಕ್ಷೆ, ಆಲಿವ್ಹ ಮುಂತಾದ ಹಣ್ಣುಗಳು ಬೆಳೆಯುತ್ತವೆ. ಮತ್ತು ತಪ್ಪಲಿನ ಮೇಲೆ ಕುರಿಗಳನ್ನು ಮೇಯಿಸುತ್ತಾರೆ. **ಜಾಫಾದ** ಕಿತ್ತಳಿ ಹಣ್ಣುಗಳು ಜಗತ್ಪ್ರಸಿದ್ಧ ವಾಗಿರುತ್ತವೆ.

ಮೂಲ ಪೆಲೆಸ್ಟಾಯಿನ್ ಪ್ರದೇಶದ ಪಶ್ಚಿಮ ಭಾಗಕ್ಕೆ ಇಸ್ರಾಯಿಲ್ ರಾಷ್ಟ್ರವೆಂದು ಕರೆಯುತ್ತಾರೆ. ಈ ರಾಷ್ಟ್ರದ ಪೂರ್ವಭಾಗದಲ್ಲಿ ಮಳೆಯು ಕಡಿಮೆ ಆಗುವದರಿಂದ ಆ ಭಾಗವೆಲ್ಲ ನಿರ್ಜನ ಪ್ರದೇಶವಾಗಿರುವದು. ಆದರೂ ಇಸ್ರಾಯಿಲ್ ಜನರು ಆಧುನಿಕ ಒಕ್ಕಲುತನದ ಶಾಸ್ತ್ರದ ಸಹಾಯ ದಿಂದ ಈ ಭಾಗದ ಭೂಮಿಯನ್ನು ಸಾಗುವಳಿ ಮಾಡಿದ್ದಾರೆ; ಮತ್ತು ಈ ಭಾಗದಲ್ಲಿ ಹಣ್ಣಿನ ತೋಟಗಳನ್ನು ಮಾಡಿದ್ದಾರೆ.

**ಇರಾಕ :**—ಮೊದಲನೆಯ (೧೯೧೪-೧೮) ಮಹಾಯುದ್ಧದ ನಂತರ ಈ ದೇಶವು ಬ್ರಿಟಿಶರ ಮೇಲ್ವಿಚಾರಣೆಯಲ್ಲಿ ಬಂದಿತು. ಆದರೆ ಮುಂದೆ ೧೯೩೭ ರಲ್ಲಿ ಅದು ಸ್ವತಂತ್ರ ರಾಷ್ಟ್ರವಾಯಿತು. ಈ ಪ್ರದೇಶವು ಟೈಗ್ರಿಸ್ ಮತ್ತು ಯುಪ್ರೆಟಿಸ್ ನದಿಗಳ ಕಾಣಿಕೆಯ ಪ್ರದೇಶವೆಂದು ಹೇಳಬಹುದು. ಈ ನದಿಗಳ ಮಹಾಪೂರಗಳ ನೀರನ್ನು ಒಡ್ಡು ಹಾಕಿ ತಡೆಹಿಡಿದದ್ದರಿಂದ ಈ ನೀರಿನಿಂದಲೂ ಮತ್ತು ರೇವೆಯಿಂದಲೂ ಈ ದೇಶವು ಬಹಳ ಫಲವತ್ತಾಗಿ ರುತ್ತದೆ. ಈ ದೇಶದಲ್ಲಿ ಹಿಂದಕ್ಕೆ ದೊಡ್ಡ ದೊಡ್ಡ ಸಾಮ್ರಾಜ್ಯಗಳು ಆಗಿ

ಹೋದವು. ಆದರೆ ಈ ದೇಶವು ಅಣೇಕಟ್ಟುಗಳ ನಾಶದ ಮೂಲಕ ಹಾಳು ಬಿದ್ದಿತು. ಆದರೆ ಈಗ ಅಲ್ಲಿಯ ಅಣೇಕಟ್ಟುಗಳನ್ನು ದುರಸ್ತುಮಾಡಿ ಮತ್ತು ಹೊಸ ಯೋಜನೆಗಳನ್ನು ತಯಾರಿಸಿ ಅಲ್ಲಿ ಧಾನ್ಯ ಮತ್ತು ಹತ್ತಿಯನ್ನು ಬೆಳೆಸುತ್ತಾರೆ. ಈ ದೇಶದಲ್ಲಿ ಖಜ್ಜೂರದ ದೊಡ್ಡ ಉತ್ಪನ್ನ ಬರುವದು. **ಮೋಸಲ** ಪಟ್ಟಣದ ಹತ್ತಿರ ಕಲ್ಲೆಣ್ಣೆಯ ಬಾವಿಗಳು ಶೋಧವಾಗಿರುವವು.

**ಬಗದಾದ** ಪಟ್ಟಣವು ಈ ದೇಶದ ರಾಜಧಾನಿಯಾಗಿರುವದು. ಬಸರಾ ಎಂಬುದು ಈ ಪ್ರಾಂತದಿಂದ ಹೊರಗೆ ಹೋಗುವ ಸರಕುಗಳ ಬಂದರವಾಗಿರುವದು. ಪ್ರಾಚೀನ ಕಾಲದ ವೈಭವದ ಕುರುಹುಗಳೂ ಆ ಕಾಲದ ಪ್ರಸಿದ್ಧವಾದ ಪಟ್ಟಣಗಳ ಅವಶೇಷಗಳೂ ಅಲ್ಲಲ್ಲಿ ಕಂಡು ಬರುತ್ತವೆ. ಪ್ರಾಚೀನ ಕಾಲದಲ್ಲಿ ಭಾರತ ದೇಶದೊಂದಿಗೆ ಈ ದೇಶದ ವ್ಯಾಪಾರವು ನಡೆಯುತ್ತಿತ್ತು. ಮತ್ತು ಯುರೋಪಕ್ಕೆ ಹೋಗುವ ಸರಕು ಈ ದೇಶದ ಮಾರ್ಗವಾಗಿಯೇ ಹೋಗುತ್ತಿದ್ದಿತು. ಬಸರಾದಿಂದ ಯುರೋಪಕ್ಕೆ ಹೋಗುವ ರೇಲುಮಾರ್ಗವಿರುತ್ತದೆ. ವಿಮಾನ ಮಾರ್ಗಗಳೂ ಕೂಡ ಈ ದೇಶದೊಳಗಿಂದ ಹೋಗುತ್ತಿವೆ. **ಬಾಹಾರೀನ** ನಡುಗಡ್ಡೆಗಳ ಬಳಿಯಲ್ಲಿ ಮುತ್ತು ತೆಗೆಯುವ ಉದ್ಯೋಗವು ಚೆನ್ನಾಗಿ ನಡೆಯುತ್ತದೆ.

೨೩ನೇ ಪ್ರಕರಣ

# ಸೂರ್ಯಮಾಲೆಯು

## ನಕ್ಷತ್ರಗಳೂ ನಕ್ಷತ್ರ-ಪುಂಜಗಳೂ; ಚಂದ್ರನೂ ಆತನ ಕಲೆಗಳೂ; ಗುರುತ್ವಾಕರ್ಷಣವು.

ಇರುಳಿನಲ್ಲಿ ನಿರಭ್ರವಾದ ಆಕಾಶದ ಕಡೆಗೆ ನೋಡಿದರೆ ಅಗಣಿತವಾದ ನಕ್ಷತ್ರಗಳು ನಮ್ಮ ದೃಷ್ಟಿಗೆ ಬೀಳುತ್ತವೆ. ಅವುಗಳಲ್ಲಿ ಕೆಲವು ದೊಡ್ಡವೂ ಕೆಲವು ಸಣ್ಣವೂ ಆಗಿರುತ್ತವೆ. ಹಲವು ಚಿಕ್ಕೆಗಳು ಲಕಲಕ ಮಿನುಗುತ್ತವೆ. ಆದರೆ ಬೇರೆ ಕೆಲವು ನಕ್ಷತ್ರಗಳ ಪ್ರಕಾಶವು ಸ್ಥಿರವಾಗಿರುತ್ತದೆ. ಸ್ಥಿರವಾದ ಪ್ರಕಾಶವುಳ್ಳ ನಕ್ಷತ್ರಗಳಿಗೆ 'ಗ್ರಹ'ಗಳೆಂತಲೂ ಮಿನುಗುವ ನಕ್ಷತ್ರಗಳಿಗೆ ಚಿಕ್ಕೆಗಳೆಂತಲೂ ಅನ್ನುತ್ತಾರೆ. ಆಕಾಶದೊಳಗಿನ ಕಣ್ಣಿಗೆ ಕಾಣುವ ಮತ್ತು ಕಾಣದೇ ಇರುವ ಅಸಂಖ್ಯ ಗ್ರಹಗಳ ಮತ್ತು ಚಿಕ್ಕೆಗಳ ಸಮೂಹಗಳಿಗೆಲ್ಲ ಕೂಡಿ ವಿಶ್ವ ವೆಂಬ ಹೆಸರನ್ನು ಕೊಡಬಹುದು. ಪೃಥ್ವಿಯ ಮೇಲಿಂದ ನೋಡಿದರೆ ಗ್ರಹಗಳೂ, ಚಿಕ್ಕೆಗಳೂ ಒಂದೇ ಪಾತಳಿಯಲ್ಲಿದ್ದಂತೆ ಕಂಡು ಬರುತ್ತವೆ. ಆದರೆ ವಸ್ತುಸ್ಥಿತಿಯು ಹಾಗಿರುವದಿಲ್ಲ. ಚಂದ್ರನು ಪೃಥ್ವಿಗೆ ಎಲ್ಲ ನಕ್ಷತ್ರಗಳಿಗಿಂತ ಹೆಚ್ಚು ಸಮಿಾಪವಾಗಿರುತ್ತಾನೆ. ಆತನ ಪ್ರಕಾಶವು ಪೃಥ್ವಿಗೆ ಬಂದು ಮುಟ್ಟಲಿಕ್ಕೆ ೧॥ ಸೇಕಂದು ಸಹ ಹತ್ತುವದಿಲ್ಲ. ಆದರೆ ಪೃಥ್ವಿಯಿಂದ ಅತ್ಯಂತ ದೂರದಲ್ಲಿರುವ ಕೆಲವು ಚಿಕ್ಕೆಗಳಿಂದ ಹೊರಟ ಪ್ರಕಾಶವು ಪೃಥ್ವಿಗೆ ಬಂದು ತಲಪುವದಕ್ಕೆ ೧ ಲಕ್ಷ ೪೦ ಸಾವಿರ ವರುಷಗಳು ಬೇಕಾಗುವದೆಂದು ಶಾಸ್ತ್ರಜ್ಞರ ಮತವಿರುತ್ತದೆ. ಇದರ ಮೇಲಿಂದ ಈ ಗೋಲಗಳು ಪೃಥ್ವಿಯಿಂದಲೂ ಒಂದರಿಂದೊಂದೂ ಎಷ್ಟು ಭಿನ್ನವಾದ ಅಂತರಗಳ ಮೇಲಿರುತ್ತವೆಂಬುದರ ಕಲ್ಪನೆಯು ಬರಬಹುದು. ಚಿಕ್ಕೆಗಳ ನಡುವಿನ ಅಂತರಗಳು ಯಾವಾಗಲೂ ಅಷ್ಟಷ್ಟೇ ಇದ್ದದ್ದು ಕಂಡುಬರುತ್ತದೆ. ಆದರೆ ಗ್ರಹಗಳ ನಡುವಿನ ಅಂತರವು ಮಾತ್ರ ದಿನದಿನಕ್ಕೆ ಹೆಚ್ಚು ಕಡಿಮೆ ಯಾಗುವದು ಕಂಡುಬರುತ್ತದೆ.




ಸೂರ್ಯನಿಂದ ಗ್ರಹಗಳ ಅಂತರಗಳು

**ಸೂರ್ಯನು :—** ಪೃಥ್ವಿಗೆ ಅತ್ಯಂತ ಸಮೀಪದ ಗ್ರಹವೆಂದರೆ ಸೂರ್ಯನು. ನಮ್ಮ ಪೃಥ್ವಿಯು ಸೂರ್ಯನ ಸುತ್ತಲೂ ವಿಶಿಷ್ಟವಾದ ಮಾರ್ಗದಗುಂಟ ಒಂದೇ ವೇಗದಿಂದ ತಿರುಗುತ್ತಿರುತ್ತದೆ. ಇದರಂತೆಯೇ ಅವನ ಸುತ್ತಲೂ ತಿರುಗುವಂಥ ಬೇರೆ ಏಳು ಗ್ರಹಗಳಿರುತ್ತವೆ. ಅವು ವರ್ತುಲಾಕಾರದ ಮಾರ್ಗವಾಗಿಯೂ ಇಲ್ಲವೆ ದೀರ್ಘ ವರ್ತುಲಾಕಾರದ




ಗ್ರಹಗಳ ತುಲನಾತ್ಮಕ ಆಕಾರಗಳು

ಮಾರ್ಗವಾಗಿಯೂ ಆತನ ಸುತ್ತಲೂ ತಿರುಗುತ್ತಿರುತ್ತವೆ. ಸೂರ್ಯನ ಸುತ್ತಲೂ ಒಂದು ಪ್ರದಕ್ಷಿಣೆಯನ್ನು ಮುಗಿಸಲಿಕ್ಕೆ ಬೇರೆ ಬೇರೆ ಗ್ರಹಗಳಿಗೆ ಬೇರೆ ಬೇರೆ ಕಾಲಮಾನವು ಹತ್ತುತ್ತದೆ. ಈ ಗ್ರಹಗಳು ಅಂತರದಲ್ಲಿ

ಭಿನ್ನವಾಗಿರುವಂತೆ, ಆಕಾರದಿಂದಲೂ ಸಣ್ಣದೊಡ್ಡವಾಗಿರುತ್ತವೆ. ಅಂತರಾನುಕ್ರಮದಿಂದ ಬುಧ, ಶುಕ್ರ, ಪ್ರಿಥ್ವೀ, ಮಂಗಳ, ಗುರು, ಶನಿ, ಯುರೆನಸ್, ಮತ್ತು ನೆಪ್ಚ್ಯೂನ್ ಎಂಬವು ಸೂರ್ಯನ ಗ್ರಹಗಳಾಗಿರುತ್ತವೆ. ಸೂರ್ಯನೂ ಆತನ ಎಂಟು ಗ್ರಹಗಳೂ ಕೂಡಿ 'ಸೂರ್ಯಮಾಲೆ' ಎಂದೆನ್ನುತ್ತಾರೆ. ಗ್ರಹಗಳಿಗೆ ಸೂರ್ಯನಿಂದ ಪ್ರಕಾಶವು ದೊರಕುತ್ತದೆ. ಅಂದರೆ ಇವು ಚಿಕ್ಕೆಗಳಂತೆ ಸ್ವಯಂಪ್ರಕಾಶಿತವಾಗಿರುವದಿಲ್ಲ. ನಮ್ಮ ಸೂರ್ಯನಂತೆಯೇ ಬೇರೆ ಚಿಕ್ಕೆಗಳಿಗಾದರೂ ಗ್ರಹಮಾಲೆಗಳಿರುತ್ತವೆಂದು ಶಾಸ್ತ್ರಜ್ಞರು ತರ್ಕಿಸುತ್ತಾರೆ. ಸೂರ್ಯಮಾಲೆಯೊಳಗಿನ ಯುರೆನಸ್, ನೆಪ್ಚ್ಯೂನ್, ಶನಿ ಮತ್ತು ಗುರು ಈ ಗ್ರಹಗಳು ಶುಕ್ರನಿಗಿಂತ ದೊಡ್ಡವಾಗಿದ್ದರೂ, ಅವು ಸಣ್ಣವಾಗಿ ತೋರುತ್ತವೆ. ಯಾಕೆಂದರೆ ಅವು ಸೂರ್ಯನಿಂದ ಶುಕ್ರನಿಗಿಂತ ಹೆಚ್ಚು ದೂರದಲ್ಲಿರುತ್ತವೆ. ಸೂರ್ಯನ ವ್ಯಾಸವು ಪೃಥ್ವಿಯ ವ್ಯಾಸಕ್ಕಿಂತಲೂ ನೂರುಮಡಿ ದೊಡ್ಡದಿದ್ದು, ಅವುಗಳ ನಡುವಿನ ಅಂತರವು ೯ ಕೋಟಿ ೩೦ ಲಕ್ಷ ಮೈಲು ಇರುತ್ತದೆ. ಸೂರ್ಯನಿಂದ ಗ್ರಹಗಳ ಅಂತರಗಳೂ ಅವುಗಳ ತುಲನಾತ್ಮಕ ಆಕಾರಗಳೂ ಹಿಂದೆ ಕೊಟ್ಟ ಆಕೃತಿಗಳಿಂದ ಚೆನ್ನಾಗಿ ಕಂಡುಬರುವವು.

ಸೂರ್ಯನು ಸ್ವಯಂಪ್ರಕಾಶಿತ ಗೋಲವಾಗಿದ್ದು ಆಕಾಶದೊಳಗೆ ಕಂಡು ಬರುವ ಅಸಂಖ್ಯವಾದ ಚಿಕ್ಕೆಗಳಾದರೂ ಸ್ವಯಂಪ್ರಕಾಶಿತ ಗೋಲಗಳಾಗಿರುತ್ತವೆ. ಸೂರ್ಯನಾದರೂ ಒಂದು ಚಿಕ್ಕೆಯೇ ಆಗಿರುತ್ತಾನೆ. ಪ್ರತಿಯೊಂದು ಚಿಕ್ಕೆಯು ಇನ್ನೊಂದು ಚಿಕ್ಕೆಯಿಂದ ಕೋಟಿಗಟ್ಲೆ ಮೈಲಿನ ಮೇಲಿರುತ್ತದೆ. ಸೂರ್ಯಮಾಲೆಯೊಳಗೆ ಗ್ರಹಗಳಿದ್ದಂತೆ ಪ್ರತಿಯೊಂದು ಚಿಕ್ಕೆಯ ಮಾಲೆಯೊಳಗೆ ಗ್ರಹಗಳಿರುತ್ತವೆಂಬ ಗ್ರಹಿಕೆಯುಂಟು. ನಮ್ಮ ಬರಿಗಣ್ಣಿಗೆ ಕಾಣುವ ಚಿಕ್ಕೆಗಳಿಗಿಂತ ಎಷ್ಟೋ ಪಟ್ಟು ಹೆಚ್ಚು ಚಿಕ್ಕೆಗಳು ದುರ್ಬಿನಿಯೊಳಗಿಂದ ನೋಡಲು ದೃಷ್ಟಿಗೆ ಬೀಳುತ್ತವೆ. ಚಿಕ್ಕೆಗಳು ನಿಜವಾಗಿಯೇ 'ಅನಂತಕೋಟಿ' ಇರುತ್ತವೆ. ಚಿಕ್ಕೆಗಳಿಂದ ತುಂಬಿದ ಈ ವಿಶ್ವವನ್ನು ಹುಟ್ಟಿಸಿದ ಆ ಜಗಚ್ಚಾಲಕನನ್ನು "ಅನಂತಕೋಟಿ ಬ್ರಹ್ಮಾಂಡ ನಾಯಕ"ನೆಂದು ವರ್ಣಿಸುವದು ತೀರ ನಿಜವಾಗಿರುತ್ತದೆ.

**ತಾರೆಗಳೂ (ಚಿಕ್ಕೆ) ತಾರಕಾಪುಂಜಗಳೂ :**— ಆಕಾಶದೊಳಗಿನ ಚಿಕ್ಕೆಗಳ ಪುಂಜಗಳನ್ನು (ಗುಂಪು) ಮಾಡಿ ಪ್ರತಿಯೊಂದಕ್ಕೆ ಗುರುತಿನ ಸಲು

ಲಿಟ್ಲ್ ಬೆಅರ (ಇಂ)
ಧ್ರುವ ಮತ್ಸ್ಯ (ಸಂ)




ಗ್ರೇಟ ಬೆಅರ (ಇಂ)
ಸಪ್ತರ್ಷಿ (ಸಂ)



ಬುಲ (ಇಂ)
ವೃಷಭ (ಸಂ)



ಒರಾಯನ (ಇಂ)
ಮೃಗ (ಸಂ)



ತಾರಕಾಪುಂಜಗಳು

ವಾಗಿ ಬೇರೆ ಬೇರೆ ಹೆಸರುಗಳನ್ನು ಕೊಟ್ಟಿರುತ್ತಾರೆ. ಈ ಗುಂಪುಗಳೊಳಗಿರುವ ಚಿಕ್ಕೆಗಳ ರಚನೆಯ ಮೇಲಿಂದ ಅವುಗಳನ್ನು ಕೆಲವೊಂದು ಪ್ರಾಣಿಗೆ ಇಲ್ಲವೆ ವಸ್ತುವಿಗೆ ಹೋಲಿಸಿ, ಆಯಾ ಪ್ರಾಣಿಗಳ ಇಲ್ಲವೆ ವಸ್ತುಗಳ ಹೆಸರುಗಳನ್ನು ಅವುಗಳಿಗೆ ಕೊಟ್ಟಿದ್ದಾರೆ. ಇಂಥ ಹೆಸರಿನ ಪುಂಜಗಳು ಹಲವು ಉಂಟು. ಮೇಷ(ಕುರಿ), ವೃಷಭ (ಎತ್ತು) ಮುಂತಾದ ೧೨ ರಾಶಿಗಳೂ ಅಶ್ವಿನೀ, ಭರಣೀ, ಮುಂತಾದ ೨೭ ನಕ್ಷತ್ರಗಳ ಹೆಸರುಗಳೂ ನಮ್ಮ ದೇಶದೊಳಗೆ ಪ್ರಚಾರದಲ್ಲಿರುತ್ತವೆ. ಈ ಪುಂಜಗಳೊಳಗಿನ ನಾಲ್ಕು ಪುಂಜಗಳ ಹೆಸರುಗಳನ್ನೂ, ಅವುಗಳೊಳಗಿನ ಚಿಕ್ಕೆಗಳ ರಚನೆಗಳನ್ನೂ ಹಿಂದಿನ ಚಿತ್ರದಲ್ಲಿ ತೋರಿಸಿರುತ್ತದೆ.

ಸಪ್ತರ್ಷಿಯ ಗುಂಪಿನ ಚೌಕಿನೊಳಗಿನ ಮೊದಲಿನ ಎರಡು ಚಿಕ್ಕೆಗಳನ್ನು ಕೂಡಿಸುವ ರೇಷೆಯನ್ನು ಬೆಳೆಸಿದರೆ ಅದು ಧ್ರುವ ನಕ್ಷತ್ರದೊಳಗಿಂದ ಹೋಗುತ್ತದೆ. ಈ ಗುರುತಿನ ಮೇಲಿಂದ ಧ್ರುವ ನಕ್ಷತ್ರವನ್ನು ಸುಲಭವಾಗಿ ಶೋಧಿಸಿ ತೆಗೆಯಲಿಕ್ಕೆ ಬರುತ್ತದೆ. ಧ್ರುವ ಮತ್ಸ್ಯದೊಳಗಿನ ಕಡೇ ಚಿಕ್ಕೆಯೇ ಧ್ರುವ ನಕ್ಷತ್ರವಾಗಿರುತ್ತದೆ. ಧ್ರುವ ನಕ್ಷತ್ರವು ಅಚಲವಾಗಿರುತ್ತದೆ; ಅಂದರೆ ಅದರ ಸ್ಥಳವು ಬದಲಾಗುವದಿಲ್ಲ. ಉಳಿದ ಚಿಕ್ಕೆಗಳೂ ಚಿಕ್ಕೆಗಳ ಗುಂಪುಗಳೂ (ತಾರಕಾ ಪುಂಜ) ಧ್ರುವ ನಕ್ಷತ್ರದ ಸುತ್ತಲು ತಿರುಗುವಂತೆ ಕಂಡುಬರುತ್ತವೆ. ಕೆಲವು ಚಿಕ್ಕೆಗಳು ಕೆಲವು ವೇಳೆಯಲ್ಲಿ ಇರುಳಿನಲ್ಲಿ ಆಕಾಶದೊಳಗೆ ಕಾಣುವದಿಲ್ಲ. ಯಾಕಂದರೆ ಆಗ ಅವು ಕ್ಷಿತಿಜದ ಕೆಳಗೆ ಇರುತ್ತವೆ. ಧ್ರುವ ನಕ್ಷತ್ರವು ಮಾತ್ರ ಯಾವಾಗಲೂ ಅದೇ ಸ್ಥಳದಲ್ಲಿ ಕಾಣುತ್ತದೆ. ರಾತ್ರಿಯಲ್ಲಿ ದಿಕ್ಕುಗಳನ್ನು ತಿಳಿದುಕೊಳ್ಳಲಿಕ್ಕೆ ಸಮುದ್ರದ ಮೇಲಾಗಲಿ, ವಿಸ್ತಾರವಾದ ಉಸುಬಿನ ಬೈಲಿನಲ್ಲಾಗಲಿ, ಈ ನಕ್ಷತ್ರವು ಬಹಳ ಉಪಯೋಗವಾಗುತ್ತದೆ.

ಸಪ್ತರ್ಷಿಯ ಸಹಾಯದಿಂದ ಧ್ರುವ ನಕ್ಷತ್ರವನ್ನು ಸುಲಭವಾಗಿ ಕಂಡು ಹಿಡಿಯಲಿಕ್ಕೆ ಬರುತ್ತದೆಂದು ಈ ಮೊದಲೇ ಹೇಳಿರುತ್ತದೆ. ಅದನ್ನು ನಿಶ್ಚಯಿಸಿದ ಬಳಿಕ ಧ್ರುವ ನಕ್ಷತ್ರದ ಕಡೆಗೆ ಸರಿಯಾಗಿ ಮೋರೆಯನ್ನು ಮಾಡಿ ನಿಂತರೆ, ನಮ್ಮ ಮೋರೆಯು ಸರಿಯಾಗಿ ಉತ್ತರಕ್ಕೆ ಅದೆ ಎಂದು

ತಿಳಿಯಬೇಕು. ಅದರ ಮೇಲಿಂದ ಉಳಿದ ದಿಕ್ಕುಗಳನ್ನು ತಿಳಿದುಕೊಳ್ಳ ಲಿಕ್ಕೆ ಬರುತ್ತದೆ.

ಧ್ರುವ ನಕ್ಷತ್ರವು ಉತ್ತರ ಗೋಲಾರ್ಧದಲ್ಲಿ ಕಾಣಿಸುವದು. ಆದರೆ ದಕ್ಷಿಣ ಗೋಲಾರ್ಧದಲ್ಲಿ ಕಾಣಿಸುವದಿಲ್ಲ. ಹಗಲಿನಲ್ಲಿಯೂ ಮೋಡಗವಿದ ವೇಳೆಯಲ್ಲಿಯೂ ಧ್ರುವ ನಕ್ಷತ್ರವು ಕಾಣಿಸಲಾರದು. ಇಂಥ ವೇಳೆಯಲ್ಲಿ ಮತ್ತು ದಕ್ಷಿಣ ಗೋಲಾರ್ಧದಲ್ಲಿ ದಿಕ್ಕುಗಳನ್ನು ತಿಳಿದುಕೊಳ್ಳಲಿಕ್ಕೆ ಹೋಕಾ ಯಂತ್ರವೆಂಬ ಯಂತ್ರವನ್ನು ಉಪಯೋಗಿಸುತ್ತಾರೆ. ಈ ಯಂತ್ರದೊಳಗಿನ ಮುಳ್ಳನ್ನು ಒಂದು ಮೊನೆಯಾದ ಅಗ್ರದ ಮೇಲೆ ಇಟ್ಟಿರುತ್ತಾರೆ. ಅದು ಯಾವ ಬೇಕಾದ ಕಡೆಯಿಂದ ಗರಗರನೆ ತಿರುಗುವಂತೆ ಮಾಡಲ್ಪಟ್ಟಿರುತ್ತದೆ. ಈ ಮುಳ್ಳಿನೊಳಗಿನ ವಿಶಿಷ್ಟವಾದ ಗುಣಧರ್ಮವೇನೆಂದರೆ, ಅದು ಯಾವಾ ಗಲೂ ದಕ್ಷಿಣೋತ್ತರ ರೇಷೆಯಲ್ಲಿಯೇ ಸ್ಥಿರವಾಗಿ ನಿಲ್ಲುತ್ತದೆ. ಸ್ಥಿರವಾಗಿ ನಿಂತ ಮುಳ್ಳಿನ ಮೇಲಿಂದ ನಮಗೆ ದಕ್ಷಿಣ-ಉತ್ತರ ರೇಷೆಯು ಗೊತ್ತಾಗು ತ್ತದೆ. ಈ ಮುಳ್ಳನ್ನು ಅಂಕೆಗಳ ಬದಲು ದಿಕ್ಕುಗಳನ್ನು ತೋರಿಸುವ ತಬಕದ ಮೇಲೆ ಕೂಡ್ರಿಸಿರುತ್ತಾರೆ. ಅದರ ಮೇಲಿಂದ ದಕ್ಷಿಣ-ಉತ್ತರ ದಿಕ್ಕುಗಳನ್ನು ಸುಲಭವಾಗಿ ತಿಳಿದುಕೊಳ್ಳಬಹುದು. ನಿಮ್ಮ ಶಾಲೆಯೊಳ ಗಿನ ಹೋಕಾ ಯಂತ್ರವನ್ನು ಚೆನ್ನಾಗಿ ನಿರೀಕ್ಷಿಸಿದರೆ, ಅದು ಹೇಗೆ ಮಾಡ ಲ್ಪಟ್ಟಿರುತ್ತದೆಂಬುದು ನಿಮಗೆ ಗೊತ್ತಾಗುವದು.

**ಚಂದ್ರನೂ ಆತನ ಕಲೆಗಳೂ :**— ಚಂದ್ರನು ಪೃಥ್ವಿಯಂತೆಯೇ ಒಂದು ಗೋಲವಾಗಿರುತ್ತಾನೆ. ಸುಮಾರು ಐವತ್ತು ಚಂದ್ರನಂಥ ಗೋಲ ಗಳನ್ನು ಕೂಡಿಸಿದರೆ ಅವುಗಳ ಆಕಾರವು ಪೃಥ್ವಿಯ ಆಕಾರಕ್ಕೆ ಸರಿಯಾಗು ವದು. ಪೃಥ್ವಿಯಿಂದ ಚಂದ್ರನು ಸುಮಾರು ೨ ಲಕ್ಷ ೪೦ ಸಾವಿರ ಮೈಲು ದೂರದಲ್ಲಿರುವನು. ಪೃಥ್ವಿಯು ಸೂರ್ಯನ ಸುತ್ತಲೂ ತಿರುಗುವಂತೆ ಚಂದ್ರನು ಪೃಥ್ವಿಯ ಸುತ್ತಲೂ ತಿರುಗುತ್ತಿರುತ್ತಾನೆ. ಈ ಪ್ರದಕ್ಷಿಣೆ ಯನ್ನು ಮುಗಿಸಲಿಕ್ಕೆ ಆತನಿಗೆ ೨೯॥ ದಿವಸಗಳು ಬೇಕಾಗುತ್ತವೆ. ಅದೇ ರೀತಿ ಚಂದ್ರನು ಅಷ್ಟೇ ದಿವಸಗಳಲ್ಲಿ ತನ್ನ ಸುತ್ತಲೂ ತಿರುಗುತ್ತಿರುತ್ತಾನೆ. ಆದ್ದರಿಂದ ನಮಗೆ ಆತನ ವಿಶಿಷ್ಟವಾದ ಅರ್ಧ ಭಾಗವು ಯಾವಾಗಲೂ

ಪೃಥ್ವಿಯ ಕಡೆಗೆ ಆದದ್ದು ಕಾಣಿಸುವದು. ಚಂದ್ರನಾದರೂ ಪೃಥ್ವಿಯ ಹಾಗೆ ಸ್ವಯಂಪ್ರಕಾಶವಿಲ್ಲದ ಗೋಲವಾಗಿರುತ್ತಾನೆ. ಸೂರ್ಯನ ಪ್ರಕಾಶ ದಿಂದಲೇ ಚಂದ್ರನು ಹೊಳೆಯುತ್ತಾನೆ. ಪೃಥ್ವಿಯ ಸುತ್ತಲೂ ತಿರುಗುತ್ತಿರು ವಾಗ ಪ್ರಕಾಶಿತವಾದ ಚಂದ್ರನ ಅರ್ಧ ಭಾಗವು ನಮಗೆ ಕಾಣಿಸುವದು. ಆವನ ಸಂಪೂರ್ಣ ಅರ್ಧ ಭಾಗವು ನಮಗೆ ಎಂದು ಪೂರ್ಣವಾಗಿ ಕಾಣಿಸು




ವದೋ ಆ ದಿವಸ ಚಂದ್ರನಿಗೆ ಹುಣ್ಣಿಮೆಯ ಚಂದ್ರ ಅಥವಾ ಪೂರ್ಣ ಚಂದ್ರನೆಂದು ಕರೆಯುತ್ತೇವೆ. ಅದೇ ಪ್ರಕಾಶಿತವಾದ ಅರ್ಧ ಭಾಗವು ಪೃಥ್ವಿಯ ವಿರುದ್ಧ ಬದಿಗೆ ಇರುವಾಗ ನಮಗೆ ಚಂದ್ರನು ಕಾಣುವದಿಲ್ಲ. ಆ

ರಾತ್ರಿಗೆ ನಾವು ಅಮಾವಾಸ್ಯೆಯ ರಾತ್ರಿ ಎಂದು ಅನ್ನುತ್ತೇವೆ. ಮುಂದೆ ಚಂದ್ರನು ತನ್ನ ಪ್ರದಕ್ಷಿಣೆಯ ಮಾರ್ಗದ ಮೇಲೆ ಸೂರ್ಯ-ಪೃಥ್ವಿಗಳ ನಡುವಿನಿಂದ ಪ್ರತಿದಿನ ಹೊರಗೆ ಹೋದಂತೆ, ಆತನ ಪ್ರಕಾಶಿತ ಬದಿಯ ಕೆಲವು ಭಾಗವು ನಮಗೆ ಕಾಣಿಸಹತ್ತುವದು. ಈ ಚಂದ್ರನ ಕೋರೆಯು ದೊಡ್ಡದಾಗುತ್ತ ಹೋಗಿ, ಏಳನೇ ದಿವಸ ಅರ್ಧ ಚಂದ್ರನು ನಮಗೆ ಕಾಣ ಹತ್ತುವನು. ಮುಂದೆ ಪ್ರಕಾಶಿತ ಭಾಗವು ಬೆಳೆಯುತ್ತ ಪೌರ್ಣಿಮೆಯ ದಿವಸ ನಮಗೆ ಪೂರ್ಣ ಚಂದ್ರನು ಕಾಣುತ್ತಾನೆ. ಹುಣ್ಣಿಮೆಯ ನಂತರ ಈ ಚಂದ್ರಬಿಂಬವು ದಿನದಿನಕ್ಕೆ ಕಡಿಮೆಯಾಗುತ್ತ ಹೋಗಿ, ಅಮಾವಾಸ್ಯೆಯ ದಿವಸ ಮಾಯವಾಗುತ್ತದೆ. ಅಮಾವಾಸ್ಯೆಯಾದ ಬಳಿಕ ಪ್ರತಿ ರಾತ್ರಿಯಲ್ಲಿ ಕ್ರಮೇಣ ಬೆಳೆಯುವ ಮತ್ತು ಪೌರ್ಣಿಮೆಯಾದ ನಂತರ ಕ್ರಮೇಣ ಕುಂದುವ ಈ ಚಂದ್ರನ ಬದಲಾಗುವ ರೂಪಗಳಿಗೆ ಚಂದ್ರನ ಕಲೆಗಳೆಂದೆನ್ನುತ್ತಾರೆ.

ಚಂದ್ರನ ವಿವಕ್ಷಿತವಾದ ಅರ್ಧಭಾಗವು ನಮಗೆ ಪೌರ್ಣಿಮೆಯ ದಿವಸ ನೋಡಲಿಕ್ಕೆ ಸಿಗುತ್ತದೆ. ಉಳಿದ ಅರ್ಧಭಾಗವು ನಮಗೆ ಎಂದೂ ಕಾಣುವದಿಲ್ಲ ಎಂದು ಹಿಂದೆ ಹೇಳಿದೆ. ಚಂದ್ರನ ಪೃಷ್ಠ ಭಾಗವು ಕಲ್ಲುಬಂಡೆಗಳ ಪರ್ವತಗಳಿಂದಲೂ ಆಳವಾದ ದರಿಕಂದರಗಳಿಂದಲೂ ತುಂಬಿರುತ್ತದೆ. ಚಂದ್ರನ ಮೇಲೆ ನೀರಿರುವದಿಲ್ಲ; ಹವೆಯು ಇರುವದಿಲ್ಲ; ಆದ್ದರಿಂದ ಅಲ್ಲಿ ವನಸ್ಪತಿಗಳಾಗಲಿ ಪ್ರಾಣಿ ಮುಂತಾದ ಜೀವನಗಳಾಗಲಿ ಇರುವದಿಲ್ಲ.

**ಗುರುತ್ವಾಕರ್ಷಣವು :**—ಸೂರ್ಯನ ಸುತ್ತಲು ಗ್ರಹಗಳು ತಿರುಗುತ್ತವೆ; ಪೃಥ್ವಿಯ ಸುತ್ತಲೂ ಚಂದ್ರನು ತಿರುಗುತ್ತಾನೆ. ಮತ್ತು ಇವೆಲ್ಲ ಗೋಲಗಳು ನಿಯಮಿತವಾದ ಮಾರ್ಗಗಳಿಂದಲೂ ನಿಯಮಿತವಾದ ವೇಗಗಳಿಂದಲೂ ತಿರುಗುತ್ತಿರುತ್ತವೆ. ಹೀಗೆ ಆಗುವ ಕಾರಣವೇನಿರಬಹುದು ? ಗಿಡದಿಂದ ಬೀಳುವ ಹಣ್ಣು, ಕೈಯಿಂದ ಮೇಲಕ್ಕೆ ಹಾರಿಸಿದ ಕಲ್ಲು ಅಥವಾ ಬಂದೂಕಿನೊಳಗಿಂದ ಒಗೆದ ಗುಂಡು ಕೆಲ ವೇಳೆಯ ಮೇಲೆ ಭೂಮಿಯ ಮೇಲೆ ಬಂದು ಬೀಳುವವು. ಯಾಕಂದರೆ ಆಯಾ ಪದಾರ್ಥಗಳ ಮೇಲೆ ಪೃಥ್ವಿಯ ಆಕರ್ಷಣ ಶಕ್ತಿಯು ಇರುತ್ತದೆ. ಈ ಆಕರ್ಷಣ ಶಕ್ತಿಯು ಇಲ್ಲದಿದ್ದರೆ ಬಿಸಾಡಿದ ಕಲ್ಲು, ಒಗೆದ ಗುಂಡು ತಿರುಗಿ ಭೂಮಿಯ ಮೇಲೆ

ಎಂದೂ ಬರುತ್ತಿದ್ದಿಲ್ಲ. ಗಿಡದಿಂದ ಹಣ್ಣುಗಳು ಸಹ ಕೆಳಗೆ ಬೀಳುತ್ತಿದ್ದಿಲ್ಲ. ಅಂತರಿಕ್ಷದೊಳಗಿನ ಗ್ರಹಗಳೂ, ಅವುಗಳ ಮೇಲಿರುವ ಯಾವತ್ತೂ ಸಣ್ಣ ಪುಟ್ಟ ಪದಾರ್ಥಗಳೂ ಒಂದನ್ನೊಂದು ಯಾವಾಗೂ ಆಕರ್ಷಿಸುತ್ತಿರುತ್ತವೆ. ಸಣ್ಣ ಗ್ರಹಗಳ ಮೇಲಿನ ದೊಡ್ಡ ಗ್ರಹಗಳ ಆಕರ್ಷಣವೂ, ಸಣ್ಣ ಪದಾರ್ಥಗಳ ಮೇಲಿನ ದೊಡ್ಡ ಪದಾರ್ಥಗಳ ಆಕರ್ಷಣವೂ ಹೆಚ್ಚು ಇರುವದೆಂಬ ನಿಯಮವಿರುತ್ತದೆ.

ನಾವು ಒಂದು ಕವಣಿಯೊಳಗೆ ಕಲ್ಲನ್ನಿಟ್ಟು ಅದನ್ನು ತಿರುವಿದರೆ ಅದರೊಳಗಿನ ಕಲ್ಲು ಜಾರಿಹೋಗದೆ ಅದು ನಮ್ಮ ಸುತ್ತಲು ತಿರುಗುತ್ತದೆ. ನಮ್ಮ ಕೈಯೊಳಗಿರುವ ಕವಣಿಯ ದಾರವು ಕಲ್ಲನ್ನು ಹೋಗಗೊಡುವದಿಲ್ಲ. ಮತ್ತು ಆ ದಾರದಲ್ಲಿರುವ ಶಕ್ತಿಯು ಕಲ್ಲನ್ನು ನಮ್ಮ ಸುತ್ತಲು ತಿರುಗಿಸಲಿಕ್ಕೆ ಹಚ್ಚುತ್ತದೆ. ಕವಣಿಯೊಳಗಿನ ಕಲ್ಲು ನಮ್ಮ ಸುತ್ತಲು ತಿರುಗುವಂತೆಯೇ ಪೃಥ್ವಿಯು ಮತ್ತು ಉಳಿದ ಗ್ರಹಗಳು ಸೂರ್ಯನ ಸುತ್ತಲು ತಿರುಗುತ್ತವೆ. ಮತ್ತು ಚಂದ್ರನು ಪೃಥ್ವಿಯ ಸುತ್ತಲು ತಿರುಗುತ್ತಾನೆ. ಯಾಕಂದರೆ ಸೂರ್ಯನ ಶಕ್ತಿಯು ಪೃಥ್ವಿ ಮುಂತಾದ ಗ್ರಹಗಳ ಮೇಲೆಯೂ, ಪೃಥ್ವಿಯ ಶಕ್ತಿಯು ಚಂದ್ರನ ಮೇಲೆಯೂ ಇರುತ್ತದೆ. ಅವುಗಳ ಮೇಲಿನ ಸೂರ್ಯನ ಶಕ್ತಿಯು ಇಲ್ಲದಂತಾದರೆ, ಕವಣಿಯೊಳಗಿನ ಕಲ್ಲಿನಂತೆ ಎಲ್ಲ ಗ್ರಹಗಳು ಅಂತರಿಕ್ಷದೊಳಗೆ ಸರಳ ರೇಖೆಯಲ್ಲಿ ಯಾವ ಕಡೆಗೆ ಹೋಗಬಹುದೆಂಬದನ್ನು ಹೇಳಲಾಸಲ್ಲ. ಸೂರ್ಯನ ಆಕರ್ಷಣದಿಂದಲೇ ಗ್ರಹಗಳಿಗೆ ವರ್ತುಲಾಕಾರದ ಗತಿಗಳುಂಟಾಗಿರುತ್ತವೆ. ಸೂರ್ಯನ ಆಕರ್ಷಣವು ಗ್ರಹಗಳ ಅಂತರವನ್ನು ಅವಲಂಬಿಸಿರುತ್ತದೆ. ಆದ್ದರಿಂದ ಬೇರೆ ಬೇರೆ ಗ್ರಹಗಳು ಬೇರೆ ಬೇರೆ ವೇಗಗಳಿಂದ ಮತ್ತು ಬೇರೆ ಬೇರೆ ಮಾರ್ಗಗಳಿಂದ ಸೂರ್ಯನ ಸುತ್ತಲು ತಿರುಗುತ್ತಿರುತ್ತವೆ.

೨೪ನೇ ಪ್ರಕರಣ

# ಪೃಥ್ವಿಯ ದೈನಂದಿನ ಗತಿಯು,

## ಕಾಲಮಾಪನವು, ಸ್ಥಾನಿಕ ವೇಳೆ ಮತ್ತು ಪ್ರಮಾಣ ವೇಳೆಗಳು (ಸ್ಟ್ಯಾಂಡರ್ಡ ಟಾಯಿಮ್), ಗ್ರೀನಿಚದ ವೇಳೆಯು

**ಯು ದೈನಂದಿನ ಗತಿಯು:**—ಪೃಥ್ವಿಗೆ ಮಹತ್ವವಾದ ಎರಡು ಗತಿಗಳುಂಟು. ೧ ದೈನಂದಿನ ಗತಿ. ೨ ವಾರ್ಷಿಕ ಗತಿ. ಪೃಥ್ವಿಯು ತನ್ನ ಮೈಸುತ್ತಲೂ ೨೪ ತಾಸುಗಳಲ್ಲಿ (ನಿಜವಾಗಿ ೨೩ ತಾ. ೫೬ ಮಿನಿಟ ನಲ್ಲಿ) ಪಶ್ಚಿಮದಿಂದ ಪೂರ್ವದ ಕಡೆಗೆ ಒಂದು ಪ್ರದಕ್ಷಿಣೆಯನ್ನು ಮುಗಿಸುತ್ತದೆ. ಅದರ ಈ ಗತಿಗೆ ದೈನಂದಿನ ಗತಿ ಎಂದೆನ್ನುತ್ತಾರೆ. ಈ ಗತಿಯಿಂದಲೇ ಹಗಲಿರುಳುಗಳು ಉಂಟಾಗುತ್ತವೆ. ಪೃಥ್ವಿಯು ತನ್ನ ಅಚ್ಚಿನ ಸುತ್ತಲೂ ಈ ರೀತಿಯಾಗಿ ತಿರುಗದಿದ್ದರೆ, ಅದರ ಅರ್ಧ ಭಾಗದ ಮೇಲೆ ಹನ್ನೆರಡೂ ತಿಂಗಳು ಹಗಲೂ ಉಳಿದ ಅರ್ಧ ಭಾಗದ ಮೇಲೆ ಹನ್ನೆರಡೂ ತಿಂಗಳು ರಾತ್ರಿಯೂ ಇರುತ್ತಿತ್ತು. ಸೂರ್ಯೋದಯ ಅಥವಾ ಸೂರ್ಯಾಸ್ತಗಳು ಆಗುತ್ತಿರಲಿಲ್ಲ. ಮುಂಜಾವು, ಮಧ್ಯಾಹ್ನ ಮತ್ತು ಸಂಜೆಗಳು ಆಗುತ್ತಿದ್ದಿಲ್ಲ. ಪೃಥ್ವಿಯ ಈ ತನ್ನ ಮೈಸುತ್ತಲಿನ ಪ್ರದಕ್ಷಿಣೆಯಿಂದ ಅದರ ಕೆಲವೊಂದು ಭಾಗವು ಕತ್ತಲೆಯೊಳಗಿಂದ ಸೂರ್ಯನ ಪ್ರಕಾಶದೊಳಗೆ ಬರುತ್ತದೆ. ಆಗ ಅಲ್ಲಿ ಮುಂಜಾವು ಆಗುತ್ತದೆ. ಅದೇ ಭಾಗವು ತಿರುಗುತ್ತ ಸರಿಯಾಗಿ ಸೂರ್ಯನ ಕಡೆಗೆ ಬರಲು, ಆಗ ಅಲ್ಲಿ ಮಧ್ಯಾಹ್ನವಾಗುತ್ತದೆ. ಮತ್ತು ಕೆಲಹೊತ್ತಿನ ಮೇಲೆ ಆ ಭಾಗವು ಪುನಃ ಕತ್ತಲೆಯೊಳಗೆ ಹೋಗಹತ್ತಿತೆಂದರೆ, ಅಲ್ಲಿ ಸಂಜೆಯಾಯಿತೆಂದು ನಾವು ಅನ್ನುತ್ತೇವೆ.

ಪೃಥ್ವಿಯು ಪಶ್ಚಿಮದಿಂದ ಪೂರ್ವಕ್ಕೆ ತಿರುಗುತ್ತದೆ. ಆದ್ದರಿಂದ ಪೂರ್ವದಕಡೆಗಿರುವ ಸ್ಥಳಗಳಲ್ಲಿ ಸೂರ್ಯನು ಮೊದಲು ದೃಷ್ಟಿಗೋಚರನಾಗುತ್ತಾನೆ. ಆ ಮೇಲೆ ಪಶ್ಚಿಮದ ಕಡೆಗಿರುವ ಸ್ಥಳಗಳ ಮೇಲೆ ಪ್ರಕಾಶಿಸಲಾರಂಭಿಸುವನು. ಅದರಂತೆ ಪೂರ್ವದ ಕಡೆಗಿರುವ ಸ್ಥಳಗಳಲ್ಲಿ ಮೊದಲು ಸಂಜೆಯಾಗುತ್ತದೆ; ಮತ್ತು ಪಶ್ಚಿಮದ ಕಡೆಗಿರುವ ಸ್ಥಳಗಳಲ್ಲಿ ಆ ಮೇಲೆ ಸಂಜೆಯಾಗುತ್ತದೆ.

**ಕಾಲಮಾಪನವು :**—ನಿಮ್ಮ ಶಾಲೆಯೊಳಗಿರುವ ಪೃಥ್ವಿಯ ಗೋಲದ (ಗ್ಲೋಬದ) ಮೇಲೆ ಉತ್ತರ ಮತ್ತು ದಕ್ಷಿಣ ಧ್ರುವಗಳೊಳಗಿಂದ ಹೋದ ವರ್ತುಲಾಕಾರದ ರೇಷೆಗಳನ್ನು ನೀವು ನೋಡಿರಬಹುದು. ಅವುಗಳಿಗೆ ರೇಖಾ-ವೃತ್ತಗಳೆಂಬ ಹೆಸರು. ಈ ರೇಖಾ-ವೃತ್ತಗಳು ೩೬೦ ಇರುತ್ತವೆಂದು ಕಲ್ಪಿಸಿದ್ದಾರೆ. ಯಾಕಂದರೆ ಅವುಗಳನ್ನು ಒಂದೊಂದು ಅಂಶ ಅಂತರದ ಮೇಲೆ ತೆಗೆದಿರುತ್ತಾರೆ. ಪೃಥ್ವಿಯು ತನ್ನ ನೈಸುತ್ತಲು (ಅಚ್ಚಿನ ಸುತ್ತಲು) ತಿರುಗುತ್ತಿರುವಾಗ ಈ ಯಾವತ್ತೂ ರೇಖಾ-ವೃತ್ತಗಳು ಒಂದರ ಹಿಂದೊಂದು ಸೂರ್ಯನ ಎದುರಿಗೆ ಬಂದು ಹೋಗುತ್ತಿರುತ್ತವೆ. ಒಂದೇ ರೇಖಾ-ವೃತ್ತದ ಮೇಲಿರುವ ಯಾವತ್ತೂ ಸ್ಥಳಗಳು ಎಲ್ಲಿದ್ದರೂ ಏಕಕಾಲಕ್ಕೆ ಒಂದೇ ವೇಳೆಯನ್ನು ತೋರಿಸುತ್ತವೆ. ಅಂದರೆ ಯಾವದಾದರೊಂದು ಸ್ಥಳದಲ್ಲಿ ಮಧ್ಯಾನ್ಹದ ೧೨ ಗಂಟೆಯಾಗಿದ್ದರೆ, ಆ ರೇಖಾ-ವೃತ್ತದ ಮೇಲಿರುವ ಉಳಿದೆಲ್ಲ ಸ್ಥಳಗಳಲ್ಲಿಯೂ ಆ ಕಾಲಕ್ಕೆ ಹನ್ನೆರಡೇ ಹೊಡೆದಿರುತ್ತದೆ. ಪೃಥ್ವಿಗೆ ತನ್ನ ನೈಸುತ್ತಲು ಒಂದು ಪ್ರದಕ್ಷಿಣೆಯನ್ನು ಹಾಕಲಿಕ್ಕೆ ೨೪ ತಾಸುಗಳು ಹತ್ತುತ್ತವೆ. ಅದು ಆ ಅವಧಿಯಲ್ಲಿ ೩೬೦° ತಿರುಗುತ್ತದೆ. ಅಂದರೆ ೩೬೦°÷೨೪=೧೫° ತಿರುಗಲಿಕ್ಕೆ ಅದಕ್ಕೆ ಒಂದು ತಾಸು ಬೇಕಾಗುತ್ತದೆ. ಅಥವಾ ಅದು ೪ ಮಿನಿಟುಗಳಲ್ಲಿ ೧° ಅಂತರವನ್ನು ತಿರುಗುತ್ತದೆ.

**ಸ್ಥಾನಿಕ ವೇಳೆಯು :** (ಲೋಕಲ್ ಟಾಯಿಮ್) :—ಯಾವದಾದರೊಂದು ಸ್ಥಳದೊಳಗೆ ಸೂರ್ಯನು ನೆತ್ತಿಯ ಮೇಲೆ ಬರಲು ಅಲ್ಲಿಯ ಗಡಿಯಾರದೊಳಗೆ ಮಧ್ಯಾನ್ಹದ ೧೨ ಗಂಟೆಯಾಯಿತು. ಅಥವಾ ಮಧ್ಯಾನ್ಹವಾಯಿತೆಂದು ನಾವು ತಿಳಿದುಕೊಳ್ಳುತ್ತೇವೆ. ಯಾಕಂದರೆ ಮಧ್ಯಾನ್ಹದ

ಸೂರ್ಯನ ಮೇಲಿಂದಲೇ ಗಡಿಯಾರವನ್ನು ಹಚ್ಚಿಡುತ್ತಾರೆ. ಈ ಗಡಿಯಾರವು ತೋರಿಸುವ ವೇಳೆಯು ಆ ಸ್ಥಳದ **ಸ್ಥಾನಿಕ** ವೇಳೆಯಾಗಿರುತ್ತದೆ. ಈ ಗಡಿಯಾರದೊಳಗೆ ಮಧ್ಯಾಹ್ನದ ೧೨ ಗಂಟೆಯಾಗಿದ್ದರೂ ಅದೇ ವೇಳೆಯಲ್ಲಿ ಆ ಸ್ಥಳದ ಪೂರ್ವದ ಕಡೆಗಿರುವ ಸ್ಥಳಗಳಲ್ಲಿಯ ಸ್ಥಾನಿಕ ವೇಳೆಯು ೧೨ ಕ್ಕಿಂತ ಹೆಚ್ಚಾಗಿಯೂ, ಪಶ್ಚಿಮದ ಕಡೆಗಿರುವ ಸ್ಥಳಗಳ ಸ್ಥಾನಿಕ ವೇಳೆಯು ೧೨ ಕ್ಕಿಂತ ಕಡಿಮೆಯಾಗಿಯೂ ಇರುವವು. ಹೀಗಾಗುವ ಕಾರಣವೇನು? ರಂಗೂನ ಪಟ್ಟಣವು ೯೬° ಪೂ. ರೇಖಾಂಶದ ಮೇಲಿರುತ್ತದೆ. ಮತ್ತು ಮದ್ರಾಸವು ೮೯।° ಪೂ. ರೇ. ಮೇಲಿರುವದು. ಇದರಿಂದ ರಂಗೂನದೊಳಗಿನ ಸ್ಥಾನಿಕ ಗಡಿಯಾರದಲ್ಲಿ ಮುಂಜಾವಿನ ೬ ಗಂಟೆಯಾಗಿದ್ದರೆ, ಮದ್ರಾಸದೊಳಗಿನ ಮುಂಜಾವಿನ ಸ್ಥಾನಿಕ ೬ ಗಂಟೆಯು ರಂಗೂನದ ತರುವಾಯ ೧ ತಾಸು ೨ ಮಿನಿಟುಗಳ ನಂತರ ಆಗುವದು. ಬೇರೆ ಬೇರೆ ರೇಖಾ-ವೃತ್ತಗಳ ಮೇಲೆ ಬೇರೆ ಬೇರೆ ಸ್ಥಾನಿಕ ವೇಳೆಗಳು ಇರುವವು. ಆದರೆ ಒಂದೇ ರೇಖಾ-ವೃತ್ತದ ಮೇಲಿರುವ ಎಲ್ಲ ಸ್ಥಳಗಳಲ್ಲಿ ಏಕಕಾಲಕ್ಕೆ ಮಧ್ಯಾಹ್ನವಾಗುವದರಿಂದ ಅಲ್ಲಿಯ ಗಡಿಯಾರಗಳು ಒಂದೇ ಸ್ಥಾನಿಕ ವೇಳೆಯನ್ನು ತೋರಿಸುವವು ಎಂಬುದನ್ನು ಹಿಂದೆ ಹೇಳಲಾಗಿದೆ. ಅಮೃತಸರ ಮತ್ತು ಅಹಮ್ಮದನಗರಗಳ ಗಡಿಯಾರಗಳಲ್ಲಿ ಬಹುತರವಾಗಿ ಒಂದೇ ವೇಳೆಯಾಗಿರುತ್ತದೆ. ಯಾಕಂದರೆ ಇವೆರಡೂ ಪಟ್ಟಣಗಳು ಸಾಧಾರಣವಾಗಿ ಒಂದೇ ರೇಖಾ-ವೃತ್ತದ ಮೇಲಿರುತ್ತವೆ.

**ಪ್ರಮಾಣ ವೇಳೆಯು** ( ಸ್ಟಂಡರ್ಡ ಟಾಯಿಮ್ ) :— ಪ್ರತಿಯೊಂದು ಊರೊಳಗೆ ಸ್ಥಾನಿಕ ವೇಳೆಯನ್ನಿಟ್ಟರೆ ಬಹಳ ತೊಂದರೆಯುಂಟಾಗುವದು. ನಾವು ಮುಂಬಯಿಯಿಂದ ಕಲಕತ್ತೆಗೆ ಪ್ರವಾಸ ಮಾಡಲಿಕ್ಕೆ ಹೊರಟೆವೆಂದು ತಿಳಿಯೋಣ. ಅಂದರೆ ನಾವು ಪ್ರತಿಯೊಂದು ಹೊಸ ರೇಖಾ-ವೃತ್ತದ ಮೇಲೆ ಹೋಗಲು ನಮ್ಮ ಗಡಿಯಾರವನ್ನು ೪ ಮಿನಿಟು ಮುಂದೆ ಸರಿಸಬೇಕಾಗುವದು ; ಯಾಕಂದರೆ ಮುಂಬಯಿಯೊಳಗಿನ ಸ್ಥಾನಿಕ ವೇಳೆಗಿಂತ ಹೊಸ ರೇಖಾಂಶದ ಮೇಲಿನ ಸ್ಥಾನಿಕ ವೇಳೆಯು ೪ ಮಿನಿಟು ಮುಂದೆ ಇರುವದು. ಗಡಿಯಾರವನ್ನು ಪ್ರತಿಯೊಂದು ರೇಖಾಂಶದ ಮೇಲೆ ೪ ಮಿನಿಟು ಮುಂದೆ ಸರಿಸದಿದ್ದರೆ, ಮುಂಬಯಿಯ ಸ್ಥಾನಿಕ ಗಡಿಯಾರದ ಪ್ರಕಾರ ಪ್ರವಾಸಕ್ಕೆ ಕೇವಲ ೩೬ ತಾಸುಗಳು ಹತ್ತಿದರೂ ಕಲಕತ್ತೆಯ

ಗಡಿಯಾರದಂತೆ ೩೭ ತಾ. ೨ ಮಿ. ೨ ಸೇ. ಹತ್ತಿದವೆಂದು ಕಂಡು ಬರ ಬಹುದು! ಈ ತೊಂದರೆಗಳು ಆಗಬಾರದೆಂದು ದೇಶದೊಳಗಿನ ಯಾವ ದಾದರೊಂದು ಮಹತ್ವವಾದ, ಇಲ್ಲವೆ ಮಧ್ಯವರ್ತಿಯಾದ ಪಟ್ಟಣದ ಸ್ಥಾನಿಕ ವೇಳೆಯನ್ನೇ ಇಡೀ ದೇಶದ ಪ್ರಮಾಣ ವೇಳೆಯನ್ನಾಗಿ ಮಾಡಿಕೊ ಳ್ಳುತ್ತಾರೆ. ಪೂರ್ವ ರೇಖಾಂಶ ೮೨||°ದ ಮೇಲಿನ ಸ್ಥಾನಿಕ ವೇಳೆಯೇ ಇಡೀ ಭಾರತದ ಪ್ರಮಾಣ ವೇಳೆ ಇರಬೇಕೆಂದು ಗೊತ್ತುಮಾಡಿದ್ದಾರೆ. ಇದು ಗ್ರೀನಿಚದ ಸ್ಥಾನಿಕ ವೇಳೆಗಿಂತ ೫|| ತಾಸು ಮುಂದೆ ಇರುತ್ತದೆ. ಮುಂಬಯಿ ಪಟ್ಟಣದ ಸ್ಥಾನಿಕ ವೇಳೆಯು ಭಾರತದ ಪ್ರಮಾಣ ವೇಳೆಗಿಂತ ೩೯ ಮಿನಿಟುಗಳಿಂದ ಹಿಂದೆ ಇರುತ್ತದೆ. ಅದೇ ಕಲಕತ್ತೆಯು ಸ್ಥಾನಿಕ ವೇಳೆಯು ೨೪ ಮಿನಿಟುಗಳಿಂದ ಮುಂದೆ ಇರುತ್ತದೆ. ಯಾವದೊಂದು ದೇಶದ ಪೂರ್ವ-ಪಶ್ಚಿಮದ ವಿಸ್ತಾರವು ಹೆಚ್ಚಾಗಿದ್ದರೆ, ಆ ದೇಶದೊಳಗೆ ಬೇರೆ ಬೇರೆ ಭಾಗಗಳಲ್ಲಿ ಒಂದಕ್ಕಿಂತ ಹೆಚ್ಚು ಪ್ರಮಾಣ ವೇಳೆಗಳನ್ನು ತಿಳಿದುಕೊಳ್ಳುವ ವಾಡಿಕೆಯುಂಟು. ಉದಾಹರಣಾರ್ಥವಾಗಿ ಅಮೇರಿಕೆ ಯೊಳಗಿನ ಸಂಯುಕ್ತ ಸಂಸ್ಥಾನದೊಳಗೆ ಐದು ಪ್ರಮಾಣ ವೇಳೆಗಳು ನಡೆಯುತ್ತವೆ. ಇಂಗ್ಲಂಡದೊಳಗೆ ಗ್ರೀನಿಚದ ಸ್ಥಾನಿಕ ವೇಳೆಯೇ ಅಲ್ಲಿಯ ಪ್ರಮಾಣ ವೇಳೆ ಎಂದು ತಿಳಿಯಲ್ಪಡುತ್ತದೆ.

ಪೃಥ್ವಿಯು ಪಶ್ಚಿಮದಿಂದ ಪೂರ್ವಕ್ಕೆ ತಿರುಗುತ್ತಿರುವದರಿಂದ ಗ್ರೀನಿ ಚದ ಪೂರ್ವದ ಕಡೆಗಿರುವ ರೇಖಾ-ವೃತ್ತಗಳ ಮೇಲೆ ಸೂರ್ಯನು ಮೊದಲು ಉದಯವಾಗುವನು. ಮತ್ತು ಅಲ್ಲಿಯ ಗಡಿಯಾರವು ಗ್ರೀನಿಚದ ಗಡಿ ಯಾರಕ್ಕಿಂತ ಮುಂದೆ ಇರುವದು. ಅದರಂತೆ ಪಶ್ಚಿಮ ರೇಖಾ-ವೃತದ ಮೇಲೆ ಸೂರ್ಯೋದಯವು ಹಿಂದಿನಿಂದ ಆಗುವದು. ಆದ್ದರಿಂದ ಅಲ್ಲಿಯ ಗಡಿಯಾರವು ಗ್ರೀನಿಚದೊಳಗಿನ ಗಡಿಯಾರಕ್ಕಿಂತ ಹಿಂದೆ ಇರುವದು. ಗ್ರೀನಿಚ ವೇಳೆ, ಸ್ಥಾನಿಕ ವೇಳೆ ಮತ್ತು ರೇಖಾಂಶದೊಳಗಿನ ಯಾವದೇ ಎರಡು ಪದಗಳನ್ನು ಕೊಟ್ಟರೆ ಮೂರನೇ ಪದವನ್ನು ಸುಲಭವಾಗಿ ತೆಗೆಯ ಬಹುದು.

೨೫ನೇ ಪ್ರಕರಣ

# ಪೃಥ್ವಿಯ ವಾರ್ಷಿಕ ಗತಿಯೂ ಋತುಗಳೂ

ಪೃಥ್ವಿಯು ತನ್ನ ಅಚ್ಚಿನ ಸುತ್ತಲು ತಿರುಗುವದಲ್ಲದೆ ಸೂರ್ಯನ ಸುತ್ತಲು ಕೂಡ ಪ್ರದಕ್ಷಿಣೆಯನ್ನು ಹಾಕುತ್ತಿರುತ್ತದೆ. ಅದರ ಈ ಗತಿಗೆ ವಾರ್ಷಿಕ ಗತಿ ಎಂದೆನ್ನುತ್ತಾರೆ. ಅದರ ಪ್ರದಕ್ಷಿಣೆಯ ಮಾರ್ಗವು ಲಂಬ ವರ್ತುಲಾಕಾರವಾಗಿದ್ದು, ಒಂದು ಪ್ರದಕ್ಷಿಣೆಯನ್ನು ಮುಗಿಸಲಿಕ್ಕೆ ಪೃಥ್ವಿಗೆ ಒಂದು ವರುಷದ (೩೬೫ ದಿವಸಗಳ) ಅವಧಿಯು ಬೇಕಾಗುತ್ತದೆ. ಈ ಕಾಲಾವಧಿಗೆ 'ಸೌರವರುಷ'ವೆಂದೆನ್ನುತ್ತಾರೆ. ಮತ್ತು ಅದರೊಳಗೆ ೩೬೫ ದಿವಸಗಳಿರುತ್ತವೆಂದು ತಿಳಿಯುತ್ತಾರೆ. ಪ್ರತಿವರುಷ ಹೆಚ್ಚಾಗಿ ಉಳಿಯುವ ¼ ದಿವಸದ ಅವಧಿಯನ್ನು ತುಂಬಿಕೊಳ್ಳಲಿಕ್ಕೆ ಪ್ರತಿ ನಾಲ್ಕು ವರುಷಕ್ಕೊಮ್ಮೆ ಫೇಬ್ರುಅರೀ ತಿಂಗಳಿನ ೨೮ ದಿವಸಗಳಲ್ಲಿ ಒಂದು ದಿವಸವನ್ನು ಕೂಡಿಸಿ, ಆ ವರುಷದಲ್ಲಿ ೩೬೫ ದಿವಸಗಳ ಬದಲು ೩೬೬ ದಿವಸಗಳನ್ನು ಹಿಡಿಯುತ್ತಾರೆ. ಇಂಥ ವರುಷಕ್ಕೆ 'ಲೀಪ' ವರುಷವೆಂದೆನ್ನುತ್ತಾರೆ. ಇಷ್ಟಾದರೂ ಕೂಡ ಉಳಿದ ತುಸು ಹೆಚ್ಚು ಕಡಿಮೆಯನ್ನು ಕಳೆದು ಬಿಡುವದರ ಸಲುವಾಗಿ, ಶತಕದ ಕಡೆಯ ವರುಷವನ್ನು 'ಲೀಪ'ವೆಂದು ಎಣಿಸದೆ ಸರ್ವಸಾಧಾರಣ ವರುಷದಂತೆ ೩೬೫ ದಿವಸಗಳ ವರುಷವನ್ನಾಗಿ ಎಣಿಸುತ್ತಾರೆ.

ಸೂರ್ಯನ ಸುತ್ತಲು ತಿರುಗುವ ಪೃಥ್ವಿಯ ಮಾರ್ಗಕ್ಕೆ 'ಕಕ್ಷೆ' ಎಂಬ ಹೆಸರು. ಮತ್ತು ಈ ಕಕ್ಷೆಯಿಂದ ಮರ್ಯಾದಿತವಾದ ಪೃಷ್ಠ ಭಾಗಕ್ಕೆ 'ಕಕ್ಷಾ ಪಾತಳಿ' ಎಂದೆನ್ನುತ್ತಾರೆ. ಆಕೃತಿಯಲ್ಲಿ ತೋರಿಸಿದ ಪಾತ್ರೆಯ ಅಂಚಿಗೆ ಹೊಂದಿಕೊಂಡಿರುವ ನೀರಿನ ದಂಡೆಗೆ ಪೃಥ್ವಿಯ ಕಕ್ಷೆ ಯಂತಲೂ ಮತ್ತು ನೀರಿನ ಪೃಷ್ಠ ಭಾಗವು ಕಕ್ಷಾ ಪಾತಳಿ ಎಂತಲೂ ತಿಳಿದುಕೊಳ್ಳಬಹುದು. ಪೃಥ್ವಿಯು ತನ್ನ ಕಕ್ಷೆಯ ಗುಂಟ ಸೂರ್ಯನ

ಸುತ್ತಲು ತಿರುಗುವಾಗ ಅದರ ಕಕ್ಷೆ (ಅಚ್ಚು) ಕಕ್ಷಾ ಪಾತಳಿಗೆ ನೀಟಾಗಿ ಅಂದರೆ ಕಾಟಕೋನವಾಗಿರುವದಿಲ್ಲ. ಅದು ಕಕ್ಷಾ ಪಾತಳಿಗೆ ೯೦°ದ ಕೋನವನ್ನು ಮಾಡದೆ ೬೬।।° ಅಂಶದ ಕೋನವನ್ನು ಮಾಡುತ್ತದೆ. ಬದಿಗಿರುವ ಆಕೃತಿಯ ಮೇಲಿಂದ ನಿಮಗೆ ಇದು ಸ್ಪಷ್ಟವಾಗಿ ತಿಳಿದು ಬರುವದು.



ಅದರ ಈ ಒಲವಿನಿಂದ ಹಗಲುಗಳು ಸಣ್ಣ ದೊಡ್ಡವಾಗುತ್ತವೆ. ಅದರಂತೆ ಪೃಥ್ವಿಯು **ಸೂರ್ಯನ ಸುತ್ತಲು** ತಿರುಗುತ್ತಿರುವಾಗ ಅಂತರಿಕ್ಷದೊಳಗೆ ಎಲ್ಲಿ ಇದ್ದರೂ ಕೂಡ ಅದರ ಅಚ್ಚು ಯಾವಾಗಲೂ ಆಕಾಶದೊಳಗಿನ 'ಧ್ರುವ' ವೆಂಬ ಅಚಲವಾದ ಚಿಕ್ಕೆಯ ಕಡೆಗೆ ತೋರಿಸುತ್ತಿರುತ್ತದೆ. ಇದರಿಂದ ಪೃಥ್ವಿಯು ತನ್ನ ಮಾರ್ಗದ ಮೇಲಿರುವಾಗ ಅದರ ಉತ್ತರ ಧ್ರುವವು ಕೆಲವು ದಿವಸ ಸೂರ್ಯನ ಕಡೆಗೆ ಒಲೆದಿರುತ್ತದೆ. ದಕ್ಷಿಣ ಧ್ರುವವು ಕೆಲವು ದಿವಸಗಳ ವರೆಗೆ ಸೂರ್ಯನ ಕಡೆಗೆ ತಿರುಗಿರುತ್ತದೆ. ಆದ್ದರಿಂದ ಕೆಲವೊಂದು ಸ್ಥಳದಲ್ಲಿ ಈ ಹೊತ್ತು ಹಗಲು ದೊಡ್ಡದಾಗಿದ್ದರೆ ಅಲ್ಲಿ ತುಸು ದಿವಸಗಳಾದ ನಂತರ ರಾತ್ರಿಯು ದೊಡ್ಡದಾಗುತ್ತದೆ. ಪೃಥ್ವಿಯ ಅಚ್ಚು ಕಕ್ಷಾ ಪಾತಳಿಗೆ ಕಾಟಕೋನವಾಗಿದ್ದರೆ, ಪೃಥ್ವಿಯ ಪ್ರತಿಯೊಂದು ಭಾಗದ ಮೇಲೆ ಹಗಲು-ರಾತ್ರಿಗಳು ಹನ್ನೆರಡೂ ತಿಂಗಳು ಅಷ್ಟಷ್ಟೇ ಅವಧಿಯವು ಆಗುತ್ತಿದ್ದವು. ಮತ್ತು ವರುಷದಲ್ಲೆಲ್ಲ ಎಲ್ಲ ಕಡೆಗಳಲ್ಲಿಯೂ ಒಂದೇ ಋತುಮಾನವಿರುತ್ತಿತ್ತು.

ಪೃಥ್ವಿಯು ಸೂರ್ಯನ ಸುತ್ತಲು ತಿರುಗುತ್ತ ಜೂನ ತಿಂಗಳಿನ ೨೧ನೇ ತಾರೀಖಿನ ದಿವಸ ಆಕೃತಿಯೊಳಗೆ ತೋರಿಸಿದ ಸ್ಥಿತಿಯಲ್ಲಿ ಬರುತ್ತದೆ. ಆದರ ಅಕ್ಷವು ಕಕ್ಷಾಪಾತಳಿಗೆ ೬೬।।° ಕೋನಮಾಡಿ ಸೂರ್ಯನ ಕಡೆಗೆ ಒಲೆದದ್ದರಿಂದ, ಆ ಕಾಲಕ್ಕೆ ಉತ್ತರ ಧ್ರುವದ ಹತ್ತರ ಇರುವ ೨೩।।°ಗಳ ವರೆಗಿನ ಪ್ರದೇಶವು ಒಂದೇ ಸವನೆ ಸೂರ್ಯನ ಪ್ರಕಾಶದಲ್ಲಿರುವದು.

ಇದರ ವಿರುದ್ಧವಾಗಿ ದಕ್ಷಿಣ ಧ್ರುವದ ಹತ್ತರಿರುವ ೨೩॥°ಗಳ ವರೆಗಿನ ಪ್ರದೇಶವು ಯಾವಾಗಲೂ ಕತ್ತಲೆಯಲ್ಲಿರುತ್ತದೆ. ವಿಷುವ-ವೃತ್ತದ ಉತ್ತರ ಕಡೆಗಿರುವ ಸ್ಥಳಗಳಲ್ಲಿ ರಾತ್ರಿಗಿಂತ ಹಗಲು ದೊಡ್ಡದಾಗಿರುತ್ತದೆ. ಮತ್ತು ದಕ್ಷಿಣದ ಕಡೆಗಿರುವ ಸ್ಥಳಗಳಲ್ಲಿ ಹಗಲಿಗಿಂತ ರಾತ್ರಿಗಳು ದೊಡ್ಡವಾಗಿರುತ್ತವೆ.




ವಿಷುವ-ವೃತ್ತದ ಮೇಲೆ ಮಾತ್ರ ಹಗಲಿರುಳುಗಳು ಸಮಾನವಾಗಿರುತ್ತವೆ. ವಿಷುವ-ವೃತ್ತದಿಂದ ಉತ್ತರ ಧ್ರುವದ ಕಡೆಗೆ ಹೋದ ಹಾಗೆ ಹಗಲುಗಳು ದೊಡ್ಡವಾಗುತ್ತ ಹೋಗುತ್ತವೆ; ಆದರೆ ರಾತ್ರಿಗಳು ಮಾತ್ರ ಸಣ್ಣ ವಾಗುತ್ತ ಹೋಗುತ್ತವೆ. ವಿಷುವ-ವೃತ್ತದ ಮೇಲೆ ಹಗಲು ೧೨ ತಾಸಿನದೂ ರಾತ್ರಿಯು ೧೨ ತಾಸಿನದೂ ಇರುತ್ತವೆ. ೩೦° ಅಕ್ಷ-ವೃತ್ತದ ಮೇಲೆ ಹಗಲು ೧೪ ತಾಸಿನ ಮತ್ತು ರಾತ್ರಿಯು ೧೦ ತಾಸಿನದು, ೪೫° ಅಕ್ಷ-ವೃತ್ತದ ಮೇಲೆ ಹಗಲು ೧೫॥ ತಾಸಿನದು, ೬೦° ಅಕ್ಷ-ವೃತ್ತದ ಮೇಲೆ ೧೮॥ ತಾಸಿನದು ಮತ್ತು ೬೬॥° ಅಕ್ಷ-ವೃತ್ತದ ಮೇಲೆ ಅಂದರೆ ಉತ್ತರ ಧ್ರುವ-ವೃತ್ತದ ಮೇಲೆ ೨೪ ತಾಸಿನ ಹಗಲುಗಳು ಇರುತ್ತವೆ. ಉತ್ತರ ಧ್ರುವ-ವೃತ್ತದಿಂದ ನೆಟ್ಟಗೆ ಉತ್ತರ-ಧ್ರುವದ ವರೆಗೆ ಎಲ್ಲಿಯೂ ರಾತ್ರಿಯು ಇರುವದಿಲ್ಲ; ಕೇವಲ ಹಗಲು ಇರುತ್ತದೆ. ಇದೇ ವೇಳೆಯಲ್ಲಿ ಅಂದರೆ ಜೂನ ೨೧ನೇ ತಾರೀಖಿನ ದಿವಸ ವಿಷುವ-ವೃತ್ತದ ದಕ್ಷಿಣದ ಕಡೆಗಿರುವ ಪ್ರದೇಶದೊಳಗೆ ೩೦° ಅಕ್ಷ-ವೃತ್ತದ ಮೇಲೆ ೧೪ ತಾಸಿನ ರಾತ್ರಿಯು ಮತ್ತು ೧೦ ತಾಸಿನ ಹಗಲು, ೪೫° ಅಕ್ಷ-ವೃತ್ತದ ಮೇಲೆ ೧೫॥ ತಾಸಿನ ರಾತ್ರಿಯು, ೬೦° ಅಕ್ಷ-ವೃತ್ತದ ಮೇಲೆ ೧೮॥ ತಾಸಿನ ರಾತ್ರಿಯು ಮತ್ತು ೬೬॥° ಅಕ್ಷ-ವೃತ್ತದ ಮೇಲೆ ೨೪ ತಾಸಿನ ರಾತ್ರಿಯು ಇರುತ್ತದೆ.

ಸಪ್ಟೆಂಬರ ೨೧ನೇ ತಾರೀಖಿನಿಂದ ಡಿಸೆಂಬರ ೨೧ನೇ ತಾರೀಖಿನ ವರೆಗೆ ದಕ್ಷಿಣ ಧ್ರುವವು ಸೂರ್ಯನ ಕಡೆಗೆ ಪ್ರತಿ ದಿವಸ ಹೆಚ್ಚೆಚ್ಚು ಒಲೆಯುತ್ತ, ಡಿಸೆಂಬರ ೨೧ನೇ ತಾರೀಖಿನ ದಿವಸ ಅದು ತನ್ನ ಒಲವಿನ ಮೆಟ್ಟನ್ನು ಮುಟ್ಟುತ್ತದೆ. ಈ ಅವಧಿಯೊಳಗೆ ದಕ್ಷಿಣ ಗೋಲಾರ್ಧದೊಳಗಿನ ಹಗಲುಗಳ ವೇಳೆಯು ಹೆಚ್ಚಾಗುತ್ತ ಹೋಗುತ್ತದೆ. ಮತ್ತು ರಾತ್ರಿಗಳು ಸಣ್ಣವಾಗುತ್ತ ಹೋಗುತ್ತವೆ. ಜೂನ ೨೧ನೇ ತಾರೀಖಿನ ದಿವಸ ಬೇರೆ ಬೇರೆ ಉತ್ತರ ಅಕ್ಷ-ವೃತ್ತಗಳ ಮೇಲಿನ ಹಗಲುರಾತ್ರಿಗಳ ಕಾಲಮರ್ಯಾದೆಗಳೇ ಡಿಸೆಂಬರ ೨೧ನೇ ತಾರೀಖಿನ ದಿವಸ ಆಯಾ ದಕ್ಷಿಣ ವೃತ್ತಗಳ ಮೇಲೆ ಇರುತ್ತವೆ. ದಕ್ಷಿಣ ಧ್ರುವ-ವೃತ್ತದ ಕಡೆಗಿರುವ ಪ್ರದೇಶವು ೨೪ ತಾಸು ಬೆಳಕಿನಲ್ಲಿರುತ್ತದೆ. ವಿಷುವ-ವೃತ್ತದಿಂದ ನೆಟ್ಟಗೆ ದಕ್ಷಿಣ ಧ್ರುವದ ವರೆಗಿನ ಪ್ರದೇಶ




ಡಿಸೆಂಬರ ೨೧ನೇ ತಾರೀಖಿನ ದಿವಸ.

ದಲ್ಲೆಲ್ಲ ಹಗಲುಗಳು ೧೨ ತಾಸಿನಗಿಂತ ದೊಡ್ಡವಾಗಿರುತ್ತವೆ. ಮಕರ-ವೃತ್ತದ ಮೇಲೆ ಅಂದರೆ ವಿಷುವ-ವೃತ್ತದ ದಕ್ಷಿಣಕ್ಕೆ ೨೩½° ಅಕ್ಷ-ವೃತ್ತದ ಮೇಲೆ ಸೂರ್ಯನ ಕಿರಣಗಳು ಲಂಬರೂಪವಾಗಿಯೂ ಪ್ರಖರವಾಗಿಯೂ ಇರುತ್ತವೆ. ಈ ದಿವಸವು ದಕ್ಷಿಣ ಗೋಲಾರ್ಧದೊಳಗಿನ ನಡು ಬೇಸಿಗೆಯ ದಿವಸವೂ ಇದಕ್ಕೆ ವಿಪರೀತವಾಗಿ ಉತ್ತರ ಗೋಲಾರ್ಧದೊಳಗಿನ ನಡು ಚಳಿಗಾಲದ ದಿವಸವೂ ಆಗಿರುತ್ತದೆ. ಈ ದಿವಸ ಸೂರ್ಯನ ದಕ್ಷಿಣ ಕಡೆಯ ಗತಿಯು ನಿಲ್ಲುತ್ತದೆ. ಮತ್ತು ಇನ್ನು ಮೇಲೆ ಆತನು ಉತ್ತರಕ್ಕೆ ಸರಿಯಲಾರಂ

ಭಿಸುವನು. ನಿಜವಾಗಿ ಸೂರ್ಯನು ಉತ್ತರಕ್ಕಾಗಲಿ ದಕ್ಷಿಣಕ್ಕಾಗಲಿ ಸರಿಯುವದಿಲ್ಲ. ಉತ್ತರಧ್ರುವವಾಗಲಿ, ದಕ್ಷಿಣಧ್ರುವವಾಗಲಿ ಸೂರ್ಯನ ಕಡೆಗೆ ಒಲೆಯುತ್ತಿರುತ್ತದೆ. ಇದರಿಂದ ಸೂರ್ಯನು ಸರಿದಂತೆ ನಮಗೆ ಭಾಸವಾಗುತ್ತದೆ. ಡಿಸೆಂಬರ ೨೧ನೇ ತಾರೀಖಿನ ದಿವಸ ಪೃಥ್ವಿಯ ಸ್ಥಿತಿಯು ಹೇಗಿರುತ್ತದೆಂಬುದನ್ನು ಮೇಲಿನ ಆಕೃತಿಯಿಂದ ಕಂಡುಕೊಳ್ಳಬಹುದು.

ಡಿಸೆಂಬರ ೨೧ನೇ ತಾರೀಖಿನಿಂದ ಮಾರ್ಚ ೨೧ರ ವರೆಗೆ ಸೂರ್ಯನು ಪ್ರತಿದಿವಸ ಉತ್ತರಕ್ಕೆ ಹೆಚ್ಚೆಚ್ಚು ಸರಿಯಲಾರಂಭಿಸುವನು. ಅಂದರೆ ಸೂರ್ಯನ ಕಡೆಗಿರುವ ಉತ್ತರಧ್ರುವದ ಒಲವು ಕಡಿಮೆಯಾಗುತ್ತ ಹೋಗುತ್ತದೆ ಅದರ ಸಂಗಡಲೇ ದಕ್ಷಿಣಗೋಲಾರ್ಧದೊಳಗಿನ ಹಗಲುಗಳ ಕಾಲಾವಧಿಯು ಕ್ರಮೇಣ ಕಡಿಮೆಯಾಗುತ್ತದೆ. ಕಟ್ಟಕಡೆಗೆ ಮಾರ್ಚ ತಿಂಗಳಿನ ೨೧ನೇ ತಾರೀಖಿನ ದಿವಸ ಉತ್ತರ ಧ್ರುವವೂ, ದಕ್ಷಿಣ ಧ್ರುವವೂ, ಸೂರ್ಯನ ಕಡೆಗೆ ಅಷ್ಟಷ್ಟೇ ಒಲೆದದ್ದು ಕಂಡುಬರುವದು. ಆದ್ದರಿಂದ ಸಪ್ಟೆಂಬರ ೨೩ನೇ ತಾರೀಖಿನಂತೆ ಈ ದಿವಸವಾದರೂ ಪೃಥ್ವಿಯ ಮೇಲಿನ ಯಾವತ್ತೂ ಭಾಗಗಳಲ್ಲಿ ಹಗಲು-ಇರುಳುಗಳು ಅಷ್ಟಷ್ಟೇ ಅಂದರೆ, ೧೨ ತಾಸಿನವು ಇರುತ್ತವೆ. ಸೂರ್ಯನ ಕಿರಣಗಳು ವಿಷುವ-ವೃತ್ತದ ಮೇಲೆ ಪುನಃ ಲಂಬರೂಪವಾಗಿ ಬೀಳುತ್ತವೆ. ದಕ್ಷಿಣ ಗೋಲಾರ್ಧದೊಳಗಿನ ಬೇಸಿಗೆಯು ಮುಗಿದು ಚಳಿಗಾಲವು ಆರಂಭವಾಗುತ್ತದೆ. ಇದರ ವಿರುದ್ಧವಾಗಿ ಉತ್ತರ ಗೋಲಾರ್ಧದೊಳಗೆ ಬೇಸಿಗೆಯು ಆರಂಭವಾಗುತ್ತದೆ.

ಮಾರ್ಚ ೨೧ರಿಂದ ಜೂನ ೨೧ರ ವರೆಗೆ ಸೂರ್ಯನು ಕಳೆದ ಮೂರು ತಿಂಗಳುಗಳಂತೆಯೇ ಉತ್ತರಕ್ಕೆ ಸರಿಯುತ್ತಿರುತ್ತಾನೆ. ಅಂದರೆ ಉತ್ತರ ಧ್ರುವವು ಸೂರ್ಯನ ಕಡೆಗೆ ಕ್ರಮೇಣ ಒಲೆಯಲಾರಂಭಿಸುತ್ತದೆ. ಆತನ ಈ ಒಲವು ಜೂನ ೨೧ನೇ ತಾರೀಖಿನ ದಿವಸ ಮುಗಿಯುತ್ತದೆ. ಮಾರ್ಚ ೨೧ರಿಂದ ಜೂನ ೨೧ರ ವರೆಗೆ ಉತ್ತರ ಗೋಲಾರ್ಧದೊಳಗಿನ ಹಗಲುಗಳು ೧೨ ತಾಸಿನಗಿಂತ ದೊಡ್ಡವಾಗುತ್ತ ಹೋಗುತ್ತವೆ. ಮತ್ತು ಇರುಳುಗಳು ಸಣ್ಣವಾಗುತ್ತ ಹೋಗುತ್ತವೆ. ಇದರಿಂದ ಅಲ್ಲಿ ಬೇಸಿಗೆಯು ಆಗಲಾರಂಭಿಸುತ್ತದೆ. ಮತ್ತು ದಕ್ಷಿಣ ಗೋಲಾರ್ಧದೊಳಗೆ ಇದಕ್ಕೆ ವಿರುದ್ಧವಾದ ಸ್ಥಿತಿಯು ಇರುತ್ತದೆ. ಆದ್ದರಿಂದ ಆ ಗೋಲಾರ್ಧದೊಳಗೆ ಚಳಿಗಾಲ ವಿರು

ತ್ತದೆ. ಈ ರೀತಿಯಿಂದ ಪೃಥ್ವಿಯು ಸೂರ್ಯನ ಸುತ್ತಲು ತಿರುಗುವ ಮುಂದೆ ಬೇರೆ ಬೇರೆ ಪರಿಸ್ಥಿತಿಗಳೊಳಗಿಂದ ಹೋಗುತ್ತದೆ. ಒಟ್ಟಿನ ಮೇಲಿಂದ ಹೇಳುವದೇನಂದರೆ ಅದರ ಒಲೆದ ಅಚ್ಚಿನಿಂದಲೂ, ಅಚ್ಚು ಧ್ರುವನಕ್ಷತ್ರದ ಕಡೆಗೆ ಯಾವಾಗಲೂ ತೋರಿಸುತ್ತಿರುವದರಿಂದಲೂ ಬೇರೆ ಬೇರೆ ಋತುಗಳುಂಟಾಗುತ್ತವೆ. ಋತುಗಳ ಸಂಬಂಧದಲ್ಲಿ ಕೆಳಗೆ ಕೊಟ್ಟ ಸಂಗತಿಗಳನ್ನು ನೆನಪಿನಲ್ಲಿಡಬೇಕು.

ಸಪ್ಟೆಂಬರ ೨೧ನೇ ತಾರೀಖಿನಿಂದ ಮಾರ್ಚ ೨೧ನೇ ತಾರೀಖಿನ ವರೆಗೆ ದಕ್ಷಿಣ ಗೋಲಾರ್ಧದೊಳಗೆ ಬೇಸಿಗೆಯೂ ಉತ್ತರ ಗೋಲಾರ್ಧದೊಳಗೆ ಚಳಿಗಾಲವೂ ಇರುತ್ತದೆ. ಮತ್ತು ೨೧ನೇ ಮಾರ್ಚದಿಂದ ಸಪ್ಟೆಂಬರ ೨೧ನೇ ತಾರೀಖಿನ ವರೆಗೆ ಉತ್ತರ ಗೋಲಾರ್ಧದೊಳಗೆ ಬೇಸಿಗೆಯೂ ದಕ್ಷಿಣ ಗೋಲಾರ್ಧದೊಳಗೆ ಚಳಿಗಾಲವೂ ಇರುತ್ತದೆ. ಈ ರೀತಿಯಿಂದ ಉತ್ತರ-ದಕ್ಷಿಣ ಗೋಲಾರ್ಧದೊಳಗಿನ ಋತುಮಾನಗಳು ಒಂದಕ್ಕೊಂದು ವಿರುದ್ಧವಾಗಿರುತ್ತವೆ.

ಜೂನ ೨೧ನೇ ತಾರೀಖು ಉತ್ತರ ಗೋಲಾರ್ಧದೊಳಗಿನ ಎಲ್ಲಕ್ಕೂ ದೊಡ್ಡದೂ ನಡು ಬೇಸಿಗೆಯ ದಿವಸವಾಗಿದ್ದೂ, ದಕ್ಷಿಣ ಗೋಲಾರ್ಧ ದೊಳಗೆ ಅದೇ ದಿವಸವು ಅತಿ ಸಣ್ಣದೂ ನಡು ಚಳಿಗಾಲದ ದಿವಸವೂ ಆಗಿರುತ್ತದೆ. ಇದಕ್ಕೆ ವಿರುದ್ಧವಾಗಿ ಡಿಸೆಂಬರ ೨೧ನೇ ತಾರೀಖು ಉತ್ತರ ಗೋಲಾರ್ಧದೊಳಗಿನ ಎಲ್ಲಕ್ಕೂ ಸಣ್ಣ ಹಗಲೂ ನಡು ಚಳಿಗಾಲದ ದಿವಸವೂ ಆಗಿರುತ್ತದೆ. ಆದರೆ ದಕ್ಷಿಣ ಗೋಲಾರ್ಧದೊಳಗೆ ಈ ದಿವಸವು ನಡುಬೇಸಿಗೆಯದೂ ಅತಿ ದೊಡ್ಡ ಹಗಲಿನದೂ ಆಗಿರುತ್ತದೆ.

ಸಪ್ಟೆಂಬರ ೨೧ ಮತ್ತು ಮಾರ್ಚ ೨೧ನೇ ತಾರೀಖಿನ ದಿವಸ ಪೃಥ್ವಿಯ ಯಾವತ್ತೂ ಭಾಗಗಳಲ್ಲಿ ಹಗಲು ಮತ್ತು ರಾತ್ರಿಗಳು ಅಷ್ಟಷ್ಟೇ ಅಂದರೆ ೧೨ ತಾಸಿನವು ಇರುತ್ತವೆ.

ಸೂರ್ಯನು ಆರು ತಿಂಗಳುಗಳ ವರೆಗೆ ಕರ್ಕ-ವೃತ್ತದಿಂದ ಮಕರ-ವೃತ್ತದ ವರೆಗೆ ಸರಿಯುವಂತೆ ಕಾಣುತ್ತಾನೆ. ಮತ್ತು ಮುಂದೆ ಆರು ತಿಂಗಳು ತನಕ ಮಕರ-ವೃತ್ತದಿಂದ ಕರ್ಕ-ವೃತ್ತದ ವರೆಗೆ ಆತನು ಹೋಗು

ವಂತೆ ಭಾಸಿಸುತ್ತಾನೆ. ಈ ಎರಡು ವೃತ್ತಗಳು ಆತನ ಲಂಬರೂಪ ಕಿರಣಗಳ ಸೀಮೆಗಳಾಗಿರುತ್ತವೆ. ಅವುಗಳ ಆಚೆಯಲ್ಲಿ ಆತನ ಕಿರಣಗಳು ಯಾವಾಗಲೂ ವಕ್ರವಾಗಿ ಬೀಳುತ್ತವೆ. ಮಕರ ಮತ್ತು ಕರ್ಕ-ವೃತ್ತಗಳ ನಡುವಿನ ಪ್ರದೇಶದೊಳಗಿನ ಪ್ರತಿಯೊಂದು ಸ್ಥಳದಲ್ಲಿ ಸೂರ್ಯನು ವರ್ಷದೊಳಗೆ ಎರಡು ಸಾರೆ ಮಧ್ಯಾಹ್ನದೊಳಗೆ ಸರಿಯಾಗಿ ನೆತ್ತಿಯ ಮೇಲೆ ಬರುತ್ತಾನೆ. ಆ ಕಾಲಕ್ಕೆ ಆತನ ಕಿರಣಗಳು ಅಲ್ಲಿ ಲಂಬರೂಪವಾಗಿರುತ್ತವೆ.

ವಿಷುವ-ವೃತ್ತದ ಮೇಲೆ ಹಗಲು-ರಾತ್ರಿಗಳು ಹನ್ನೆರಡೂ ತಿಂಗಳು ೧೨ ತಾಸಿನವು ಇರುತ್ತವೆ.

ಬೇಸಿಗೆಯ ಪೂರ್ವ ಭಾಗಕ್ಕೆ ವಸಂತ ಋತುವೆಂತಲೂ, ಚಳಿಗಾಲದ ಪೂರ್ವ ಭಾಗಕ್ಕೆ ಶರದೃತುವೆಂತಲೂ ಅನ್ನುವರು. ಜೂನ ೨೧ನೇ ತಾರೀಖಿನಿಂದ ಡಿಸೆಂಬರ ೨೧ನೇ ತಾರೀಖಿನ ವರೆಗಿನ ಆರು ತಿಂಗಳಿನ ಅವಧಿಗೆ 'ದಕ್ಷಿಣಾಯಣ' ವೆಂತಲೂ, ಡಿಸೆಂಬರ ೨೧ನೇ ತಾರೀಖಿನಿಂದ ಜೂನ ೨೧ನೇ ತಾರೀಖಿನ ವರೆಗಿನ ಆರು ತಿಂಗಳಿನ ಅವಧಿಗೆ 'ಉತ್ತರಾಯಣ' ವೆಂತಲೂ ಅನ್ನುತ್ತಾರೆ.

೨೬ನೇ ಪ್ರಕರಣ

# ಋತುಮಾನಗಳಿಗನುಸಾರವಾಗಿ ವಾತಾವರಣದ

## ಉಷ್ಣತೆಯಲ್ಲಿಯೂ ಒತ್ತುವಿಕೆಯಲ್ಲಿಯೂ ಆಗುವ ಹೆಚ್ಚು ಕಡಿಮೆಗಳೂ, ಗಾಳಿ ಮುಂತಾದವುಗಳೂ

**ಹವೆಯು ಹೇಗೆ ಕಾಯುತ್ತದೆ ? :**—ಸೂರ್ಯನಿಂದ ಹೊರಟ ಉಷ್ಣತೆಯ ಕಿರಣಗಳೂ, ಪ್ರಕಾಶ ಕಿರಣಗಳೂ ವಾತಾವರಣದೊಳಗಿಂದ ಪ್ರವಾಸ ಮಾಡುತ್ತ ಭೂಪೃಷ್ಠದ ಮೇಲೆ ಬಂದು ಬೀಳುವವು. ಅವು ವಾತಾವರಣದೊಳಗಿಂದ ಹಾದು ಬರುವಾಗ ಅವುಗಳೊಳಗಿನ ಉಷ್ಣತೆಯನ್ನು ವಾತಾವರಣವು ಹೀರಿಕೊಳ್ಳುತ್ತದೆ. ಆದರೂ ಅದು ಉಷ್ಣತೆಯನ್ನು ತೀರ ತುಸು ಪ್ರಮಾಣದಲ್ಲಿ ಹೀರಿಕೊಳ್ಳುತ್ತದೆ. ಬಹುತರ ಯಾವತ್ತೂ ಉಷ್ಣತೆಯ ಕಿರಣಗಳು ನೆಲದ ಮೇಲೆ ಬಿದ್ದ ಬಳಿಕ, ಭೂಮಿಯಲ್ಲಿಯೂ ನೀರಿನಲ್ಲಿಯೂ ಶೋಷಿಸಲ್ಪಡುತ್ತವೆ. ಆದರೆ ನೆಲವಾಗಲಿ ನೀರಾಗಲಿ ತಾವು ಹೀರಿಕೊಂಡ ಉಷ್ಣತೆಯನ್ನು ತಮ್ಮ ಹತ್ತರ ಇಟ್ಟುಕೊಳ್ಳದೆ, ಅದನ್ನು ತಿರುಗಿ ನಾಲ್ಕೂ ಕಡೆಗೆ ಚದುರಿಸುತ್ತಿರುತ್ತವೆ. ಈ ತಿರುಗಿ ಬಿಟ್ಟ ಉಷ್ಣತೆಯಿಂದ ಅಂದರೆ 'ಉಷ್ಣತಾ ಸಂಸರ್ಪಣ' (Radiation) ದಿಂದ ಭೂಪೃಷ್ಠಕ್ಕೆ ಹೊಂದಿಕೊಂಡಿದ್ದ ಹವೆಯು ಕಾಯುತ್ತದೆ. ಈ ಕಾಯ್ದ ವಾತಾವರಣಕ್ಕೆ ಹೊಂದಿಕೊಂಡಿದ್ದ ಅದರ ಮೇಲಿನ ತರಗಳು ಕೆಳಗಿನ ತರದಿಂದ ಕಾಯುತ್ತವೆ. ಈ ರೀತಿಯಿಂದ ವಾತಾವರಣದೊಳಗಿನ ಮೇಲಿನ ತರಗಳಿಗೆ ಅನುಕ್ರಮದಿಂದ ಉಷ್ಣತೆಯು ಸಿಗುತ್ತ ಹೋಗುತ್ತದೆ. ಆದರೆ ಈ ಉಷ್ಣತೆಯು ಹೆಚ್ಚೆಚ್ಚು ಮೇಲೆ ಹೋದಂತೆ ಕಡಿಮೆಯಾಗುವದೆಂಬ ಮಾತು ಸ್ವಾಭಾವಿಕವಾದದ್ದು.




ಜುಲೈ ತಿಂಗಳಿನೊಳಗಿನ ಸಮೋಷ್ಣತಾದರ್ಶಕ ರೇಷೆಗಳು.

**ಸಮೋಷ್ಣತಾದರ್ಶಕ ರೇಷೆಗಳು :**—ಪೃಥ್ವಿಯು ಮೇಲೆ ಬೇರೆ ಬೇರೆ ಋತುಗಳಲ್ಲಿ ಮತ್ತು ಬೇರೆ ಬೇರೆ ಸ್ಥಳಗಳಲ್ಲಿ ಉಷ್ಣತಾಮಾನದೊಳಗೆ ಹೇಗೆ ಹೆಚ್ಚು ಕಡಿಮೆಯಾಗುತ್ತದೆಂಬುದನ್ನು ನೋಡುವಾ. ಇದನ್ನು ನೋಡುವದಕ್ಕೋಸ್ಕರ ನಕಾಶೆಗಳೊಳಗೆ ಸಮೋಷ್ಣತಾದರ್ಶಕ ರೇಷೆಗಳ ಉಪಯೋಗವನ್ನು ಮಾಡಿರುತ್ತಾರೆ. ಅದೇ ಮಾಸಿಕ ಸರಾಸರೀ ಉಷ್ಣತಾಮಾನವಿರುವ ಯಾವತ್ತೂ ಸ್ಥಳಗಳನ್ನು ಒಂದು ರೇಷೆಯಿಂದ ಜೋಡಿಸಿರುತ್ತಾರೆ. ಇಂಥ ರೇಷೆಗೆ ಸಮೋಷ್ಣತಾರೇಷೆಯೆಂದೆನ್ನುತ್ತಾರೆ. ಇಂಥ ಸರಿಯಾದ ಉಷ್ಣತಾ ದರ್ಶಕ ರೇಷೆಗಳನ್ನು ಆಕೃತಿಯಲ್ಲಿ ತೋರಿಸಿರುತ್ತದೆ. ಜುಲೈ ತಿಂಗಳಿನ ನಕಾಶದೊಳಗೆ ೮೦° ಉಷ್ಣತಾದರ್ಶಕ ರೇಷೆಯನ್ನು ನೋಡಿರಿ. ಈ ರೇಷೆಯು ಹಾಯ್ದು ಹೋಗುವ ಯಾವತ್ತೂ ಸ್ಥಳಗಳಲ್ಲಿಯ ಸರಾಸರೀ ಉಷ್ಣತಾಮಾನವು ೮೦° ಇರುತ್ತದೆಂದು ತಿಳಿಯತಕ್ಕದ್ದು. ಎಲ್ಲ ಸ್ಥಳಗಳು ಸಮುದ್ರ ಸಪಾಟಿಯ ಮೇಲಿರುತ್ತವೆಂದು ತಿಳಿದು, ಅಲ್ಲಿಯ ಉಷ್ಣತಾಮಾನವನ್ನು ಈ ರೇಷೆಯಿಂದ ತೋರಿಸಿರುತ್ತಾರೆ.

ಮೇಲಿನ ನಕಾಶವನ್ನು ಚೆನ್ನಾಗಿ ಪರೀಕ್ಷಿಸಿ ನೋಡಿದರೆ ಕೆಳಗಿನ ಸಂಗತಿಗಳು ಲಕ್ಷ್ಯದಲ್ಲಿ ಬರುವವು. (೧) ವಿಷುವ-ವೃತ್ತದಿಂದ ಉತ್ತರಕ್ಕೂ ದಕ್ಷಿಣಕ್ಕೂ ಕ್ರಮೇಣ ಉಷ್ಣತಾಮಾನವು ಕಡಿಮೆಯಾಗುತ್ತ ಹೋದದ್ದು ಕಂಡುಬರುವದು. (೨) ಜುಲೈ ತಿಂಗಳಿನ ನಕಾಶೆಯೊಳಗೆ ಎಲ್ಲ ರೇಷೆಗಳು ಉತ್ತರಕ್ಕೆ ಸರಿದದ್ದು ಕಂಡುಬರುತ್ತದೆ ಮತ್ತು ಜಾನೇವರೀ ತಿಂಗಳಿನ ನಕಾಶೆಯೊಳಗೆ ಅವು ದಕ್ಷಿಣಕ್ಕೆ ಸರಿದದ್ದು ಕಂಡುಬರುತ್ತದೆ. ಇದರ ಮೇಲಿಂದ ಉತ್ತರ ಗೋಲಾರ್ಧದೊಳಗೆ ಜುಲೈ ತಿಂಗಳಿನಲ್ಲಿ ಮತ್ತು ದಕ್ಷಿಣ ಗೋಲಾರ್ಧದೊಳಗೆ ಜಾನೇವರಿಯಲ್ಲಿ ಹೆಚ್ಚು ಉಷ್ಣತಾಮಾನವು ಇರುತ್ತದೆಂದು ಕಂಡುಬರುತ್ತದೆ. (೩) ದಕ್ಷಿಣ ಗೋಲಾರ್ಧದೊಳಗೆ ನೀರಿನಿಂದ ವ್ಯಾಪಿಸಿದ ಭಾಗದೊಳಗಿಂದ ಸಮೋಷ್ಣತಾದರ್ಶಕ ರೇಷೆಗಳು ಹೋಗುವಾಗ ಅಕ್ಷ-ವೃತ್ತಗಳಿಗೆ ಅವು ಬಹುತರ ಸಮಾಂತರವಾಗಿ ಹೋಗಿರುವದು ಕಂಡುಬರುತ್ತದೆ; ಆದರೆ ಉತ್ತರ ಗೋಲಾರ್ಧದೊಳಗೆ ಅವು ಹೆಚ್ಚಾಗಿ ವಕ್ರವಾಗಿರುತ್ತವೆ. ಇದರ ಕಾರಣವೇನು? (೪) ಜುಲೈ ತಿಂಗಳಿನ ನಕಾಶೆಯೊಳಗೆ ಉತ್ತರ ಗೋಲಾರ್ಧದಲ್ಲಿ ಈ ರೇಷೆಗಳು ಭೂಮಿಯ ಮೇಲೆ ಉತ್ತರಕ್ಕೆ ಮಣಿದದ್ದೂ ನೀರಿನ ಮೇಲೆ ದಕ್ಷಿಣಕ್ಕೆ ಮಣಿದದ್ದೂ




ಜಾನೇವರೀ ತಿಂಗಳಿನೊಳಗಿನ ಸಮೋಷ್ಣತಾದರ್ಶಕ ರೇಷೆಗಳು.

ಕಂಡುಬರುತ್ತವೆ; ಆದರೆ ಇದರ ತೀರ ವಿರುದ್ಧವಾದ ಸ್ಥಿತಿಯು ದಕ್ಷಿಣ ಗೋಲಾರ್ಧದೊಳಗೆ ಕಂಡುಬರುತ್ತದೆ. ಇದರ ಮೇಲಿಂದ ಉತ್ತರ ಗೋಲಾರ್ಧದೊಳಗೆ ಒಂದೇ ಅಕ್ಷ-ವೃತ್ತದ ಮೇಲಿರುವ ನೆಲ ಮತ್ತು ನೀರುಗಳ ಮೇಲಿನ ಉಷ್ಣತಾಮಾನಗಳನ್ನು ಹೋಲಿಸಿ ನೋಡಿದರೆ, ನೆಲದ ಭಾಗವು ನೀರಿನ ಭಾಗಕ್ಕಿಂತ ಹೆಚ್ಚು ಕಾಯ್ದಿರುತ್ತದೆ; ಮತ್ತು ದಕ್ಷಿಣ ಗೋಲಾರ್ಧದೊಳಗೆ ನೆಲಕ್ಕಿಂತ ನೀರು ಹೆಚ್ಚು ಕಾಯ್ದಿರುತ್ತದೆಂಬ ಸಂಗತಿಗಳು ಕಂಡುಬರುತ್ತವೆ. (೫) ಎರಡೂ ನಕಾಶೆಗಳಲ್ಲಿ ಎಲ್ಲಕ್ಕೂ ಹೆಚ್ಚಾದ ಉಷ್ಣತೆಯನ್ನು ತೋರಿಸುವ ೯೦°ದ ರೇಷೆಯು ಸಂಪೂರ್ಣವಾಗಿ ನೆಲದ ಮೇಲಿರುವದಲ್ಲದೆ ಅದು ಸಮುದ್ರ ದಂಡೆಯನ್ನು ಬಿಟ್ಟು ದೂರದಲ್ಲಿದ್ದದ್ದು ಕಂಡುಬರುತ್ತದೆ. ಇದರ ಮೇಲಿಂದ ತಿಳಿದು ಬರುವದೇನಂದರೆ, ಅತಿ ಹೆಚ್ಚು ಉಷ್ಣತಾಮಾನದ ಪ್ರವೇಶವು ನೀರಿನ ಮೇಲಿರದೆ ಅದು ನೆಲದ ಮೇಲೆ ನಟ್ಟನಡುವೆ ಇರುತ್ತದೆ. (೬) ಜುಲೈ ಮತ್ತು ಜಾನೇವರೀ ತಿಂಗಳುಗಳ ಸರಾಸರೀ ಉಷ್ಣತಾಮಾನಗಳೊಳಗಿನ ಹೆಚ್ಚು ಕಡಿಮೆಯು ರಶಿಯದಂಥ ವಿಷುವ-ವೃತ್ತದಿಂದ ದೂರದಲ್ಲಿರುವ ಪ್ರದೇಶಗಳಲ್ಲಿ ಬಹಳ ಹೆಚ್ಚಾಗಿರುತ್ತದೆ; ಅದೇ ವಿಷುವ-ವೃತ್ತದ ಹತ್ತರದ ಪ್ರದೇಶದಲ್ಲಿ ತೀರ ಕಡಿಮೆಯಾಗಿರುತ್ತದೆ. (೭) ಅತಿ ಹೆಚ್ಚಾದ ಉಷ್ಣತಾಮಾನವು ಹನ್ನೆರಡೂ ತಿಂಗಳು ವಿಷುವ-ವೃತ್ತದ ಮೇಲಿರುವದಿಲ್ಲ; ಅದು ಸೂರ್ಯನ ದಕ್ಷಿಣೋತ್ತರದ ಗತಿಯ ಕೂಡ ದಕ್ಷಿಣಕ್ಕೂ ಉತ್ತರಕ್ಕೂ ಸರಿಯುತ್ತಿರುತ್ತದೆ.

**ವಾತಾವರಣದ ಒತ್ತುವಿಕೆಯೊಳಗಿನ ಹೆಚ್ಚು ಕಡಿಮೆಯು:—** ಸೂರ್ಯನ ಉಷ್ಣತೆ ಮತ್ತು ಪೃಥ್ವಿಯು ತನ್ನ ಸುತ್ತಲೂ ತಿರುಗುವದರ ಕಾರಣಗಳಿಂದ ಭೂ ಪ್ರದೇಶದ ಮೇಲೆ ವಾತಾವರಣ ಒತ್ತುವಿಕೆಯಲ್ಲಿ ಹೆಚ್ಚು ಕಡಿಮೆಯಾಗುವದು. ಸೂರ್ಯನ ಉಷ್ಣತೆಯಿಂದ ಭೂಮಿಯ ಮೇಲಿನ ಹವೆಯು ಕಾಯುತ್ತದೆ, ಮತ್ತು ವಿರಲವಾಗುತ್ತದೆ. ವಿರಲವಾದ ಹವೆಯು ಹಗುರಾಗಿರುವದರಿಂದ ಅದು ಮೇಲೆ ಹೋಗುತ್ತದೆ. ಅದು ಮೇಲಕ್ಕೆ ಹೋಗುವದರಿಂದ ಭೂಪೃಷ್ಠದ ಹತ್ತಿರಿರುವ ವಾತಾವರಣವಾದರೂ ವಿರಲವಾಗುತ್ತದೆ. ಮತ್ತು ಈ ವಿರಲತೆಯನ್ನು ಹೋಗಲಾಡಿಸಲಿಕ್ಕೆ ಹತ್ತಿರದಲ್ಲಿಯ ಹೆಚ್ಚಿನ ಒತ್ತಡದ ಹವೆಯು ಈ ಪ್ರದೇಶದಲ್ಲಿ ಬೀಸಿ ಬರುತ್ತದೆ. ಯಾವ ಭಾಗದಲ್ಲಿ ಸೂರ್ಯನ ಉಷ್ಣತೆಯು ಬಹಳ ಪ್ರಖರ

ವಾಗಿರುವದೋ ಈ ಭಾಗದಲ್ಲಿ ಹವೆಯು ಕಾಯುವದೂ, ವಿರಲವಾಗುವದೂ ಮತ್ತು ಮೇಲೆ ಹೋಗುವದೂ, ಈ ಕಾರ್ಯವು ಭರದಿಂದ ಸಾಗಿರುತ್ತದೆ. ಆದ್ದರಿಂದ ಅಲ್ಲಿ ಹವೆಯ ಒತ್ತುವಿಕೆಯು ಯಾವಾಗಲೂ ಕಡಿಮೆ ಇರುತ್ತದೆ. ಮೇಲೆ ಹೇಳಿದ ಹವೆಯ ಒತ್ತಡದ ರೀತಿಯನ್ನು ಲಕ್ಷಕ್ಕೆ ತೆಗೆದುಕೊಂಡರೆ ವಿಷುವ-ವೃತ್ತದಲ್ಲಿಯ ಪ್ರದೇಶವು ಎಲ್ಲ ಪ್ರದೇಶಗಳಿಗಿಂತ ಕಡಿಮೆ ಒತ್ತಡದ ಪ್ರದೇಶವಿದ್ದು, ಅಲ್ಲಿಂದ ಧ್ರುವಗಳ ಕಡೆಗೆ ಸಾಗಿದಂತೆ ಕ್ರಮವಾಗಿ ಹೆಚ್ಚಿನ ಒತ್ತಡದ ಪ್ರದೇಶಗಳು ಹತ್ತುವವೆಂತಲೂ ನಾವು ಸಾಧಾರಣವಾಗಿ ಹೇಳ

ಒತ್ತುವಿಕೆಯ ಪಟ್ಟಿಗಳೂ, ಗಾಳಿಗಳೂ.

ಬಹುದು. ಭೂಪೃಷ್ಠದ ಮೇಲೆ ಹೆಚ್ಚು ಅಥವಾ ಕಡಿಮೆ ಒತ್ತಡದ ಪ್ರದೇಶಗಳು ಎಲ್ಲಿ ಇರುವವೆಂಬುದನ್ನು ಮೇಲೆ ಕೊಟ್ಟಿರುವ ಆಕೃತಿಯನ್ನು ನೋಡಿದರೆ ತಿಳಿದು ಬರುವದು. ವಿಷುವ-ವೃತ್ತದ ಎರಡೂ ಬದಿಗೆ ಸುಮಾರು ೫ ಅಂಶಗಳ ವರೆಗಿನ ಪ್ರದೇಶವು ಕಡಿಮೆ ಒತ್ತಡದ ಪ್ರದೇಶವಿರುವದು. ಎರಡೂ ಗೋಲಾರ್ಧದಲ್ಲಿ ಸುಮಾರು ೨೦° ದಿಂದ ೪೦° ಅಕ್ಷ-ವೃತ್ತಗಳ

ಹೆಚ್ಚು ಒತ್ತಡದ ಪ್ರದೇಶಗಳಿರುತ್ತವೆ. ಧ್ರುವ-ವೃತ್ತದ ಹತ್ತಿರದ ಪ್ರದೇಶವು ಕಡಿಮೆ ಒತ್ತುವಿಕೆಯ ಪ್ರದೇಶವೆಂದು ತೋರಿಸಲಾಗಿದೆ. ವಿಷುವ-ವೃತ್ತದ ಹತ್ತಿರದ ಪ್ರದೇಶವು ಕಡಿಮೆ ಒತ್ತಡದ ಪ್ರದೇಶವೆಂದು ಏಕೆ ಕರೆಯುವರೆಂಬುದಕ್ಕೆ ಕಾರಣವನ್ನು ಮೇಲೆ ಹೇಳಿದೆ. ಆದರೆ ಧ್ರುವ-ವೃತ್ತದ ಹತ್ತಿರದ ಪ್ರದೇಶವು ಕಡಿಮೆ ಒತ್ತಡದ ಪ್ರದೇಶವೆಂದು ಕರೆಯಲ್ಪಡುವದು. ಅಲ್ಲಿ ಬಹಳ ಉಷ್ಣತೆಯುಂಟಾಗುವದೆಂಬುವದು ಕಾರಣವಲ್ಲ. ಆದರೆ ಪೃಥ್ವಿಯು ತನ್ನ ಸುತ್ತಲೂ ತಿರುಗುತ್ತಿರುವದು ಇದಕ್ಕೆ ಕಾರಣವು. ಧ್ರುವ-ವೃತ್ತದ ಹತ್ತಿರದ ಪ್ರದೇಶದಲ್ಲಿಯ ಹವೆಯು ಪೃಥ್ವಿಯ ಪರಿಭ್ರಮಣದಿಂದ ಪೃಥ್ವಿಯ ಪೃಷ್ಠ ಭಾಗದಿಂದ ದೂರ ಮತ್ತು ಹೊರಗೆ ಪಸರಿಸಿ ಹೋಗುವದರಿಂದ ಅಲ್ಲಿ ವಿರಲ ಅಥವಾ ಕಡಿಮೆ ಒತ್ತಡದ ಪ್ರದೇಶವು ಉಂಟಾಗುತ್ತದೆ. ೨೦° ದಿಂದ ೪೦° ಅಕ್ಷಾಂಶಗಳಲ್ಲಿಯ ಪ್ರದೇಶವು ಬಹಳ ಒತ್ತಡದ ಪ್ರದೇಶವೆಂದು ಈ ಕೆಳಗಿನ ಕಾರಣದಿಂದ ಹೇಳಬಹುದು. ಅದೆಂದರೆ ವಿಷುವ-ವೃತ್ತದ ಹವೆಯು ವಿರಲವಾಗಿ ಮೇಲೆ ಹೋಯಿತೆಂದರೆ ಆಕಾಶದಲ್ಲಿ ಉತ್ತರಕ್ಕೆ ಮತ್ತು ದಕ್ಷಿಣಕ್ಕೆ ಸರಿಯುತ್ತ ಹೋದಂತೆ ಶೀತವಾಗುತ್ತದೆ. ಹವೆಯು ಶೀತವಾದ ಹಾಗೆ ಜಡವಾಗುತ್ತ ಅದು ೨೦° ದಿಂದ ೪೦° ಅಕ್ಷಾಂಶಗಳ ಪ್ರದೇಶದಲ್ಲಿ ಇಳಿಯುತ್ತದೆ. ಅದೇ ಪರಿಸ್ಥಿತಿಯು ಧ್ರುವ-ವೃತ್ತದ ಹತ್ತಿರದ ಕಡಿಮೆ ಒತ್ತಡದ ಪ್ರದೇಶದಿಂದ ಪೃಥ್ವಿಯ ಪರಿಭ್ರಮಣದಿಂದ ಹೊರಗೆ ಹಾಕಲ್ಪಟ್ಟ ಹವೆಯಿಂದ ಉಂಟಾಗುತ್ತದೆ. ಈ ರೀತಿಯಿಂದ ಎರಡೂ ಕಡೆಯಿಂದ ಈ ಪ್ರದೇಶದಲ್ಲಿ ಹವೆಯು ಕೆಳಗೆ ಇಳಿಯುವದರಿಂದ ಇಲ್ಲಿ ಹೆಚ್ಚು ಒತ್ತಡದ ಪ್ರದೇಶವು .ನಿರ್ಮಾಣವಾಗಿರುವದು ಪ್ರತ್ಯಕ್ಷ ಉತ್ತರ ಮತ್ತು ದಕ್ಷಿಣ ಧ್ರುವದ ಪ್ರದೇಶದಲ್ಲಿ ಬಹಳ ಚಳಿ ಇರುವದರಿಂದ ಅಲ್ಲಿ ಹೆಚ್ಚು ಒತ್ತಡದ ಪ್ರದೇಶವು ನಿರ್ಮಾಣವಾಗುವದು.

**ಒತ್ತುವಿಕೆಯ ಪಟ್ಟಗಳ ದಕ್ಷಿಣೋತ್ತರದ ಸರಿಯುವಿಕೆಯು:—** ಮೇಲಿನ ಆಕೃತಿಯೊಳಗೆ ತೋರಿಸಿದ ಒತ್ತುವಿಕೆಯ ಪಟ್ಟಿಗಳು ಯಾವಾಗಲೂ ಅದೇ ಸ್ಥಳದಲ್ಲಿರುವದಿಲ್ಲ. ಸೂರ್ಯನು ಹನ್ನೆರಡೂ ತಿಂಗಳು ವಿಷುವ-ವೃತ್ತದ ಮೇಲೆ ಲಂಬರೂಪವಾಗಿ ಪ್ರಕಾಶಿಸುತ್ತಿದ್ದರೆ, ಈ ಪಟ್ಟಿಗಳಾದರೂ

ಯಾವಾಗಲೂ ಆಕೃತಿಯಲ್ಲಿ ತೋರಿಸಿದ ಸ್ಥಳಗಳಲ್ಲಿಯೇ ಇರುತ್ತಿದ್ದವು. ಆದರೆ ಹಾಗಾಗುವುದಿಲ್ಲ ಸೂರ್ಯನು ದಕ್ಷಿಣೋತ್ತರಕ್ಕೆ ಸರಿಯುತ್ತಿರುವನು. ಆದ್ದರಿಂದ ಸೂರ್ಯನು ಉತ್ತರದ ಕಡೆಗಾಗಲಿ ದಕ್ಷಿಣದ ಕಡೆಗಾಗಲಿ ಒಲಿವ ಹಾಗೆ ಈ ಪಟ್ಟಿಗಳಾದರೂ ಆಯಾ ದಿಕ್ಕುಗಳ ಕಡೆಗೆ ಸರಿದದ್ದು ಕಂಡು ಬರುತ್ತದೆ. ಆದರೆ ಅವು ಸೂರ್ಯನ ಹಾಗೆ ೨೩½°ಗಳ ವರೆಗೆ ಸರಿಯದೆ, ಸುಮಾರು ೫°ಗಳವರೆಗೆ ಮಾತ್ರ ಸರಿಯುತ್ತವೆ. ಈ ಪಟ್ಟಿಗಳು ದಕ್ಷಿಣೋತ್ತರಕ್ಕೆ ಹೇಗೆ ಸರಿಯುತ್ತವೆಂಬದನ್ನು ಮೇಲಿನ ಆಕೃತಿಯಲ್ಲಿ ತೋರಿಸಿರುತ್ತದೆ. ಒಟ್ಟಿನ ಮೇಲೆ ಕಂಡು ಬರುವದೇನಂದರೆ, ಸೂರ್ಯನ ಉಷ್ಣತೆ




ಮತ್ತು ಪೃಥ್ವಿಯ ತನ್ನ ಅಚ್ಚಿನ ಸುತ್ತಲಿನ ಪ್ರದಕ್ಷಿಣೆ, ಇವೆರಡು ಕಾರಣಗಳಿಂದ ಪೃಥ್ವಿಯ ಪೃಷ್ಠಭಾಗದ ಮೇಲೆ ಬೇರೆ ಬೇರೆ ಸ್ಥಳಗಳಲ್ಲಿ ಹೆಚ್ಚು ಅಥವಾ ಕಡಿಮೆ ಒತ್ತುವಿಕೆಯ ಪಟ್ಟಿಗಳು ನಿರ್ಮಾಣವಾಗಿರುತ್ತವೆ; ಮತ್ತು ಪೃಥ್ವಿಯು ಸೂರ್ಯನ ಸುತ್ತಲು ತಿರುಗುವದರಿಂದ ಅವು ದಕ್ಷಿಣೋತ್ತರಕ್ಕೆ ಸರಿಯುತ್ತಿರುತ್ತವೆ.

**ಗಾಳಿಯು :**—ಚಲಿಸುವ ಹವೆಗೆ ಗಾಳಿ ಎಂದೆನ್ನುತಾರೆ. ಅದು ಹವೆಯ ಒತ್ತುವಿಕೆಯೊಳಗಿನ ಹೆಚ್ಚು ಕಡಿಮೆಗಳಿಂದ ಉಂಟಾಗುತ್ತದೆ.

ಗಾಳಿಯು ಯಾವಾಗಲೂ ಹೆಚ್ಚು ಒತ್ತುವಿಕೆಯ ಸ್ಥಳದಿಂದ ಕಡಿಮೆ ಒತ್ತು
ವಿಕೆಯ ಸ್ಥಳದ ಕಡೆಗೆ ಬೀಸುತ್ತಿರುತ್ತದೆ. ಹಿಂದೆ ಕೊಟ್ಟ ಆಕೃತಿಯೊಳಗೆ
ತೋರಿಸಿದ ಗಾಳಿಗಳ ದಿಕ್ಕುಗಳ ಮೇಲಿಂದ ಇದು ಸ್ಪಷ್ಟವಾಗುತ್ತದೆ. ಗಾಳಿ
ಗಳ ದಿಕ್ಕುಗಳು ಒತ್ತುವಿಕೆಯ ಪ್ರದೇಶಗಳ ದಿಕ್ಕುಗಳ ಮೇಲೆ ಅವಲಂಬಿಸಿರು
ವದು ನಿಜ, ಆದರೂ ಉತ್ತರಗೋಲಾರ್ಧದೊಳಗೆ ಬೀಸುವ ಎಲ್ಲ ಗಾಳಿಗಳು
ನೆಟ್ಟಗೆ ಉತ್ತರಕ್ಕಾಗಲಿ ದಕ್ಷಿಣಕ್ಕಾಗಲಿ ಹೋಗದೆ, ಅವು ತಮ್ಮ ಬಲಗಡೆಗೆ
ಒಲಿದದ್ದು ಕಂಡು ಬರುತ್ತದೆ. ಮತ್ತು ದಕ್ಷಿಣ ಗೋಲಾರ್ಧದೊಳಗಿನ ಗಾಳಿ
ಗಳು ತಮ್ಮ ಎಡಗಡೆಗೆ ಒಲಿದದ್ದು ಕಂಡುಬರುತ್ತದೆ. ಪೃಥ್ವಿಯು ತನ್ನ
ಅಚ್ಚಿನ ಸುತ್ತಲು ಪಶ್ಚಿಮದಿಂದ ಪೂರ್ವಕ್ಕೆ ತಿರುಗುವದೇ ಇದರ ಮುಖ್ಯ
ವಾದ ಕಾರಣವಾಗಿರುತ್ತದೆ.

**ನಿರಂತರವಾಗಿ ಬೀಸುವ ಗಾಳಿಗಳು :—**ಮೇಲಿನ ಆಕೃತಿಯೊಳಗೆ
ಗಾಳಿಗಳ ಒತ್ತುವಿಕೆಯ ಪಟ್ಟಿಗಳನ್ನು ಕೊಟ್ಟಿರುತ್ತದೆ. ಕರ್ಕ-ವೃತ್ತ
ಮತ್ತು ಮಕರ-ವೃತ್ತಗಳ ಕಡೆಯಿಂದ ವಿಷುವ-ವೃತ್ತಗಳ ಕಡೆಗೆ ಬೀಸುವ
ಗಾಳಿಗಳಿಗೆ ‘ವ್ಯಾಪಾರದ ಗಾಳಿ’ ಗಳೆಂಬ ಹೆಸರು. ಪೂರ್ವಕಾಲದಲ್ಲಿ
ಹಡಗುಗಳು ಗಾಳಿಗಳ ಮೇಲೆ ಅವಲಂಬಿಸಿರುತ್ತಿದ್ದವು. ಆಗ ಈ ಗಾಳಿಗಳು
ಹನ್ನೆರಡೂ ತಿಂಗಳು ನಾವಿಕರಿಗೆ ಉಪಯೋಗವಾಗುತ್ತಿದ್ದವು; ಆದ್ದರಿಂದ
ಅವುಗಳಿಗೆ ವ್ಯಾಪಾರದ ಗಾಳಿಗಳೆಂಬ ಹೆಸರು ಪ್ರಾಪ್ತವಾಯಿತು. ಕರ್ಕ-
ಮತ್ತು ಮಕರ-ವೃತ್ತಗಳಿಂದ ೪೦° ದಿಂದ ೬೦° ಗಳ ವರೆಗೆ ಧ್ರುವ–ವೃತ್ತ
ಗಳ ಕಡೆಗೆ ಬೀಸುವ ಗಾಳಿಗಳಿಗೆ ‘ಪ್ರತಿವ್ಯಾಪಾರದ’ ಗಾಳಿಗಳು ಅಥವಾ
ಪಶ್ಚಿಮದ ಗಾಳಿಗಳೆಂದೆನ್ನುತ್ತಾರೆ. ಉತ್ತರ ಗೋಲಾರ್ಧದೊಳಗೆ ಈ
ಗಾಳಿಗಳು ಒಮ್ಮೊಮ್ಮೆ ಸರಿಯಾಗಿ ಪಶ್ಚಿಮದ ಕಡೆಯಿಂದಲೂ ಒಮ್ಮೊಮ್ಮೆ
ನೈಋತ್ಯದ ಕಡೆಯಿಂದಲೂ ಬೀಸುತ್ತಿರುತ್ತವೆ. ದಕ್ಷಿಣ ಗೋಲಾರ್ಧದೊಳಗೆ
ಮಾತ್ರ ಅವು ಯಾವಾಗಲೂ ಪಶ್ಚಿಮದ ಕಡೆಯಿಂದಲೇ ಬೀಸುತ್ತವೆ.
ಇಡೀ ವರುಷದಲ್ಲೆಲ್ಲ ಒಂದೇ ಸವನೆ ಕಸುವಿನಿಂದ ಬೀಸುತ್ತಿರುವದ
ರಿಂದ ದಕ್ಷಿಣ ಗೋಲಾರ್ಧದೊಳಗೆ ಈ ಗಾಳಿಗಳಿಗೆ ೪೦° ಆಚೆಯ ಕಡೆಯ
‘ಅಬ್ಬರದ’ ಗಾಳಿಗಳೆಂದು ಸಹ ಅನ್ನುತ್ತಾರೆ. ಇವಲ್ಲದೆ ದಕ್ಷಿಣ ಧ್ರುವ
ಮತ್ತು ಉತ್ತರ ಧ್ರುವಗಳ ಕಡೆಯಿಂದ ಧ್ರುವ–ವೃತ್ತಗಳ ಕಡೆಗೆ ಶೀತವಾದ
ಗಾಳಿಗಳು ಯಾವಾಗಲೂ ಬೀಸುತ್ತಿರುತ್ತವೆ.

**ಆವರ್ತ ಮತ್ತು ಪ್ರತ್ಯಾವರ್ತ ಗಾಳಿಗಳು.**—ನಿಯಮಿತವಾಗಿ ಬೀಸುವ ಗಾಳಿಗಳ ಪ್ರದೇಶಗಳಲ್ಲಿ ಮೇಲೆ ಹೇಳಿದ ಗಾಳಿಗಳಲ್ಲದೆ 'ಆವರ್ತ' ಮತ್ತು 'ಪ್ರತ್ಯಾವರ್ತ' ಎಂಬ ಹೆಸರಿನ ಅನಿಯಮಿತ ಗಾಳಿಗಳು ನಡುನಡುವೆ ಬೀಸುತ್ತಿರುತ್ತವೆ. ಯಾವದೊಂದು ಕಾರಣದಿಂದ ಒಂದು ಸ್ಥಳದೊಳಗಿನ ಹವೆಯ ಒತ್ತುವಿಕೆಯು ಒಮ್ಮಿಂದೊಮ್ಮೆ ಕಡಿಮೆಯಾಗಿ, ಸುತ್ತಮುತ್ತಲಿನ ಸ್ಥಳಗಳಲ್ಲಿಯ ಒತ್ತುವಿಕೆಯು ಹೆಚ್ಚಾಗಲು, ಕಡಿಮೆ ಒತ್ತುವಿಕೆಯ ಸ್ಥಳದ ಕಡೆಗೆ ನಾಲ್ಕೂ ನಿಟ್ಟಿನಿಂದ ಗಾಳಿಗಳು ಕಸುವಿನಿಂದ ಬೀಸತೊಡಗುವವು. ಆಗ ಆ ಸ್ಥಳದಲ್ಲಿ ಗಾಳಿಯ ತಿರಗಣಿಯು ಉಂಟಾಗುವದು. ಅದಕ್ಕೆ 'ಆವರ್ತ' ವೆಂದೆನ್ನುತ್ತಾರೆ. ಇದಕ್ಕೆ ವಿಪರೀತವಾಗಿ ಕಡಿಮೆ ಒತ್ತುವಿಕೆಯ ಪ್ರದೇಶದ ನಡುವೆ ಹೆಚ್ಚು ಒತ್ತುವಿಕೆಯ ಸ್ಥಳವು ಒಮ್ಮೆಲೆ ನಿರ್ಮಾಣವಾದರೆ, ಹೆಚ್ಚು ಒತ್ತುವಿಕೆಯ ಸ್ಥಳದಿಂದ ಗಾಳಿಗಳು ಹೊರಗೆ ಬೀಸಹತ್ತುವವು. ಇವುಗಳಿಗೆ 'ಪ್ರತ್ಯಾವರ್ತ'ಗಳೆಂಬ ಹೆಸರು.

**'ನಿಯತಕಾಲಿಕ' ಅಥವಾ ನಿಯಮಿತ ವೇಳೆಯಲ್ಲಿ ಬೀಸುವ ಗಾಳಿಗಳು:**—ಮೇಲೆ ವರ್ಣಿಸಿದ ಗಾಳಿಗಳಲ್ಲದೆ ನಿಯಮಿತವಾದ ವೇಳೆಯಲ್ಲಿ ಮಾತ್ರ ಬೀಸುವಂಥ ಎರಡು ಪ್ರಕಾರದ ಗಾಳಿಗಳಿರುತ್ತವೆ.

(೧) ಭೂ-ಗಾಳಿಗಳು ಮತ್ತು ಸಮುದ್ರ-ಗಾಳಿಗಳು (೨) ಮಾನ್ಸೂನ ಅಥವಾ ಋತುಮಾನದ ಗಾಳಿಗಳು.

**ಭೂ-ಗಾಳಿಗಳೂ ಸಮುದ್ರ-ಗಾಳಿಗಳೂ:**—ಸೂರ್ಯನ ಉಷ್ಣತೆಯಿಂದ ನೆಲವು ನೀರಿಗಿಂತ ಹೆಚ್ಚು ಬೇಗನೆ ಕಾಯುತ್ತದೆ. ಪೃಥ್ವಿಯ ಪೃಷ್ಠ ಭಾಗದ ಕೆಳಗೆ ಸೂರ್ಯನ ಉಷ್ಣತೆಯು ಹೆಚ್ಚು ಆಳವಾಗಿ ಹೋಗುವದಿಲ್ಲ. ಆದ್ದರಿಂದ ಮೇಲಿನ ನೆಲವು ಬಹು ತೀವ್ರವಾಗಿ ಕಾಯುತ್ತದೆ. ನೀರಿನ ಮೇಲೆ ಬಿದ್ದ ಉಷ್ಣತೆಯು ಬಹಳ ಆಳದ ವರೆಗೆ ಹೋಗುತ್ತದೆ. ಆದ್ದರಿಂದ ಪೃಷ್ಠ ಭಾಗದ ಮೇಲಿನ ನೀರು ಅಷ್ಟು ತೀವ್ರವಾಗಿ ಕಾಯುವದಿಲ್ಲ. ಹೊರ್ತಾಗಿ ನೀರಿನ ಉಗಿಯಾಗುವದರಲ್ಲಿ ಕೆಲವು ಉಷ್ಣತೆಯು ಕಳೆದು ಹೋಗುವದು. ಹೀಗೆ ನೆಲದ ಮೇಲೆ ಆಗುವದಿಲ್ಲ. ಇದಲ್ಲದೆ ನೀರಿನ ಮೇಲಿಂದ ಉಷ್ಣತೆಯು ಪರಾವರ್ತನ ಹೊಂದುವಂತೆ ನೆಲದ ಮೇಲಿಂದ ಅದು ಪರಾವರ್ತನ ಹೊಂದುವದಿಲ್ಲ. ನೆಲವು ತೀವ್ರವಾಗಿ ಕಾಯುವಂತೆ ಅದು ತೀವ್ರವಾಗಿ

ಆರುತ್ತದೆ. ನೀರು ಮಾತ್ರ ಸಾವಕಾಶವಾಗಿ ಕಾಯ್ದು ಸಾವಕಾಶವಾಗಿ ಆರುತ್ತದೆ. ನೆಲವೂ ನೀರೂ ಹೊಂದಿಕೊಂಡಿದ್ದರೆ ಅವುಗಳ ಹಗಲಿನ ಉಷ್ಣತಾಮಾನವು ಅಷ್ಟಷ್ಟೇ ಇರುವದಿಲ್ಲ. ನೆಲವು ನೀರಿಗಿಂತ ಹೆಚ್ಚಿಗೆ ಉಷ್ಣವಾದದ್ದು ಕಂಡುಬರುತ್ತದೆ. ರಾತ್ರಿಯಲ್ಲಿ ಮಾತ್ರ ನೀರು ನೆಲಕ್ಕಿಂತ ಹೆಚ್ಚು ಉಷ್ಣವಾಗಿದ್ದು ಕಂಡು ಬರುತ್ತದೆ. ಹಗಲು ನೆಲವು ಹೆಚ್ಚಾಗಿ ಕಾಯಿತೆಂದರೆ ಅದರ ಪೃಷ್ಠ ಭಾಗದ ಮೇಲಿರುವ ಹವೆಯಾದರೂ ಕಾಯು ವದು. ಆ ಕಾಲಕ್ಕೆ ನೀರಿನ ಮೇಲಿನ ಹವೆಯು ನೆಲದ ಮೇಲಿನ ಹವೆ ಯಷ್ಟು ಕಾಯ್ದಿರುವದಿಲ್ಲ. ನೆಲದ ಮೇಲಿನ ಕಾಯ್ದ ಹವೆಯು ಉಷ್ಣತೆ ಯಿಂದ ಹೆಚ್ಚು ವಿರಲವಾಗುತ್ತದೆ. ಮತ್ತು ಅದು ಮೇಲಕ್ಕೇರುತ್ತದೆ.



ಸಮುದ್ರ-ಗಾಳಿಗಳು.

ಆದ್ದರಿಂದ ಭೂಮಿಯ ಪೃಷ್ಠಭಾಗದ ಮೇಲೆ ನೀರಿನ ಪೃಷ್ಠಭಾಗಕ್ಕಿಂತ ಹವೆಯ ಒತ್ತುವಿಕೆಯು ಕಡಿಮೆಯಾಗುತ್ತದೆ. ಮತ್ತು ನೀರಿನ ಮೇಲಿನ ಕಡಿಮೆ ಉಷ್ಣತೆಯ ಹವೆಯು ನೆಲದ ಕಡೆಗೆ ಎಳೆಯಲ್ಪಡುತ್ತದೆ. ಈ ರೀತಿ ಯಿಂದ ಸಮುದ್ರದ ಕಡೆಯಿಂದ ನೆಲದ ಕಡೆಗೆ ಗಾಳಿಗಳು ಬೀಸತೊಡಗು ತ್ತವೆ. ಈ ಗಾಳಿಗಳಿಗೆ 'ಸಮುದ್ರಗಾಳಿ' ಗಳೆಂದೆನ್ನುತ್ತಾರೆ. ಈ ಗಾಳಿಗಳು ಸೂರ್ಯನು ಚೆನ್ನಾಗಿ ಮೇಲೆ ಬಂದ ಮೇಲೆ ಆರಂಭವಾಗುತ್ತವೆ. ಮತ್ತು ಭೂಮಿಯ ಮೇಲೆ ತಂಪನ್ನು ತರುತ್ತವೆ. ಸೂರ್ಯನು ಮುಳುಗಿದ ಮೇಲೆ, ನೆಲವೂ ನೀರೂ ತಣ್ಣಗಾಗಹತ್ತುತ್ತವೆ. ಆದರೆ ನೆಲದ ಮೇಲಿನ ಉಷ್ಣ ತೆಯು ನೀರಿಗಿಂತ ಹೆಚ್ಚು ತೀವ್ರವಾಗಿ ಹೊರಟು ಹೋಗುತ್ತದೆ. ಇದರಿಂದ

ನೆಲದ ಮೇಲಿನ ಹವೆಯು ಕೂಡಲೇ ತಂಪಾಗುತ್ತದೆ. ಆದರೆ ನೀರಿನ ಮೇಲಿನ ಹವೆಯು ಮಾತ್ರ ಹೆಚ್ಚು ವೇಳೆಯ ವರೆಗೆ ಬೆಚ್ಚಗೆ ಉಳಿಯುತ್ತದೆ. ಬೆಚ್ಚಗಿನ ಹವೆಯು ತಂಪು ಹವೆಗಿಂತ ಹಗುರಾಗಿರುವದರಿಂದ, ನೀರಿನ ಮೇಲೆ ನೆಲಕ್ಕಿಂತ ಕಡಿಮೆ ಒತ್ತುವಿಕೆಯ ಸ್ಥಳವು ನಿರ್ಮಾಣವಾಗುತ್ತದೆ. ಮತ್ತು ನೆಲದ ಮೇಲಿನ ತಂಪು ಹವೆಯು ನೀರಿನಕಡೆಗೆ ಎಳೆಯಲ್ಪಡುತ್ತದೆ. ಈ ರೀತಿಯಿಂದ ನೆಲದ ಕಡೆಯಿಂದ ಸಮುದ್ರದ ಕಡೆಗೆ ಬೀಸುತ್ತ ಹೋಗುವ ಗಾಳಿಗಳಿಗೆ ಭೂ-ಗಾಳಿಗಳೆಂದೆನ್ನುತ್ತಾರೆ. ಈ ಗಾಳಿಗಳು ಮಧ್ಯರಾತ್ರಿಯ ನಂತರ ಬೀಸತೊಡಗುತ್ತವೆ. ಮತ್ತು ಸೂರ್ಯನು ಸಾಕಷ್ಟು ಮೇಲೆ ಬರುವ ವರೆಗೆ ಬೀಸುತ್ತಿರುತ್ತವೆ. ಬಂದರದೊಳಗಿಂದ ಹೊರ ಹೊರಡುವ ಹಡಗುಗಳು ಮುಂಜಾವಿನ ಭೂ-ಗಾಳಿಗಳ ಉಪಯೋಗವನ್ನು ಮಾಡಿಕೊಳ್ಳು




ಭೂ-ಗಾಳಿಗಳು.

ತ್ತವೆ; ಮತ್ತು ಸಂಜೆಯ ಮುಂದೆ ಬೀಸುವ ಸಮುದ್ರ-ಗಾಳಿಗಳು ಅವು ಗಳಿಗೆ ಬಂದರದೊಳಗೆ ಬರುವ ಮುಂದೆ ಉಪಯೋಗವಾಗುತ್ತದೆ.

**ಮಾನ್ಸೂನ ಅಥವಾ ಋತುಮಾನದ ಗಾಳಿಗಳು:**—ತಾತ್ವಿಕ ದೃಷ್ಟಿಯಿಂದ ನೋಡಿದರೆ ಮಾನ್ಸೂನಗಳಿಗೂ ಸಮುದ್ರ-ಭೂ-ಗಾಳಿಗಳಿಗೂ ಏನೂ ಅಂತರವಿರುವದಿಲ್ಲ. ಎರಡೂ ಪ್ರಕಾರದ ಗಾಳಿಗಳು ನೀರು ನೆಲಗಳು ಬೇರೆ ಬೇರೆ ರೀತಿಯಿಂದ ಕಾಯುವದರಿಂದಲೇ ಹುಟ್ಟುತ್ತವೆ. ಮೊದಲನೆ ಪ್ರಕಾರದ ಗಾಳಿಗಳು ಹಗಲು ಮತ್ತು ರಾತ್ರಿಗಳಲ್ಲಿ ಬೀಸುತ್ತವೆ. ಆದರೆ ಎರಡನೇ ಪ್ರಕಾರದ ಗಾಳಿಗಳು (ಮಾನ್ಸೂನ) ಬೇಸಿಗೆ ಮತ್ತು ಚಳಿ ಗಾಲಗಳಲ್ಲಿ ಬೀಸುತ್ತವೆ. ಸಮುದ್ರ ಮತ್ತು ಭೂ-ಗಾಳಿಗಳು ಸೌಮ್ಯವಾಗಿದ್ದು,

ಅವು ಸಮುದ್ರ ದಂಡೆಯಿಂದ ದೂರದ ವರೆಗೆ ಬೀಸುವದಿಲ್ಲ. ಮಾನ್ಸೂನ ಗಾಳಿಗಳು ಕಸುವಿನಿಂದ ಬೀಸುತ್ತವೆ. ಮತ್ತು ಸಮುದ್ರದ ಮೇಲಿಂದ ನೆಲದ ಮೇಲಾಗಲಿ ಅಥವಾ ನೆಲದ ಮೇಲಿಂದ ಸಮುದ್ರದ ಮೇಲಾಗಲಿ ಸಾವಿರಾರು ಮೈಲುಗಳ ವರೆಗೆ ಅವು ಬೀಸುತ್ತ ಹೋಗುತ್ತವೆ. ಬೇಸಿಗೆಯಲ್ಲಿ ಸೂರ್ಯ ನು ವಿಷುವ-ವೃತ್ತದ ಉತ್ತರಕ್ಕೆ ಲಂಬರೂಪ ಕಿರಣಗಳಿಂದ ಪ್ರಕಾಶಿಸುತ್ತಿರು ವಾಗ, ದಕ್ಷಿಣ ಮತ್ತು ಮಧ್ಯ ಏಶಿಯಾದೊಳಗಿನ ಭೂಪ್ರದೇಶವು ಬಹಳ ಕಾಯುತ್ತದೆ. ಮತ್ತು ಅಲ್ಲಿ ಕಡಿಮೆ ಒತ್ತುವಿಕೆಯ ಸ್ಥಳವು ನಿರ್ಮಾಣವಾ ಗುತ್ತದೆ. ಅದೇ ಕಾಲಕ್ಕೆ ವಿಷುವ-ವೃತ್ತದ ದಕ್ಷಿಣಕ್ಕೆ ಹಿಂದೀ ಮಹಾ ಸಾಗರದೊಳಗೆ ಹೆಚ್ಚು ಒತ್ತುವಿಕೆಯ ಪ್ರದೇಶವು ನಿರ್ಮಾಣವಾಗಿರುತ್ತದೆ. ಆದ್ದರಿಂದ ವಿಷುವ-ವೃತ್ತದ ಕಡೆಗೆ ಬೀಸುವ ಆಗ್ನೇಯದ ವ್ಯಾಪಾರದ ಗಾಳಿಗಳು ವಿಷುವ-ವೃತ್ತದ ಹತ್ತರ ನಿಲ್ಲದೆ, ವಿಷುವ-ವೃತ್ತವನ್ನು ದಾಟಿ ಅವು ಉತ್ತರ ಗೋಲಾರ್ಧದೊಳಗೆ ಬರುವವು. ಮತ್ತು ಏಶಿಯಾದೊ ಳಗಿನ ಕಡಿಮೆ ಒತ್ತುವಿಕೆಯ ಭೂಪ್ರದೇಶದ ಕಡೆಗೆ ಎಳೆಯಲ್ಪಡುವವು. ಈ ಗಾಳಿಗಳು ಉತ್ತರ ಗೋಲಾರ್ಧದೊಳಗೆ ಬಂದ ಕೂಡಲೆ ಅವುಗಳ ದಿಕ್ಕು, ಪೃಥ್ವಿಯ ಪರಿಭ್ರಮಣದಿಂದ ಬದಲಾಗುತ್ತದೆ. ಮತ್ತು ಹಿಂದು ಸ್ತಾನದ ಕರಾವಳಿಯ ಕಡೆಗೆ ನೈಋತ್ಯದಿಂದ ಬೀಸುತ್ತ ಬರುತ್ತವೆ. ಚೀನ ಮತ್ತು ಜಪಾನ ದೇಶಗಳಲ್ಲಿ ಅವು ಆಗ್ನೇಯ ದಿಕ್ಕಿನಿಂದ ಬರುತ್ತವೆ. ಚಳಿ ಗಾಲದೊಳಗೆ ಸೂರ್ಯನು ವಿಷುವ-ವೃತ್ತದ ದಕ್ಷಿಣಕ್ಕೆ ಪ್ರಕಾಶಿಸುತ್ತಿರು ವಾಗ, ಹಿಂದೀ ಮಹಾ ಸಾಗರದ ದಕ್ಷಿಣ ಗೋಲಾರ್ಧದೊಳಗಿನ ಭಾಗವು ಬಹಳ ಕಾಯುತ್ತದೆ. ಮತ್ತು ಅಲ್ಲಿ ಕಡಿಮೆ ಒತ್ತುವಿಕೆಯ ಸ್ಥಳವು ನಿರ್ಮಾಣವಾಗುತ್ತದೆ. ಅದೇ ಕಾಲಕ್ಕೆ ಉತ್ತರ ಗೋಲಾರ್ಧದೊಳಗಿನ ಮಧ್ಯ ಮತ್ತು ದಕ್ಷಿಣ ಏಶಿಯಾದೊಳಗೆ ಚಳಿಗಾಲದ ಮೂಲಕ ಹೆಚ್ಚು ಒತ್ತುವಿಕೆಯ ಸ್ಥಳವು ನಿರ್ಮಾಣವಾಗುತ್ತದೆ. ಆದ್ದರಿಂದ ಈ ಪ್ರದೇಶದ ಕಡೆಯಿಂದ ದಕ್ಷಿಣ ಗೋಲಾರ್ಧದೊಳಗಿನ ಕಡಿಮೆ ಒತ್ತುವಿಕೆಯ ಸ್ಥಳದ ಕಡೆಗೆ ಗಾಳಿಗಳು ಬೀಸತೊಡಗುವವು. ಈ ಗಾಳಿಗಳು ಆರಂಭವಾದಾಗ, ಅವು ಈಶಾನ್ಯದ ವ್ಯಾಪಾರದ ಗಾಳಿಗಳಾಗಿರುತ್ತವೆ. ಆದರೆ ವಿಷುವ- ವೃತ್ತವನ್ನು ದಾಟಿದ ಕೂಡಲೆ, ಅವುಗಳ ದಿಕ್ಕು ಬದಲಾಗುತ್ತದೆ. ಮತ್ತು ಅವು ವಾಯುವ್ಯದ ಕಡೆಯಿಂದ ಬೀಸ ಹತ್ತುತ್ತವೆ. ಪೃಥ್ವಿಯು ತನ್ನ ಸುತ್ತಲು ತಿರುಗುವದರಿಂದ ಗಾಳಿಗಳ ದಿಕ್ಕುಗಳು ಬದಲಾಗುತ್ತವೆಂದು

ಮೇಲೆ ಹೇಳಿರುತ್ತದೆ. ಈ ಎರಡೂ ತರದ ಮಾನ್ಸೂನ ಗಾಳಿಗಳು ನಿಯಮಿತವಾದ ವೇಳೆಯಲ್ಲಿ ಆರಂಭವಾಗುವದರಿಂದ ಅವುಗಳಿಗೆ ಋತು ಮಾನದ ಗಾಳಿಗಳೆಂಬ ಹೆಸರು ಕೊಡಲಾಗಿದೆ. ಮಾನ್ಸೂನ ಅಂದರೆ ಋತುಮಾನವೆಂಬ ಅರ್ಥವಾಗುತ್ತದೆ. ಏಶಿಯಾ ಖಂಡದ ಆಗ್ನೇಯ ಭಾಗ ದೊಳಗೆ ಮಾನ್ಸೂನ ಗಾಳಿಗಳು ಕಸುವಿನಿಂದ ಬೀಸುತ್ತವೆ. ಇದಲ್ಲದೆ ಮಧ್ಯ ಅಮೇರಿಕಾ, ಬ್ರಾಝಿಲ್ ಮತ್ತು ಆಫ್ರಿಕೆಯ ನೈಋತ್ಯದ ದಂಡೆ, ಆಸ್ಟ್ರೇಲಿಯಾದ ಉತ್ತರ ದಂಡೆಗಳಲ್ಲಿ ಈ ಗಾಳಿಗಳು ಬೀಸುತ್ತವೆ. ಆದರೆ ಅವು ಏಶಿಯಾ ಖಂಡದೊಳಗಿನ ಮಾನ್ಸೂನ ಗಾಳಿಗಳಷ್ಟು ಕಸುವಿನವೂ ಮಹತ್ವವಾದವುಗಳೂ ಆಗಿರುವದಿಲ್ಲ.

**ಸಮುದ್ರದ ಸಮೀಪದಲ್ಲಿರುವ ಸ್ಥಳಗಳ ಹವೆಯು :—** ಸಮುದ್ರ ಮತ್ತು ಭೂ-ಗಾಳಿಗಳ ಬಗ್ಗೆ ವಿಚಾರ ಮಾಡುವಾಗ ಸಮುದ್ರ-ಗಾಳಿಗಳು ಹಗಲು ಸಮುದ್ರದ ಕಡೆಯಿಂದ ನೆಲದ ಕಡೆಗೆ ತಂಪನ್ನು ತರುತ್ತವೆಂಬ ಸಂಗತಿಯನ್ನು ನಾವು ಕಂಡುಕೊಂಡಿದ್ದೇವೆ. ಸಮುದ್ರದಂಡೆಯ ಮೇಲಿರುವ ಸ್ಥಳಗಳ ಹವೆಯ ಮೇಲೆ ಇದರ ಪರಿಣಾಮವೇನಾಗುತ್ತಿರಬಹುದು? ಸಮುದ್ರ-ಗಾಳಿಗಳಿಂದ ವಿಶೇಷವಾಗಿ ಬೇಸಿಗೆಯಲ್ಲಿ ಈ ಸ್ಥಳಗಳ ಹವೆಯು ತಕ್ಕಷ್ಟು ಉಷ್ಣವಾಗಿ ಉಳಿಯುವದಿಲ್ಲ; ಅದು ತಂಪಾಗಿರುತ್ತದೆ. ಚಳಿಗಾಲದಲ್ಲಿ ನೆಲವೂ, ನೀರೂ ತಂಪಾಗುತ್ತಿದ್ದರೂ ಬೇಸಿಗೆಯಲ್ಲಿ ನೀರಿನಿಂದ ಹೀರಿಕೊಂಡ ಉಷ್ಣತೆಯು ಚಳಿಗಾಲದೊಳಗೆ ಕೂಡಲೆ ಹೊರಟು ಹೋಗುವದಿಲ್ಲ. ಮತ್ತು ಒಟ್ಟಿನ ಮೇಲೆ ನೀರು ನೆಲಕ್ಕಿಂತ ಹೆಚ್ಚು ಬೆಚ್ಚಗಾಗಿ ಉಳಿಯುತ್ತದೆ. ಇದರಿಂದ ಸಮುದ್ರದ ದಂಡೆಯ ಮೇಲಿರುವ ಸ್ಥಳಗಳ ಹವೆಯಾದರೂ ಚಳಿಗಾಲದಲ್ಲಿ ತೀರ ತಂಪಾಗದೆ, ಅದು ಬೆಚ್ಚಗಾಗಿ ಉಳಿಯುವದು. ಸಮುದ್ರದ ಸಾಮೀಪ್ಯದಿಂದ ಸ್ಥಳಗಳ ಉಷ್ಣತಾಮಾನವು ಬೇಸಿಗೆಯಲ್ಲಿ ತೀರ ಹೆಚ್ಚಾಗುವದಿಲ್ಲ; ಮತ್ತು ಚಳಿಗಾಲದೊಳಗೆ ಅದು ತೀರ ಕಡಿಮೆಯಾಗುವದಿಲ್ಲ. ಈ ಪ್ರಕಾರದ ಹವೆಗೆ 'ಸಮ' ಹವೆ ಅಥವಾ ಸಮಶೀತೋಷ್ಣ ಹವೆ ಎಂಬ ಹೆಸರು. ಅದಕ್ಕೆ 'ಸಮುದ್ರ ದಂಡೆಯ ಹವೆ' ಎಂದರೂ ಸಲ್ಲುವದು. ಮುಂಬಯಿ ಪಟ್ಟಣದ ಸರಾಸರೀ ಉಷ್ಣತಾಮಾನವು ಮೇ ತಿಂಗಳಲ್ಲಿ ೮೪·೬° ಇರುತ್ತದೆ. ಮತ್ತು ಜಾನೇವರೀ ತಿಂಗಳಲ್ಲಿ ಅದು ೭೪·೫° ಗಳ ವರೆಗೆ ಮಾತ್ರ ಇಳಿಯುತ್ತದೆ.

**ಭೂಖಂಡಗಳ ಮಧ್ಯದಲ್ಲಿರುವ ಸ್ಥಳಗಳ ಹವೆಯು :**— ಮುಂಬಯಿ ಪಟ್ಟಣದೊಳಗಿನ ಮೇ ಮತ್ತು ಜಾನೇವರೀ ತಿಂಗಳುಗಳ ಉಷ್ಣತಾಮಾನಗಳಲ್ಲಿಯ ಅಂತರವು ಮೇಲೆ ನೋಡಿದೆವು. ಅಲಹಾಬಾದ




ವಾಯುಭಾರಮಾಪಕ.

ದೊಳಗೆ ಮೇ ತಿಂಗಳಲ್ಲಿಯ ಸರಾಸರಿ ಉಷ್ಣತಾಮಾನವು ೯೨° ಮತ್ತು ಜಾನೇವರಿಯಲ್ಲಿ ೬೧° ಇರುತ್ತದೆ. ಹೀಗೇಕೆ ? ಅಲಹಾಬಾದವು ಸಮುದ್ರದಿಂದ ಬಹಳ ದೂರದಲ್ಲಿರುವದರಿಂದ ಅದಕ್ಕೆ ಸಮುದ್ರ ಸಾಮೀಪ್ಯದ ಲಾಭವಾಗುವದಿಲ್ಲ. ಅಂದರೆ ಸಮುದ್ರದ ಮೇಲಿಂದ ಬೀಸುವ ತಂಪು ಗಾಳಿಗಳು ಅಲ್ಲಿಯ ವರೆಗೆ ಹೋಗಿ ಮುಟ್ಟುವದಿಲ್ಲ. ಆದ್ದರಿಂದ ಈ ಗಾಳಿಗಳು ಹವೆಯೊಳಗಿನ ಉಷ್ಣತೆಯನ್ನು ಕಡಿಮೆ ಮಾಡುವದಿಲ್ಲ. ಚಳಿಗಾಲದಲ್ಲಿ ಅಲಹಾಬಾದಕ್ಕೆ ಸಮುದ್ರದ ಮೇಲಿರುವ ಬೆಚ್ಚಗಿನ ಹವೆಯು ಸಿಗುವದಿಲ್ಲ. ಆದ್ದರಿಂದ ಹವೆಯು ಬೆಚ್ಚಗಾಗುವದಿಲ್ಲ. ಇದರಿಂದ ಚಳಿಗಾಲದೊಳಗೆ ಅತಿ ಚಳಿಯು ಬೀಳುತ್ತದೆ. ಭೂಖಂಡದ ಮಧ್ಯದಲ್ಲಿರುವ ಅಲಹಾಬಾದದಂಥ ಸ್ಥಳಗಳಲ್ಲಿ ಬೇಸಿಗೆಯ ಮತ್ತು ಚಳಿಗಾಲದ ಸರಾಸರಿ ಉಷ್ಣತಾಮಾನಗಳಲ್ಲಿ ಬಹಳ ಅಂತರ ಬೀಳುತ್ತದೆ. ಇಂಥ ಹವೆಗೆ 'ವಿಷಮ' ಹವೆ ಎಂದೆನ್ನುತ್ತಾರೆ. ಈ ಹವೆಗೆ "ಖಂಡಾಂತರ್ಗತ ಪ್ರದೇಶದೊಳಗಿನ ಹವೆ" ಎಂತಲೂ ಅನ್ನಬಹುದು.

**ವಾತಾವರಣದ ಒತ್ತುವಿಕೆಯನ್ನು ಹೇಗೆ ಅಳಿಯುತ್ತಾರೆ :**—ವಾತಾವರಣಕ್ಕೆ ಭಾರವಿರುವದರಿಂದ ಅದು ಭೂಪೃಷ್ಠದ ಮೇಲೆ ಒತ್ತುತ್ತದೆಂಬದನ್ನು ನಾವು ಮೇಲೆ ನೋಡಿದ್ದೇವೆ. ಸಮುದ್ರ ಸಪಾಟಿಯ ಮೇಲೆ ಈ ಒತ್ತುವಿಕೆಯು ಒಂದು ಚೌರಸ ಇಂಚಿನ ಮೇಲೆ ೧೫ ಪೌಂಡು ಇರುತ್ತದೆ. ಸಮುದ್ರ ಸಪಾಟಿಯಿಂದ ಹೆಚ್ಚೆಚ್ಚು ಎತ್ತರ ಹೋದಂತೆ ಈ ಒತ್ತುವಿಕೆಯಾದರೂ ಕ್ರಮೇಣ ಕಡಿಮೆಯಾಗುತ್ತದೆ. ಈ ಒತ್ತುವಿಕೆಯನ್ನು 'ವಾಯು

ಭಾರಮಾಪಕ'ದಿಂದ ( ಈ ಯಂತ್ರವು ಆಕೃತಿಯಲ್ಲಿ ತೋರಿಸಲ್ಪಟ್ಟಿರುತ್ತದೆ) ತಿಳಿಯಲಿಕ್ಕೆ ಬರುತ್ತದೆ. ಹವೆಯ ಒತ್ತುವಿಕೆಯು ಹೆಚ್ಚಾಗುತ್ತ ಹೋದರೆ, ಈ ಯಂತ್ರದೊಳಗಿನ ಪಾರಜವು ಮೇಲಕ್ಕೇರಲಾರಂಭಿಸುವದು. ಮತ್ತು ಕಡಿಮೆಯಾದರೆ ಕೆಳಗಿಳಿಯುವದು. ಸಾಧಾರಣವಾಗಿ ಒಂದು ಸಾವಿರ ಫೂಟು ಎತ್ತರವಾದ ವಾತಾವರಣದ ಒತ್ತುವಿಕೆಯು ಈ ಯಂತ್ರದೊಳಗಿನ ಪಾರಜವನ್ನು ಒಂದು ಇಂಚು ಮೇಲಕ್ಕೇರಿಸುತ್ತದೆ. ಈ ಯಂತ್ರದ ಸಹಾಯದಿಂದ ನಾವು ಎಷ್ಟು ಎತ್ತರ ಹೋದೆವೆಂಬದನ್ನು ಹೇಳಬಲ್ಲೆವು. ಯಾವದೊಂದು ಗುಡ್ಡದ ಅಡಿಯಲ್ಲಿಯ ಒತ್ತುವಿಕೆ ಮತ್ತು ಅದರ ನೆತ್ತಿಯ ಮೇಲಿನ ಒತ್ತುವಿಕೆಗಳಲ್ಲಿ ಎರಡು ಇಂಚಿನ ಅಂತರವು ಇದ್ದರೆ, ಆ ಗುಡ್ಡವು ಎರಡು ಸಾವಿರ ಫೂಟು ಎತ್ತರವಾಗಿರಲಿಕ್ಕೆ ಬೇಕೆಂದು ಹೇಳಲು ಪ್ರತ್ಯವಾಯುವಿಲ್ಲ. ಆದರೆ ಈ ಪ್ರಮಾಣವು ಸ್ಥೂಲವಾನದಿಂದ ಸರಿಯಾಗಿರುತ್ತದೆ. ಸಮುದ್ರ ಸಪಾಟಿಯಿಂದ ಮೇಲಕ್ಕೆ ಹೋದಹಾಗೆ ಹವೆಯ ಒತ್ತುವಿಕೆಯು ಕಡಿಮೆಯಾಗುತ್ತ ಹೋಗುವದರಿಂದ, ಬಹಳ ಮೇಲಕ್ಕೆ ಹೋಗಲು ಪ್ರತಿ ಸಾವಿರ ಫೂಟಿಗೆ ಒಂದು ಇಂಚು ಪಾರಜವು ಇಳಿಯುವದಿಲ್ಲ. ಅದು ಒಂದು ಇಂಚಿಗಿಂತ ಕಡಿಮೆ ಇಳಿಯುವದು. ಸಮುದ್ರ ಸಪಾಟಿಯ ಮೇಲೆ ಪಾರಜವು ೨೬.೯ ಇಂಚಿನ ವರೆಗೆ ಏರಿರುತ್ತದೆ. ಅಲ್ಲಿಂದ ಮೂರು ಮೈಲು ಎತ್ತರ ಹೋದರೆ ಮೇಲಿರುವ ಸುಮಾರು ೨೦೦ ಮೈಲು ಎತ್ತರವಾದ ವಾತಾವರಣದ ಒತ್ತುವಿಕೆಯೂ ಮತ್ತು ಕೆಳಗಿನ ಮೂರು ಮೈಲು ಎತ್ತರವಾದ ವಾತಾವರಣದ ಒತ್ತುವಿಕೆಯೂ ಸರಿಯಾಗಿರುತ್ತದೆ. ಇದರ ಮೇಲಿಂದ ಸಮುದ್ರ ಸಪಾಟಿಯ ಹತ್ತರದ ವಾತಾವರಣವು ಎಷ್ಟು ದಟ್ಟಾಗಿ ಮತ್ತು ಜಡವಾಗಿ ಇರುತ್ತದೆಂಬದೂ, ಮೇಲಿನ ವಾತಾವರಣವು ವಿರಲವಾಗಿರುವದರಿಂದ ಎಷ್ಟು ಹಗುರಾಗಿರುವದೆಂಬದೂ ಕೂಡಲೆ ಲಕ್ಷದಲ್ಲಿ ಬರುವದು.

೨೭ನೇ ಪ್ರಕರಣ

# ಮಹಾ ಸಾಗರಗಳೊಳಗಿನ ಪ್ರವಾಹಗಳು

**ಮಹಾಸಾಗರಗಳೊಳಗಿನ ಚಲನವಲನಗಳು :**—ವಾತಾವರಣ ದೊಳಗೆ ಯಾವಾಗಲೂ ಚಲನವಲನಗಳಿದ್ದಂತೆಯೇ, ಸಮುದ್ರ, ಮಹಾ ಸಾಗರ, ಸರೋವರ ಮುಂತಾದ ಸಣ್ಣ-ದೊಡ್ಡ ಜಲಸಂಚಯಗಳೊಳಗೆ ಸಹ ಯಾವಾಗಲೂ ಚಲನವಲನಗಳು ಸಾಗಿರುತ್ತವೆ. ತೆರೆಗಳು, ಏರಿಳಿತ ಗಳು ಮತ್ತು ಪ್ರವಾಹಗಳು ಇವೇ ಈ ಚಲನವಲನಗಳಾಗಿರುತ್ತವೆ. ಇವುಗಳೊಳಗೆ ಪ್ರವಾಹಗಳ ಬಗ್ಗೆ ಮಾತ್ರ ಈಗ ನಮಗೆ ವಿಚಾರಮಾಡತಕ್ಕ ದ್ದಿರುತ್ತದೆ.

**ಸಮುದ್ರಗಳಲ್ಲಿ ಪ್ರವಾಹಗಳು ಏಕೆ ಹುಟ್ಟುತ್ತವೆ:**—(೧) **ಉಷ್ಣತೆಯು :**—ಸೂರ್ಯನ ಪ್ರಖರವಾದ ಉಷ್ಣತೆಯಿಂದ ವಿಷುವ-ವೃತ್ತದ ಮೇಲಿನ ಭಾಗದೊಳಗಿನ ನೀರು ಹೆಚ್ಚು ಕಾಯುತ್ತದೆ. ಮತ್ತು ಅದು ಹಗುರಾಗಿ ಉತ್ತರಕ್ಕೆ ಮತ್ತು ದಕ್ಷಿಣಕ್ಕೆ ಧ್ರುವ ಪ್ರದೇಶಗಳ ಕಡೆಗೆ ಹೋಗಲಾರಂಭಿಸುತ್ತದೆ. ಹೋಗುವ ಮುಂದೆ ಅದು ಸಾಗರದ ಪೃಷ್ಠ ಭಾಗದ ಮೇಲಿಂದ ಹರಿಯುತ್ತದೆ. ಅದೇ ಕಾಲಕ್ಕೆ ಧ್ರುವ ಪ್ರದೇಶಗಳ ಕಡೆಗಿರುವ ತಂಪಾದ ಮತ್ತು ಭಾರವಾದ ನೀರು, ವಿಷುವ-ವೃತ್ತದಿಂದ ಹರಿದುಹೋದ ನೀರಿನ ಸ್ಥಳವನ್ನು ವ್ಯಾಪಿಸುವದಕ್ಕಾಗಿ, ಕೆಳಗಿನಿಂದ ಅಂದರೆ ಸಮುದ್ರದ ತಳದಗುಂಟ ಹರಿಯುತ್ತ ವಿಷುವ-ವೃತ್ತದ ಕಡೆಗೆ ಬರುತ್ತದೆ. ಆ ನೀರು ವಿಷುವ-ವೃತ್ತದ ಮೇಲೆ ಪುನಃ ಕಾಯುತ್ತದೆ; ಮೇಲಕ್ಕೆ ಬರುತ್ತದೆ; ಮತ್ತು ಧ್ರುವ-ವೃತ್ತಗಳ ಕಡೆಗೆ ಹೋಗಲಾರಂಭಿ ಸುತ್ತದೆ. ಈ ರೀತಿಯಿಂದ ಈ ಕ್ರಮವು ಹನ್ನೆರಡೂ ತಿಂಗಳು ನಡೆದಿರು

ತ್ತದೆ. ವಿಷುವ-ವೃತ್ತದ ಕಡೆಯಿಂದ ಧ್ರುವ-ಪ್ರದೇಶಗಳ ಕಡೆಗೆ ಹರಿಯುವ ನೀರಿನ ಪ್ರವಾಹಗಳು ಬೆಚ್ಚಗಾಗಿರುತ್ತವೆ. ಧ್ರುವ-ಪ್ರದೇಶಗಳ ಕಡೆಯಿಂದ ವಿಷುವ-ವೃತ್ತದ ಕಡೆಗೆ ಬರುವ ಪ್ರವಾಹಗಳು ಶೀತವಾಗಿರುತ್ತವೆ. (೨) **ಗಾಳಿಗಳು:**—ಪೃಥ್ವಿಯ ಪೃಷ್ಠಭಾಗದ ಮೇಲೆ ವ್ಯಾಪಾರದ ಮತ್ತು ಪ್ರತಿ ವ್ಯಾಪಾರದ ಗಾಳಿಗಳಂಥ ಗಾಳಿಗಳು ಯಾವಾಗಲೂ ಬೀಸುತ್ತಿರುತ್ತವೆ. ಬೀಸುವಾಗ ಈ ಗಾಳಿಗಳು ಸಮುದ್ರದ ಪೃಷ್ಠಭಾಗದ ಮೇಲಿನ ನೀರನ್ನು ತಮ್ಮ ಸಂಗಡ ನೂಕುತ್ತ ಮುಂದಕ್ಕೆ ಒಯ್ಯುತ್ತವೆ. ಇದರಿಂದ ನೀರಿನ ಪ್ರವಾಹವು ಆರಂಭವಾಗುತ್ತದೆ. ಮತ್ತು ಅದು ಈ ಗಾಳಿಗಳು ಬೀಸುವ ದಿಕ್ಕಿನಲ್ಲಿಯೇ ಹರಿಯುತ್ತ ಹೋಗುತ್ತದೆ. ಉತ್ತರ ಮತ್ತು ದಕ್ಷಿಣ ಗೋಲಾರ್ಧದೊಳಗಿಂದ ವಿಷುವ-ವೃತ್ತದ ಕಡೆಗೆ ವ್ಯಾಪಾರದ ಗಾಳಿಗಳು ಬೀಸುತ್ತವೆ. ಅವು ತಮ್ಮ ಮುಂದೆ ನೂಕುತ್ತ ತಂದ ನೀರು ವಿಷುವ-ವೃತ್ತದ ಹತ್ತರ ಬಹಳ ಹೆಚ್ಚಾಗುತ್ತದೆ; ಮತ್ತು ಗಾಳಿಗಳ ಸಂಗಡ ಪಶ್ಚಿಮಕ್ಕೆ ಹರಿಯತೊಡಗುತ್ತದೆ. ಈ ರೀತಿಯಿಂದ 'ವಿಷುವ-ವೃತ್ತ'ದ ಪ್ರವಾಹಗಳು ಹುಟ್ಟುತ್ತವೆ. ಮತ್ತು ಅವು ಪಶ್ಚಿಮಕ್ಕೆ ಹರಿಯತೊಡಗುತ್ತವೆ. ಗಲ್ಫ ಪ್ರವಾಹಗಳು ಉತ್ತರಕ್ಕೆ ಹರಿಯುತ್ತ ಹರಿಯುತ್ತ ಪ್ರತಿ ವ್ಯಾಪಾರಗಾಳಿಗಳ ಹೊಡತಕ್ಕೆ ಸಿಕ್ಕು ಈಶಾನ್ಯ ದಿಕ್ಕಿನ ಕಡೆಗೆ ಹರಿಯುವವು. ಸಾಗರದೊಳಗಿನ ಪ್ರವಾಹಗಳ ನಕಾಶವನ್ನು ಮುಂದೆ ಕೊಟ್ಟಿರುತ್ತದೆ. ಅದನ್ನು ನೋಡಬಹುದು. ಅಂದರೆ ಪ್ರವಾಹಗಳ ದಿಕ್ಕುಗಳು ತಿಳಿದು ಬರುತ್ತದೆ. (೩) **ಪೃಥ್ವಿಯ ಪರಿಭ್ರಮಣ:**—ಪೃಥ್ವಿಯು ತನ್ನ ಸುತ್ತಲೂ ತಿರುಗುತ್ತಿರುವದೂ ಪ್ರವಾಹಗಳ ದಿಕ್ಕುಗಳ ಬದಲಾವಣೆಯು ಕಾರಣವಾಗಿರುವದು. ಇದರಿಂದ ಉತ್ತರ ಗೋಲಾರ್ಧದಲ್ಲಿಯ ಪ್ರವಾಹಗಳು ಬಲಬದಿಗೆ ತಿರುಗುತ್ತವೆ, ಮತ್ತು ದಕ್ಷಿಣ ಗೋಲಾರ್ಧದಲ್ಲಿ ಅವು ಎಡಬದಿಗೆ ತಿರುಗುತ್ತವೆ. (೪) **ಭೂ-ಭಾಗದ ಬಾಹ್ಯರೇಷೆಯು:**—ಪ್ರವಾಹದ ಮಧ್ಯದಲ್ಲಿ ಭೂಮಿಯು ಅಡ್ಡವಾದರೆ ಆ ಭೂಮಿಯ ಆಕಾರದ ಪ್ರಮಾಣದಲ್ಲಿ ಪ್ರವಾಹಗಳಲ್ಲಿ ಬದಲಾವಣೆಯಾಗುತ್ತದೆ. ದಕ್ಷಿಣ ವಿಷುವ-ವೃತ್ತದ ಪ್ರವಾಹಗಳು ಪಶ್ಚಿಮಕ್ಕೆ ಹರಿಯುತ್ತ ಹರಿಯುತ್ತ ದಕ್ಷಿಣ ಅಮೇರಿಕೆಯ ಸಮುದ್ರ ದಂಡೆಯ ತನಕ ಬರುತ್ತವೆ. ದಂಡೆಗುಂಟ ಆ ಪ್ರವಾಹಗಳು ಉತ್ತರಕ್ಕೂ ದಕ್ಷಿಣಕ್ಕೂ ಹರಿಯುತ್ತ ಹೋಗುತ್ತವೆ. ಇದರ ದಕ್ಷಿಣದ ಶಾಖೆಗೆ ಬ್ರಾಝಿಲ ಪ್ರವಾಹವೆಂದು ಕರೆಯುತ್ತಾರೆ. ಇಲ್ಲಿಯವರೆಗೆ

ಪ್ರವಾಹಗಳು ಹೇಗೆ ಹುಟ್ಟುತ್ತವೆಂಬುದನ್ನೂ ಮತ್ತು ಅವುಗಳು ದಿಕ್ಕು ಗಳನ್ನು ಏಕೆ ಬದಲಾಯಿಸುವದೆಂಬುದರ ಬಗ್ಗೆ ವಿಚಾರ ಮಾಡಿದೆವು. ಇನ್ನು ಮಹಾ ಸಾಗರಗಳಲ್ಲಿರುವ ಮುಖ್ಯ ಪ್ರವಾಹಗಳ ಬಗ್ಗೆ ತಿಳಿದು ಕೊಳ್ಳೋಣ.

**ಉತ್ತರ ಅಟಲಾಂಟಿಕ ಮಹಾಸಾಗರದೊಳಗಿನ ಪ್ರವಾಹವು:—**
'ಗಲ್ಫ ಪ್ರವಾಹವು' ಉಷ್ಣಪ್ರವಾಹವಾಗಿರುತ್ತದೆ. 'ದಕ್ಷಿಣ ವಿಷುವ-ವೃತ್ತ' ಪ್ರವಾಹವು ದಕ್ಷಿಣ ಅಮೇರಿಕೆಯ ದಂಡೆಯ ವರೆಗೆ ಹರಿಯುತ್ತ ಬಂದಬಳಿಕ ಅದರೊಳಗೆ ಎರಡು ಶಾಖೆಗಳುಂಟಾಗುತ್ತವೆ. ಅವುಗಳೊಳಗಿನ ಉತ್ತರ ಶಾಖೆಯು ಕ್ಯಾರಿಬಿಯನ್ ಸಮುದ್ರದೊಳಗಿಂದ ಮೆಕ್ಸಿಕೋದ ಆಖಾತ ದೊಳಗೆ ಹರಿಯುತ್ತ ಹೋಗುತ್ತದೆ. ಇಲ್ಲಿಂದ ಅದು ಹೊರಹೊರಡಲು, ಅದಕ್ಕೆ 'ಗಲ್ಫ' ಪ್ರವಾಹವೆಂಬ ಹೆಸರು ಪ್ರಾಪ್ತವಾಗುತ್ತದೆ. ಕ್ಯಾರಿಬಿ ಯನ್ ಸಮುದ್ರದ ಮುಖದ ಹತ್ತರ ಈ ಪ್ರವಾಹಕ್ಕೆ ಉತ್ತರ ವಿಷುವ-ವೃತ್ತ ಪ್ರವಾಹವು ಬಂದು ಕೂಡುತ್ತದೆ. ವಿಷುವ-ವೃತ್ತದ ಮೇಲಿರುವ ಸೂರ್ಯನ ಪ್ರಖರವಾದ ಉಷ್ಣತೆಯಿಂದ 'ಗಲ್ಫ' ಪ್ರವಾಹದ ನೀರಿನ ಉಷ್ಣತಾಮಾನವು ಸುಮಾರು ೮೦° ಇರುತ್ತದೆ. ಈ ಪ್ರವಾಹವು ಮೆಕ್ಸಿ ಕೋದ ಆಖಾತದೊಳಗಿಂದ ಹೊರಹೊರಟ ಬಳಿಕ ಸಂಯುಕ್ತ ಸಂಸ್ಥಾನದ ಪೂರ್ವ ಕರಾವಳಿಯಗುಂಟ ಉತ್ತರಕ್ಕೆ ಹರಿಯುತ್ತದೆ. ಈ ಸ್ಥಳದಲ್ಲಿ ಅದರ ವೇಗವು ತಾಸಿಗೆ ೪-೫ ಮೈಲಿನಷ್ಟು ಇರುತ್ತದೆ. ನ್ಯೂಫೌಂಡಲಂಡದ ದಕ್ಷಿಣಕ್ಕೆ ಬಂದ ಕೂಡಲೆ 'ಗಲ್ಫ' ಪ್ರವಾಹದ ದಿಕ್ಕು ಪಶ್ಚಿಮ ಗಾಳಿಗಳಿಂದ ಬದಲಾಗುತ್ತದೆ. ಮತ್ತು ಅದು ಅಟಲಾಂಟಿಕ ಮಹಾಸಾಗರದೊಳಗಿಂದ ಈಶಾನ್ಯಕ್ಕೆ ಯುರೋಪದ ದಂಡೆಯ ಕಡೆಗೆ ಹೋಗ ಹತ್ತುವದು. ಸುಮಾರು ೪೦° ಅಕ್ಷ-ವೃತ್ತದ ಮೇಲೆ ಅದಕ್ಕೆ ಎರಡು ಶಾಖೆಗಳು ಒಡೆಯು ತ್ತವೆ. 'ಉತ್ತರ ಅಟಲಾಂಟಿಕ ಪ್ರವಾಹ'ವೆಂಬ ಹೆಸರಿನ ಒಂದು ಪ್ರವಾಹವು ಬ್ರಿಟಿಶ ನಡುಗಡ್ಡೆಗಳ ಪಶ್ಚಿಮದ ಕಡೆಯಿಂದ ನಾರ್ವೇದ ಕಡೆಗೆ ಹರಿಯ ತೊಡಗುತ್ತದೆ. ಮತ್ತು ಕಟ್ಟಕಡೆಗೆ ಆರ್ಕ್ಟಿಕ್ ಮಹಾಸಾಗರದೊಳಗೆ ಇಲ್ಲದಂತಾಗುತ್ತದೆ. ಎರಡನೇ ಶಾಖೆಯು ದಕ್ಷಿ ಣಕ್ಕೆ ತಿರುಗುತ್ತದೆ. ಅದು ಸ್ಪೇನದ ಪಶ್ಚಿಮದ ಕಡೆಯಿಂದ ಹರಿಯುತ್ತ ಹೋಗಿ ಆಫ್ರಿಕೆಯ ಪಶ್ಚಿಮ ದಂಡೆಯ ಹತ್ತರ ಉತ್ತರ ವಿಷುವ-ವೃತ್ತ

ಪ್ರವಾಹಕ್ಕೆ ಬಂದು ಕೂಡುತ್ತದೆ. ಗಲ್ಫ ಪ್ರವಾಹವು ಪಶ್ಚಿಮ ಗಾಳಿಗಳ ಮಾರ್ಯಾದೆಯಲ್ಲಿ ಬರಲು ಅದರ ವೇಗವೂ ಉಷ್ಣತಾಮಾನವೂ ಕಡಿಮೆ ಯಾಗುತ್ತವೆ. ಆದರೂ ಅದು ಸಾಕಷ್ಟು ಬೆಚ್ಚಗಾಗಿರುವದು. ಈ ಪ್ರವಾಹ ದಿಂದ ಸಂಯುಕ್ತ ಸಂಸ್ಥಾನದೊಳಗಿನ ಪೂರ್ವದಂಡೆಯ ಮೇಲಿನ ಪ್ರದೇಶ ಗಳಿಗೆ ಉಷ್ಣತೆಯು ಸಿಗುತ್ತದೆ. ಬ್ರಿಟಿಶ ನಡುಗಡ್ಡೆಗಳ ಪಶ್ಚಿಮದ ಕಡೆ ಯಿಂದಲೂ ನಾರ್ವೇ ದೇಶದ ಕರಾವಳಿಯ ಹತ್ತರಿಂದಲೂ ಹರಿಯುತ್ತ ಹೋಗುವಾಗ ಈ ಪ್ರವಾಹದ ಮೇಲಿರುವ ಬೆಚ್ಚನ್ನ ಹವೆಯನ್ನು ಪಶ್ಚಿಮ ಗಾಳಿಗಳು ಎರಡೂ ದೇಶಗಳಿಗೆ ಒಯ್ಯುವದರಿಂದ ಅಲ್ಲಿಯ ಚಳಿಗಾಲವು ಬಹಳ ಸೌಮ್ಯವಾಗುತ್ತದೆ ವಿಶೇಷತಃ ನಾರ್ವೇ ದೇಶದ ಪಶ್ಚಿಮ ಕರಾ ವಳಿಯ ಮೇಲಿನ ಬಂದರಗಳು ತೀರ ಉತ್ತರಕ್ಕೆ ಇದ್ದರೂ ಚಳಿಗಾಲದೊ ಳಗೆ ಸಹ ಅವು ಈ ಬೆಚ್ಚಗಿನ ಹವೆಯ ಮೂಲಕ ಹೆಪ್ಪುಗಟ್ಟಿರುವದಿಲ್ಲ. ಅವು ಯಾವಾಗಲೂ ಹಡಗುಗಳಿಗೆ ತೆರೆದಿರುತ್ತವೆ. ಕಾನಡಾದ ಪೂರ್ವದಂಡೆಯ ಮೇಲಿರುವ ಬಂದರಗಳಂತೆ ಅವು ಬರ್ಫದಿಂದ ತುಂಬಿಕೊಂಡಿರುವದಿಲ್ಲ. ಈ ಪ್ರವಾಹದಿಂದ ಬ್ರಿಟಿಶ ನಡುಗಡ್ಡೆಗಳಲ್ಲಿಯ ಮಳೆಯ ಪ್ರಮಾಣವಾದರೂ ಹೆಚ್ಚಾಗಿರುತ್ತದೆ.

**ಲಬ್ರೆಡೋರದ ಶೀತಪ್ರವಾಹವು:**—ಈ ಅತಿ ಶೀತವಾದ ಪ್ರವಾ ಹವು ಉತ್ತರ ಧ್ರುವ ಪ್ರದೇಶದೊಳಗೆ ಹುಟ್ಟಿ ಗ್ರೀನಲಂಡದ ಪಶ್ಚಿಮದ ಕಡೆಯಿಂದ ಹರಿಯುತ್ತ ಬರುತ್ತದೆ. ಮತ್ತು ಮುಂದೆ ನ್ಯೂಫೌಂಡಲಂಡನ್ನು ಸುತ್ತು ಹಾಕಿ 'ಗಲ್ಫ' ಪ್ರವಾಹಕ್ಕೆ ಬಂದು ಕೂಡುತ್ತದೆ. ಈ ಪ್ರವಾಹದ ಸಂಗಡ ಅಜಸ್ರವಾದ ಹಿಮಗಿರಿಗಳು (icebergs)ದಕ್ಷಿಣದ ಕಡೆಗೆ ತೇಲುತ್ತ ಬರುತ್ತವೆ. ಲಬ್ರೆಡೋರ ಪ್ರವಾಹದ ತಂಪು ನೀರಿನ ಮೇಲಿರುವ ತಂಪು ಹವೆಯು ಮತ್ತು 'ಗಲ್ಫ' ಪ್ರವಾಹದ ಉಷ್ಣ ನೀರಿನ ಮೇಲಿರುವ ಬೆಚ್ಚಗಿನ ಹವೆಯು ಒಂದರೊಳಗೊಂದು ಕೂಡಲು, ಅಲ್ಲಿ ದಟ್ಟವಾದ ಮಂಜು ಬೀಳು ತ್ತದೆ. ಈ ಬದಿಯಿಂದ ಹೋಗು-ಬರುವ ಹಡಗುಗಳಿಗೆ ಈ ಮಂಜಿನಿಂದ ಬಹು ತೊಂದರೆಯಾಗುತ್ತದೆ. ಮಂಜಿನ ಮರ್ಯಾದೆಯೊಳಗೆ ಇರುವವರೆಗೆ ಹಡಗುಗಳಿಗೆ ತಮ್ಮ ವೇಗವನ್ನು ತಗ್ಗಿಸಿ, ಬಹಳ ಎಚ್ಚರದಿಂದ ಹೋಗಬೇ ಕಾಗುತ್ತದೆ. ಇಲ್ಲದಿದ್ದರೆ ಹಿಮಗಿರಿಗಳಿಗೂ ಅಥವಾ ಬೇರೆ ಹಡಗುಗಳಿಗೂ ತಾಕಲಾಡುವ ಸಂಭವವಿರುತ್ತದೆ.

**ದಕ್ಷಿಣ ಅಟಲಾಂಟಿಕ ಮಹಾಸಾಗರದೊಳಗಿನ ಪ್ರವಾಹಗಳು:—ಬ್ರಾಝಿಲದ ಉಷ್ಣ ಪ್ರವಾಹವು**-ದಕ್ಷಿಣ ವಿಷುವ-ವೃತ್ತದ ಪ್ರವಾಹದ ಒಂದು ಶಾಖೆಯು ದಕ್ಷಿಣ ಅಮೇರಿಕೆಯ ಕರಾವಳಿಯಗುಂಟ ದಕ್ಷಿಣದ ಕಡೆಗೆ ತಿರುಗುತ್ತದೆ. ಈ ಶಾಖೆಗೆ ಬ್ರಾಝಿಲದ ಪ್ರವಾಹವೆಂಬ ಹೆಸರು. ಈ ಪ್ರವಾಹವು ದಂಡೆಗುಂಟ ೪೦° ಅಕ್ಷ-ವೃತ್ತದ ವರೆಗೆ ದಕ್ಷಿಣಕ್ಕೆ ಹರಿಯುತ್ತ ಹೋಗಿ ಅಲ್ಲಿಂದ ಮುಂದೆ ಪೂರ್ವಕ್ಕೆ ತಿರುಗುತ್ತದೆ. ಪಶ್ಚಿಮದ ಗಾಳಿಗಳಿಂದ ಅಟಲಾಂಟಿಕ ಮಹಾಸಾಗರವನ್ನು ದಾಟಿ ಅದು ಆಫ್ರಿಕೆಯ ಪಶ್ಚಿಮದ ದಂಡೆಗೆ ತಲಪುತ್ತದೆ. ಇಲ್ಲಿಂದ ಮುಂದೆ ಅದಕ್ಕೆ **'ಬೆಂಗ್ವೇಲಾ'** ಪ್ರವಾಹವೆಂಬ ಹೆಸರು ಬರುತ್ತದೆ. ಈ ಬೆಂಗ್ವೇಲಾ ಪ್ರವಾಹವು ದಂಡೆಗುಂಟ ಉತ್ತರಕ್ಕೆ ಹರಿಯುತ್ತ ಹೋಗುತ್ತದೆ; ಮತ್ತು ಕಟ್ಟಕಡೆಗೆ ದಕ್ಷಿಣ-ವಿಷುವ-ವೃತ್ತದ ಪ್ರವಾಹಕ್ಕೆ ಬಂದು ಕೂಡುತ್ತದೆ. **'ಬ್ರಾಝಿಲ್'** ಪ್ರವಾಹವು ಉಷ್ಣವಿರುವದರಿಂದ ಅದು ದಕ್ಷಿಣ ಅಮೇರಿಕೆಯ ಪೂರ್ವ ದಂಡೆಗೆ ಉಷ್ಣತೆಯನ್ನು ಕೊಡುತ್ತದೆ. ಆಫ್ರಿಕೆಯ ಪಶ್ಚಿಮ ಕರಾವಳಿಗೆ ಬರುವದರೊಳಗಾಗಿ ಅದರ ಉಷ್ಣತೆಯು ಕಡಿಮೆಯಾಗುತ್ತದೆ. ಮತ್ತು ಆಫ್ರಿಕೆಯ ದಂಡೆಯ ಮೇಲೆ ಅದು ಶೀತಪ್ರವಾಹವಾಗಿ ಹರಿಯತೊಡಗುತ್ತದೆ.

**ಹಿಂದೀ ಮಹಾಸಾಗರದೊಳಗಿನ ಪ್ರವಾಹಗಳು :**—ಮಹಾಸಾಗರದೊಳಗಿನ ಪ್ರವಾಹಗಳ ದಿಕ್ಕು ಗಾಳಿಗಳ ಮೇಲೆ ಎಷ್ಟರ ಮಟ್ಟಿಗೆ ಅವಲಂಬಿಸಿರುತ್ತದೆಂಬ ಸಂಗತಿಯು ಹಿಂದೀ ಮಹಾಸಾಗರದೊಳಗಿನ ಪ್ರವಾಹಗಳ ಮೇಲಿಂದ ಸ್ಪಷ್ಟವಾಗಿ ತಿಳಿಯುತ್ತದೆ. ಈಶಾನ್ಯ ಮತ್ತು ನೈಋತ್ಯದ ಮಾನ್ಸೂನ ಗಾಳಿಗಳ ಸಂಗಡಲೇ ಈ ಸಾಗರದೊಳಗಿನ ಪ್ರವಾಹಗಳ ದಿಕ್ಕುಗಳಾದರೂ ಬದಲಾಗುತ್ತವೆ. ಜಾನೇವರೀ ತಿಂಗಳಿನಲ್ಲಿ ಈಶಾನ್ಯ ಮಾನ್ಸೂನ ಗಾಳಿಗಳು ಬೀಸಹತ್ತಿದವೆಂದರೆ, ಮಲಾಕಾದ ಸಾಮುದ್ರಧುನಿಯಿಂದ ಒಂದು ಪ್ರವಾಹವು ಆರಂಭವಾಗುತ್ತದೆ. ಅದು ಬ್ರಹ್ಮದೇಶ, ಹಿಂದುಸ್ತಾನ ಮತ್ತು ಅರಬಸ್ತಾನ ದೇಶಗಳ ದಂಡೆಗಳ ಗುಂಟ ತಿರುಗುತ್ತ ಆಫ್ರಿಕೆಯ ಪೂರ್ವ ದಂಡೆಗೆ ತಲಪುತ್ತದೆ. ಅಲ್ಲಿಂದ ಅದು ದಕ್ಷಿಣಾಭಿಮುಖವಾಗಿ ಝಾಂಝೀಬಾರದ ವರೆಗೆ ಹೋಗಿ ಪುನಃ ಪೂರ್ವಕ್ಕೆ ತಿರುಗುತ್ತದೆ; ಮತ್ತು ಮುಂದೆ ಸಮುದ್ರದೊಳಗೆ ಇಲ್ಲದಂತಾಗುತ್ತದೆ.

ನೈಋತ್ಯ ಮಾನ್ಸೂನ ಗಾಳಿಗಳು ಆರಂಭವಾದ ಕೂಡಲೆ ವಿಷುವ-ವೃತ್ತದಿಂದ ಒಂದು ಪ್ರವಾಹವು ಹೊರಟು ಪಶ್ಚಿಮದ ಕಡೆಗೆ ಹರಿಯುತ್ತ ಹೋಗುತ್ತದೆ. ಮತ್ತು ಆಫ್ರಿಕೆಯ ದಂಡೆಯ ಹತ್ತರ ಉತ್ತರಕ್ಕೆ ತಿರುಗುತ್ತದೆ. ಅಲ್ಲಿಂದ ಅದು ಅರಬಸ್ತಾನ, ಹಿಂದುಸ್ತಾನ ಮತ್ತು ಬ್ರಹ್ಮದೇಶಗಳ ದಂಡೆಗುಂಟ ಹರಿಯುತ್ತ ಹೋಗಿ, ಪುನಃ ವಿಷುವ-ವೃತ್ತ ಪ್ರವಾಹಕ್ಕೆ ಬಂದು ಕೂಡುತ್ತದೆ. ಇವೆರಡೂ ಪ್ರವಾಹಗಳು ಬೇರೆ ಬೇರೆ ಋತುಗಳಲ್ಲಿ ಒಂದಕ್ಕೊಂದು ವಿರುದ್ಧ ದಿಕ್ಕುಗಳಿಂದ ಹರಿಯುತ್ತಿರುತ್ತವೆ. ಇವೆರಡೂ ಪ್ರವಾಹಗಳು ಉಷ್ಣ ಪ್ರವಾಹಗಳಾಗಿರುತ್ತವೆ. ಅದು ಏಕೆ ?

'ವಿಷುವ-ವೃತ್ತ ಪ್ರವಾಹವು' ವಿಷುವ-ವೃತ್ತದಿಂದ ಹೊರಟು ವ್ಯಾಪಾರದ ಗಾಳಿಗಳಿಂದ ಪಶ್ಚಿಮಕ್ಕೆ ಹರಿಯುತ್ತ ಹೋಗುತ್ತದೆ. ಮಡಾಗಾಸ್ಕರದ ಹತ್ತರ ಬರಲು ಅದಕ್ಕೆ ಎರಡು ಶಾಖೆಗಳು ಒಡೆಯುತ್ತವೆ. ಅವು ಆ ದ್ವೀಪದ ಪೂರ್ವ ಮತ್ತು ಪಶ್ಚಿಮ ಬದಿಗಳಿಂದ ಹರಿಯುತ್ತ ಹೋಗಿ ಪುನಃ ಮುಂದೆ ಒಂದಕ್ಕೊಂದು ಕೂಡುತ್ತವೆ. ಈ ಶಾಖೆಗಳಿಗೆ 'ಮೋಝಾಂ-ಬಿಕ್' ಮತ್ತು 'ಮಡಾಗಾಸ್ಕರ' ಪ್ರವಾಹಗಳೆಂದೆನ್ನುತ್ತಾರೆ. ಈ ಸಂಯುಕ್ತ ಪ್ರವಾಹವು ಆಫ್ರಿಕೆಯ ದಕ್ಷಿಣ ತುದಿಯನ್ನು ದಾಟಿದ ಮೇಲೆ ಪಶ್ಚಿಮ ಗಾಳಿಗಳಿಂದ ಪೂರ್ವಾಭಿಮುಖವಾಗಿ ಹರಿಯತೊಡಗುವದು ; ಮತ್ತು ಅಲ್ಲಿ ಅದಕ್ಕೆ 'ಅಂಟಾರ್ಕ್ಟಿಕ್' ಶೀತ ಪ್ರವಾಹವು ಬಂದು ಕೂಡುತ್ತದೆ. ಮುಂದೆ ಈ ಸಂಯುಕ್ತ ಪ್ರವಾಹವು ಹಿಂದೀ ಮಹಾಸಾಗರವನ್ನು ದಾಟಿ ಆಸ್ಟ್ರೇಲಿಯಾದ ದಂಡೆಯುವರೆಗೆ ನೆಟ್ಟಗೆ ಪೂರ್ವದ ಕಡೆಗೆ ಹರಿಯುತ್ತ ಹೋಗುತ್ತದೆ. ಆಫ್ರಿಕೆಯ ದಂಡೆಗುಂಟ ಹರಿಯುವಾಗ ಈ ಪ್ರವಾಹವು ಉಷ್ಣವಾಗಿರುತ್ತದೆ. ಆದರೆ ಅದು ಪೂರ್ವದ ಕಡೆಗೆ ಹರಿಯಲಾರಂಭಿಸಲು ಕ್ರಮೇಣ ತಂಪಾಗುತ್ತ ಆಸ್ಟ್ರೇಲಿಯಾದ ದಂಡೆಗೆ ಬರುವದರೊಳಗಾಗಿ ಅದು ಸಂಪೂರ್ಣವಾಗಿ ತಂಪಾಗಿರುತ್ತದೆ. ಇಲ್ಲಿ ಅದಕ್ಕೆ 'ಪಶ್ಚಿಮ ಆಸ್ಟ್ರೇಲಿಯನ್ ಪ್ರವಾಹ' ವೆಂದೆನ್ನುತ್ತಾರೆ. ಈ ಪ್ರವಾಹವು ಖಂಡದ ದಂಡೆಗುಂಟ ಉತ್ತರಕ್ಕೆ ಹರಿಯುತ್ತ ಹೋಗಿ ಪುನಃ 'ವಿಷುವ-ವೃತ್ತ' ಪ್ರವಾಹಕ್ಕೆ ಬಂದು ಕೂಡುತ್ತದೆ.

**ಪಾಸಿಫಿಕ ಮಹಾ ಸಾಗರದೊಳಗಿನ ಪ್ರವಾಹಗಳು:**—ಈ ಮಹಾಸಾಗರದೊಳಗಿನ ಪ್ರವಾಹಗಳು ಅಟಲಾಂಟಿಕ ಮಹಾಸಾಗರದೊಳಗಿನ ಪ್ರವಾಹಗಳಿಗೆ ಬಹಳವಾಗಿ ಹೋಲುತ್ತವೆ. 'ಕ್ಯೂರೋಸಿವೋ' ಅಥವಾ 'ಜಪಾನದ ಕಪ್ಪು ಪ್ರವಾಹವು'-ವಿಷುವ-ವೃತ್ತ ಪ್ರವಾಹವು ವ್ಯಾಪಾರದ ಗಾಳಿಗಳಿಂದ ಪಶ್ಚಿಮಾಭಿಮುಖವಾಗಿ ಫಿಲಿಪಾಯಿನ್ ನಡುಗಡ್ಡೆಗಳ ವರೆಗೆ ಬರುತ್ತದೆ. ಮುಂದೆ ಅದು ಏಶಿಯಾದ ದಂಡೆಗುಂಟ ಈಶಾನ್ಯಕ್ಕೆ ಹರಿಯತೊಡಗುತ್ತದೆ. ಇದು ಜಪಾನದ ನಡುಗಡ್ಡೆಗಳ ಹತ್ತರ ಬರಲು ನೀರಿನ ಬಣ್ಣದ ಮೇಲಿಂದ ಅದಕ್ಕೆ ಕಪ್ಪು ಪ್ರವಾಹ (ಕ್ಯೂರೋಸಿವೋ) ವೆಂಬ ಹೆಸರು ಪ್ರಾಪ್ತವಾಗುತ್ತದೆ. 'ಕ್ಯೂರೋಸಿವೋ' ಪ್ರವಾಹವು ಜಪಾನದ ಪೂರ್ವ ಬಾಜುವಿನಿಂದ ಹರಿಯುತ್ತ ಹೋಗಿ, ಸುಮಾರು ೪೦° ಅಕ್ಷ-ವೃತ್ತದ ಹತ್ತರ ಪಶ್ಚಿಮ ಗಾಳಿಗಳ ಮರ್ಯಾದೆಯಲ್ಲಿ ಬರಲು ಅದು ಪೂರ್ವಾಭಿಮುಖವಾಗುತ್ತದೆ. ಮತ್ತು ಉತ್ತರ ಅಮೇರಿಕೆಯ ಪಶ್ಚಿಮ ದಂಡೆಯ ಕಡೆಗೆ ಹರಿಯುತ್ತ ಹೋಗುತ್ತದೆ. ಕಲೀಫೋರ್ನಿಯಾದ ಹತ್ತರ ಅದಕ್ಕೆ ಎರಡು ಶಾಖೆಗಳು ಒಡೆಯುತ್ತವೆ. ಒಂದು ಶಾಖೆಯು ಉತ್ತರ ದಿಕ್ಕಿಗೆ ತಿರುಗಿ ದಂಡೆಗುಂಟ ಮುಂದೆ ಅಲಾಸ್ಕಾದ ಕಡೆಗೆ ಹೋಗುತ್ತದೆ. ಮತ್ತು ಎರಡನೇ ಶಾಖೆಯು 'ಕಲೀಫೋರ್ನಿಯಾದ ಪ್ರವಾಹ'ವೆಂಬ ಹೊಸ ಹೆಸರಿನಿಂದ ಕಲೀಫೋರ್ನಿಯಾದ ದಂಡೆಗುಂಟ ಹರಿಯುತ್ತ ಹೋಗಿ ವಿಷುವ-ವೃತ್ತ ಪ್ರವಾಹಕ್ಕೆ ಪುನಃ ಬಂದು ಕೂಡುತ್ತದೆ. ಕ್ಯೂರೋಸಿವೋ ಪ್ರವಾಹವು ವಿಷುವ-ವೃತ್ತದಿಂದ ಹೊರಡುವದರಿಂದ, ಅದು ಗಲ್ಫ ಪ್ರವಾಹದಂತೆ ಉಷ್ಣವಾಗಿದ್ದು, ಜಪಾನದ ಪೂರ್ವದಂಡೆ, ಕಾನಡಾದ ಪಶ್ಚಿಮದಂಡೆ ಮತ್ತು ಅಲಾಸ್ಕಾ ಈ ಭಾಗಗಳಿಗೆ ಸಾಕಷ್ಟು ಉಷ್ಣತೆಯನ್ನು ಕೊಡುತ್ತದೆ. ಅದು ಕಲೀಫೋರ್ನಿಯಾದಿಂದ ದಕ್ಷಿಣಕ್ಕೆ ತಂಪಾಗುತ್ತ ಹೋಗುತ್ತದೆ.

**'ಕ್ಯೂರಾಯಿಲ ಪ್ರವಾಹವು':**—ಉತ್ತರ ಅಟಲಾಂಟಿಕ ಮಹಾಸಾಗರದೊಳಗಿನ ಲಬ್ರೇಡೋರದ ಶೀತಪ್ರವಾಹದಂತೆ ಪಾಸಿಫಿಕ ಮಹಾಸಾಗರದೊಳಗೆ 'ಕ್ಯೂರಾಯಿಲ ಪ್ರವಾಹ'ವೆಂಬ ಹೆಸರಿನ ಶೀತಪ್ರವಾಹವು ಇರುತ್ತದೆ. ಅದು ಆರ್ಕ್ಟಿಕ್ ಮಹಾಸಾಗರದೊಳಗೆ ಹುಟ್ಟಿ, ಬೇರಿಂಗದ ಸಾಮುದ್ರಧುನಿಯೊಳಗಿಂದ ಹಾಯ್ದು ದಕ್ಷಿಣಕ್ಕೆ ಹರಿಯುತ್ತ ಬರುತ್ತದೆ.

ಇದು ಜಪಾನದ ಪೂರ್ವದಂಡೆಯ ಹತ್ತಿರ ಕ್ಯುರೋಸಿವೋ ಪ್ರವಾಹಕ್ಕೆ ಬಂದು ಕೂಡುತ್ತದೆ. ಈ ಸ್ಥಳದಲ್ಲಿ ಸಮುದ್ರದ ಮೇಲೆ ದಟ್ಟಾದ ಮಂಜು ಬೀಳುತ್ತದೆ. ಯಾಕೆ? ಇದರಂತೆಯೇ ನ್ಯೂಫೌಂಡಲಂಡದ ಪೂರ್ವದ ಕಡೆಗೆ ಸಹ ದಟ್ಟಾದ ಮಂಜು ಬೀಳುತ್ತದೆಂಬುದು ನಿಮಗೆ ಈ ಮೊದಲೇ ಗೊತ್ತಾಗಿರುತ್ತದೆ. ದಕ್ಷಿಣ ಪಾಸಿಫಿಕ ಮಹಾಸಾಗರದೊಳಗೆ 'ದಕ್ಷಿಣ ವಿಷುವ-ವೃತ್ತ' ಪ್ರವಾಹವು ಆರಂಭವಾಗುತ್ತದೆ. ಅದು ವ್ಯಾಪಾರದ ಗಾಳಿಗಳಿಂದ ಆಸ್ಟ್ರೇಲಿಯದ ಪೂರ್ವ ಕರಾವಳಿಯ ವರೆಗೆ ಹರಿಯುತ್ತ ಹೋಗುತ್ತದೆ. ಅದರ ಮಾರ್ಗದೊಳಗೆ ಎಷ್ಟೋ ನಡುಗಡ್ಡೆಗಳಿರುವದರಿಂದ ಅದಕ್ಕೆ ಎಷ್ಟೋ ಶಾಖೆಗಳುಂಟಾಗುತ್ತವೆ. ಮುಖ್ಯ ಪ್ರವಾಹವು ಪೂರ್ವ ದಂಡೆಯ ಹತ್ತಿರ ಬಂದ ಬಳಿಕ 'ಪೂರ್ವ ಆಸ್ಟ್ರೇಲಿಯನ್ ಪ್ರವಾಹ'ವೆಂಬ ಹೆಸರಿನಿಂದ ದಂಡೆಯ ಹತ್ತಿರದಿಂದ ದಕ್ಷಿಣಕ್ಕೆ ಹರಿಯುತ್ತ ಹೋಗುತ್ತದೆ. ಇಲ್ಲಿಯ ವರೆಗೆ ಈ ಪ್ರವಾಹವು ಉಷ್ಣವಾಗಿರುತ್ತದೆ. ಮುಂದೆ ಅದು ಪೂರ್ವಕ್ಕೆ ತಿರುಗುತ್ತದೆ. ಆಗ ಅದಕ್ಕೆ 'ಅಂಟಾರ್ಕ್ಟಿಕ್ ಪ್ರವಾಹ'ವೆಂಬ ಶೀತಪ್ರವಾಹವು ಬಂದು ಕೂಡುತ್ತದೆ. ಇಲ್ಲಿಂದ ಈ ಸಂಯುಕ್ತ ಶೀತ ಪ್ರವಾಹವು ಪಶ್ಚಿಮ ಗಾಳಿಗಳಿಂದ ಪೂರ್ವ ದಿಕ್ಕಿಗೆ ನೆಟ್ಟಗೆ ದಕ್ಷಿಣ ಅಮೇರಿ ಕೆಯ ವರೆಗೆ ಹರಿಯುತ್ತ ಹೋಗುತ್ತದೆ. ಕರಾವಳಿಯ ಹತ್ತಿರ ಈ ಪ್ರವಾಹಕ್ಕೆ 'ಪೆರೂ ಪ್ರವಾಹ'ವೆಂಬ ಹೊಸ ಹೆಸರು ಪ್ರಾಪ್ತವಾಗುತ್ತದೆ. 'ಪೆರೂ ಪ್ರವಾಹ'ವು ದಂಡೆಗುಂಟ ಉತ್ತರಕ್ಕೆ ಹರಿಯುತ್ತ ಹೋಗಿ, ಮೂಲ ದಕ್ಷಿಣ ವಿಷುವ-ವೃತ್ತ ಪ್ರವಾಹಕ್ಕೆ ಕೂಡುತ್ತದೆ.

**ಮಹಾಸಾಗರದೊಳಗಿನ ಪ್ರವಾಹಗಳೂ ಹವೆಯ ಮೇಲಾಗುವ ಅವುಗಳ ಪರಿಣಾಮವೂ :**—ಉಷ್ಣ ಪ್ರವಾಹಗಳ ಮೇಲಿನ ಹವೆಯು ಉಷ್ಣವಾದದ್ದೂ, ಆರ್ದ್ರವಾದದ್ದೂ ಇರುತ್ತದೆ. ಶೀತ ಪ್ರವಾಹದ ಮೇಲಿನ ಹವೆಯು ತಂಪಾಗುತ್ತದೆ. ಉಷ್ಣ ಪ್ರವಾಹದ ಮೇಲಿಂದ ನೆಲದ ಕಡೆಗೆ ಬೀಸುವ ಗಾಳಿಗಳು ತಮ್ಮ ಸಂಗಡ ಉಷ್ಣತೆಯನ್ನೂ ಉಗಿಯನ್ನೂ ತರುತ್ತವೆ. ಮತ್ತು ಅವು ಆ ಭೂಭಾಗಕ್ಕೆ ಉಷ್ಣತೆಯನ್ನೂ ಮಳೆಯನ್ನೂ ಕೊಡುತ್ತವೆ. ಗಲ್ಫ ಪ್ರವಾಹ ಮತ್ತು ಕ್ಯುರೋಸಿವೋ ಪ್ರವಾಹಗಳು ಯಾವ ಯಾವ ದೇಶಗಳಿಗೆ ಹೇಗೆ ಉಪಯೋಗವಾಗುತ್ತವೆಂಬದನ್ನೂ ಹವೆಯ ಮೇಲೆ ಅವುಗಳ ಪರಿಣಾಮವು ಹೇಗಾಗುತ್ತದೆಂಬುದನ್ನೂ

ಮೇಲೆ ಹೇಳಿರುತ್ತದೆ. ಶೀತ ಪ್ರವಾಹಗಳ ಮೇಲಿಂದ ಭೂಭಾಗದ ಮೇಲೆ ಬೀಸುವ ಗಾಳಿಗಳು ತಮ್ಮ ಸಂಗಡ ತಂಪನ್ನು ತರುತ್ತವೆ. ಈ ಗಾಳಿಗಳು ಒಣವಾಗಿರುವದರಿಂದ ಅವುಗಳಿಂದ ಮಳೆಯು ಬರುವದಿಲ್ಲ. ಇಂಗ್ಲಂಡ ಮತ್ತು ನ್ಯೂಫೌಂಡಲಂಡ, ಆದರಂತೆ ಕಾನಡಾದ ಪಶ್ಚಿಮ ದಂಡೆ ಮತ್ತು ಏಶಿಯಾ ಖಂಡದ ಈಶಾನ್ಯ ಭಾಗಗಳ ಹವೆಯಲ್ಲಿ ಮುಖ್ಯವಾಗಿ ಗಲ್ಫ ಪ್ರವಾಹ ಮತ್ತು ಲಬ್ರೇಡೋರ ಪ್ರವಾಹಗಳ ಮೇಲಿಂದಲೂ, ಕ್ಯೂರೋಸಿವೋ ಮತ್ತು ಕ್ಯೂರಾಯಿಲದ ಪ್ರವಾಹಗಳ ಮೇಲಿಂದಲೂ ಬೀಸುತ್ತ ಬರುವ ಗಾಳಿಗಳಿಂದ ಇಷ್ಟು ಹೆಚ್ಚು ಕಡಿಮೆಯಾಗುತ್ತದೆ. ಉಷ್ಣ ಮತ್ತು ಶೀತ ಪ್ರವಾಹಗಳ ಸಂಯೋಗವಾಗಲು, ದಟ್ಟಾದ ಮಂಜು ಬೀಳುತ್ತದೆ. ಮತ್ತು ಇದರಿಂದ ಹಡಗುಗಳಿಗೆ ಬಹಳ ತೊಂದರೆಯುಂಟಾಗುತ್ತದೆ. ಈ ಸಂಯೋಗದಿಂದ ಒಮ್ಮೊಮ್ಮೆ ಬಿರುಗಾಳಿಗಳು ಸಹ ಹುಟ್ಟುತ್ತವೆ.

೨೮ನೇ ಪ್ರಕರಣ

# ಹವಾಮಾನಕ್ಕನುಸಾರವಾದ ಪ್ರದೇಶಗಳು

## (ಕ್ಲಾಯಮೆಟಿಕ್ ರೀಜನ್ಸ)

**ಹವೆಯೂ ಹವಾಮಾನವು:**— ಉಷ್ಣತೆ, ಮಳೆ, ಮೋಡ, ಗಾಳಿ ಮುಂತಾದವುಗಳ ಪರಿಣಾಮದಿಂದುಂಟಾಗುವ ವಾತಾವರಣದ ಸ್ಥಿತಿಗೆ 'ಹವೆ' ಎಂದೆನ್ನುತ್ತಾರೆ. ಈ ಸ್ಥಿತಿಯು ದಿವಸದಲ್ಲೆಲ್ಲ, ತಿಂಗಳಲ್ಲೆಲ್ಲ ಅಥವಾ ವರ್ಷದಲ್ಲೆಲ್ಲ ಒಂದೇ ಸವನೆ ಇರುತ್ತದೆಂದು ಹೇಳಲಾಗದು. ಅದು ಯಾವಾಗಲೂ ಬದಲಾಗುತ್ತಿರುವದು ಸ್ವಾಭಾವಿಕವು; ಆದ್ದರಿಂದಲೇ ನಾವು ಮುಂಜಾವಿನ ಹವೆ, ಸಂಜೆಯ ಹವೆ, ಮಳೆಗಾಲದ ಹವೆ ಎಂಬ ಶಬ್ದ ಪ್ರಯೋಗಗಳನ್ನು ಮಾಡುತ್ತಿರುತ್ತೇವೆ. ಪ್ರತಿ ದಿವಸ ಬದಲಾಗುವ ಹವೆಯನ್ನು ಎಷ್ಟೋ ವರುಷಗಳ ವರೆಗೆ ನಿರೀಕ್ಷಿಸಿ, ಅದರ ಸರ್ವಸಾಮಾನ್ಯ ವಾದ ಸ್ವರೂಪವನ್ನು ನಿಶ್ಚಯಿಸಿದರೆ ಅದಕ್ಕೆ 'ಹವಾಮಾನ' ವೆಂದೆನ್ನ ಬಹುದು. ಮುಂಬಯಿಯಲ್ಲಿ ಜಾನೇವರೀ ತಿಂಗಳಲ್ಲಿ ಒಂದು ದಿವಸ ಬಹಳ ಚಳಿ ಬಿದ್ದರೆ, ಆ ದಿವಸ ಮಾತ್ರ ಅಲ್ಲಿಯ ಹವೆಯು ತಂಪಾಗಿರುತ್ತದೆಂದು ಅನ್ನಬಹುದು. ಆದರೆ ಆ ಒಂದು ದಿವಸದ ಅತಿ ಚಳಿಯ ಮೇಲಿಂದ ಮುಂಬಯಿಯಲ್ಲಿಯ ಚಳಿಗಾಲದ ಹವಾಮಾನವು ತೀರ ತಂಪಾಗಿರುತ್ತ ದೆಂದು ಹೇಳಿದರೆ ಅದು ತಪ್ಪಾಗುವದು.

ಪೃಥ್ವಿಯ ಪೃಷ್ಠಭಾಗದ ಮೇಲೆ ಎಲ್ಲ ಕಡೆಯಲ್ಲಿಯೂ ಒಂದೇ ತರದ ಹವಾಮಾನವಿರುವದಿಲ್ಲೆಂಬದು ಎಲ್ಲರಿಗೂ ಗೊತ್ತಿದ್ದ ಮಾತಾಗಿರುತ್ತದೆ. ಬೇರೆ ಬೇರೆ ಸ್ಥಳಗಳಲ್ಲಿ ಬೇರೆ ಬೇರೆ ಹವಾಮಾನಗಳಿದ್ದದ್ದು ಕಂಡುಬರುತ್ತದೆ.

ಆದರೂ ಒಂದೇ ತರದ ಹವಾಮಾನವು ಬೇರೆ ಬೇರೆ ಖಂಡಗಳಲ್ಲಿ ಕೆಲವೊಂದು ವಿಶಿಷ್ಟವಾದ ಭಾಗಗಳಲ್ಲಿ ಕಂಡುಬರುತ್ತದೆ. ಆದ್ದರಿಂದ ಒಂದೇ ಪ್ರಕಾರದ ಹವಾಮಾನವು ಕಂಡು ಬರುವ ಯಾವತ್ತೂ ಪ್ರದೇಶಗಳನ್ನು (ಅವು ಪೃಥ್ವಿಯ ಮೇಲೆ ಎಲ್ಲಿದ್ದರೂ ಕೂಡ) ಒಂದೇ ವರ್ಗದೊಳಗೆ ಹಾಕುವದು ಯೋಗ್ಯ ವಾದದ್ದು. ಬೇರೆ ಬೇರೆ ಕಟಿಬಂಧದೊಳಗೆ ಒಟ್ಟಿಗೆ ಹನ್ನೆರಡು ಮಹತ್ವವಾದ ಹವಾಮಾನದ ಪ್ರಕಾರಗಳು ಕಂಡು ಬರುತ್ತವೆ. ಅವುಗಳಿಗನುಸಾರವಾಗಿ ಹವಾಮಾನದ ದೃಷ್ಟಿಯಿಂದ ಭೂಮಂಡಲದಲ್ಲಿ ಹನ್ನೆರಡು ವಿಭಾಗಗಳನ್ನು ಮಾಡಬಹುದು. ಹವಾಮಾನದ ಪ್ರಕಾರಗಳು ಕೆಳಗೆ ಕೊಟ್ಟ ಸಂಗತಿಗಳ ಮೇಲೆ ಅವಲಂಬಿಸಿರುತ್ತವೆ. (೧) ಬೇಸಿಗೆಯಲ್ಲಿಯೂ ಚಳಿಗಾಲದಲ್ಲಿಯೂ ಇರುವ ಉಷ್ಣತಾಮಾನವು. (೨) ಮಳೆ ಬೀಳುವ ಋತುಗಳು. (೩) ಮಳೆಯ ಪ್ರಮಾಣವು. (೪) ಅತಿ ಹೆಚ್ಚು ಮತ್ತು ಅತಿ ಕಡಿಮೆ ಉಷ್ಣತಾ ಮಾನಗಳೊಳಗಿನ ಅಂತರ. ಕೆಳಗೆ ಕೊಟ್ಟ ಹವಾಮಾನಗಳ ಪ್ರಕಾರಗಳ ಬಗ್ಗೆ ಅಭ್ಯಾಸ ಮಾಡುವಾಗ ಮೇಲಿನ ಸಂಗತಿಗಳು ಬಹಳ ಉಪಯೋಗ ವಾಗುವವು.

## ಹವಾಮಾನದ ಮುಖ್ಯವಾದ ಪ್ರಕಾರಗಳು

(ಅ) ಉಷ್ಣಕಟಿಬಂಧಗಳಲ್ಲಿ:— (೧) ವಿಷುವ-ವೃತ್ತದ ಪ್ರಕಾರ (ಅಮೇಝಾನ ಕೊಳ್ಳದೊಳಗಿನ ಪ್ರಕಾರ) (೨) ಕರ್ಕ ಮಕರ ವೃತ್ತಗಳ ಹತ್ತರಿರುವ ಸುದಾನೀ ಪ್ರಕಾರ (೩) ಮಾನ್ಸೂನ ಪ್ರಕಾರ (೪) ಸಹಾರಾದಲ್ಲಿಯ ಪ್ರಕಾರ.

(ಬ) ಸಮಶೀತೋಷ್ಣ ಕಟಿಬಂಧದೊಳಗಿನ ಬೆಚ್ಚಗಿನ ಪಟ್ಟಿಯೊಳ ಗಿನ ಪ್ರಕಾರಗಳು:—(೧) ಚೀನೀ ಪ್ರಕಾರ (೨) ಚಳಿಗಾಲದ ಮಳೆಯ ಪ್ರಕಾರ (೩) ಬಂಜೆ ಮತ್ತು ಅರ್ಧಮರ್ಧ ಬಂಜೆಯ ಬೈಲು (ಇರಾಣ ಮತ್ತು ತುರಾಣೀ) ಪ್ರಕಾರ.

(ಕ) ತಂಪು ಪಟ್ಟಿಯೊಳಗಿನ ಪ್ರಕಾರಗಳು:—(೧) ಪಶ್ಚಿಮ ಯುರೋ ಪದೊಳಗಿನ (ಮಹಾಸಾಗರದ) ಪ್ರಕಾರ (೨) ಖಂಡದ ಅಂತ ರ್ಭಾಗದೊಳಗಿನ (ಪ್ರೇಅರೀ) ಪ್ರಕಾರ.

(ಡ) ಶೀತ ಹವಾಮಾನಗಳು:—(೧) ತೈಗಾಪ್ರಕಾರ (೨) ಟಂಡ್ರಾ ಪ್ರಕಾರ; ಗುಡ್ಡಗಾಡದ ಹವಾಮಾನವು:—(೩) ತಿಬೇಟದ ಪ್ರಕಾರ (೪) ಇಕ್ವೇಡೋರದ ಪ್ರಕಾರ.

**(ಅ) ಉಷ್ಣ ಕಟಿಬಂಧದೊಳಗಿನ ಪ್ರಕಾರಗಳು.**

**(೧) ಉಷ್ಣ ಮತ್ತು ಆರ್ದ್ರವಾದ ಹವಾಮಾನವಿರುವ ವಿಷುವ-ವೃತ್ತದ ಮೇಲಿನ ಪ್ರದೇಶಗಳು** (ಅಮೇಝಾನ್ ಪ್ರಕಾರ):—ಈ ಪ್ರಕಾರದ ಹವೆಯು ದಕ್ಷಿಣ ಅಮೇರಿಕೆಯೊಳಗಿನ ಅಮೇಝಾನದ ಕೊಳ್ಳ ಮತ್ತು ಗಿಯಾನಾ, ಆಫ್ರಿಕೆಯೊಳಗಿನ ಕಾಂಗೋ ಹೊಳೆಯ ಕೊಳ್ಳದ ಪ್ರದೇಶ ಮತ್ತು ಗಿನೀ ಪ್ರಾಂತದ ಕರಾವಳಿಯು, ಏಶಿಯಾದೊಳಗಿನ ಮಲಾಯಾ ಮತ್ತು ಈಸ್ಟ ಇಂಡೀಜ ದ್ವೀಪಗಳು ಮತ್ತು ಆಸ್ಟ್ರೇಲಿಯದ ಉತ್ತರಕ್ಕಿರುವ ನ್ಯೂಗಿನೀ ದ್ವೀಪಗಳಲ್ಲಿ ಕಂಡು ಬರುತ್ತದೆ.

ವಿಷುವ-ವೃತ್ತದ ಮೇಲೆ ಹನ್ನೆರಡೂ ತಿಂಗಳು ಸೂರ್ಯನ ಕಿರಣಗಳು ಸಾಧಾರಣವಾಗಿ ಲಂಬರೂಪವಾಗಿಯೇ ಬೀಳುತ್ತವೆ. ಆದ್ದರಿಂದ ಅಲ್ಲಿಯ ಹವೆಯು ಯಾವಾಗಲೂ ಉಷ್ಣವಾಗಿರುತ್ತದೆ. ವಾರ್ಷಿಕ ಸರಾಸರೀ ಉಷ್ಣತಾಮಾನವು ಆಯಾ ಸ್ಥಳಗಳಿಗನುಸಾರವಾಗಿ ೭೫° ದಿಂದ ೮೫° ದ ವರೆಗೆ ಇರುತ್ತದೆ. ಅತಿ ಹೆಚ್ಚು ಮತ್ತು ಅತಿ ಕಡಿಮೆ ಉಷ್ಣತಾಮಾನಗಳೊಳಗಿನ ಅಂತರವು ೨° ಸಹ ಇರುವದಿಲ್ಲ. ಅಂದರೆ ಹವೆಯು ಹೆಚ್ಚಾಗಿ ಸಮ ಇರುತ್ತದೆ. ಹಗಲು ಮತ್ತು ರಾತ್ರಿಗಳ ಉಷ್ಣತಾಮಾನದೊಳಗಿನ ಅಂತರವು ಜೂನ ಮತ್ತು ಜಾನೇವರೀ ತಿಂಗಳುಗಳ ಉಷ್ಣತಾಮಾನದೊಳಗಿರುವ ಅಂತರಕ್ಕಿಂತ ಹೆಚ್ಚಾಗಿರುತ್ತದೆ. ಈ ಪ್ರದೇಶದೊಳಗೆ ಋತುಮಾನಗಳಲ್ಲಿ ಹೆಚ್ಚು ಕಡಿಮೆಯಾದದ್ದು ಕಂಡುಬರುವದಿಲ್ಲ. ಆದ್ದರಿಂದ ಇಲ್ಲಿ ಚಳಿಗಾಲವು ಇರುವದಿಲ್ಲೆಂದರೂ ಅಡ್ಡಿ ಇಲ್ಲ. ಹನ್ನೆರಡೂ ತಿಂಗಳು ಮಳೆಯು ಆಗುತ್ತಿರುತ್ತದೆ. ಇದರಿಂದ ಉಷ್ಣತಾಮಾನದ ತೀವ್ರತೆಯು ಕಡಿಮೆಯಾಗುತ್ತದೆ. ವಿಷುವ-ವೃತ್ತದ ಎರಡೂ ಬದಿಗೆ ೫° ಗಳ ವರೆಗಿನ ಪ್ರದೇಶವು ಕಡಿಮೆ ಒತ್ತುವಿಕೆಯ ಪಟ್ಟಿಯೊಳಗಿರುವದರಿಂದ, ಅಲ್ಲಿಯ ಹವೆಯು ಯಾವಾಗಲೂ 'ಊರ್ಧ್ವಗಾಮಿ' ಯಾಗಿರುತ್ತದೆ; ಅಂದರೆ

ಅದು ಒಂದೇ ಸವನೆ ಮೇಲಕ್ಕೇರುತ್ತಿರುತ್ತದೆ. ಸೂರ್ಯನ ಪ್ರಖರವಾದ ಉಷ್ಣತೆಯಿಂದ ಈ ಪ್ರದೇಶದೊಳಗಿನ ನೀರು ತೀವ್ರವಾಗಿ ಬಾಷ್ಪೀಭವನ (ಉಗಿ) ವಾಗುತ್ತದೆ. ಈ ಉಗಿಯು ಮೇಲಕ್ಕೇರುವ ಹವೆಯ ಸಂಗಡ ಆಕಾಶದೊಳಗೆ ಎತ್ತರವಾಗಿ ಹೋಗುತ್ತದೆ. ಅಲ್ಲಿರುವ ತಂಪು ವಾತಾವರಣ ದಿಂದ ಈ ಉಗಿಯು ತಂಪಾಗಲು ಮಳೆಯಾಗುತ್ತದೆ. ಈ ಪ್ರದೇಶದೊಳಗೆ ಮಳೆಯಾಗುವ ರೀತಿಯು ಬಹು ಸೋಜಿಗವಾಗಿರುತ್ತದೆ. ಮುಂಜಾವಿನಲ್ಲಿ ಆಕಾಶವು ನಿರಭ್ರವಾಗಿರುತ್ತದೆ: ಇಳಿ ಹೊತ್ತಾಗಲು ಆಕಾಶದಲ್ಲಿ ಮೋಡ ಗಳು ಕಲೆಯಲಾರಂಭಿಸುವವು. ಮತ್ತು ತುಸು ವೇಳೆಯಲ್ಲಿಯೇ ಗುಡುಗೂ, ಮಿಂಚೂ ಉತ್ಪನ್ನವಾಗಿ ಕೂಡಲೆ ಮಳೆಯ ಸರುವು ಆರಂಭವಾಗುತ್ತದೆ. ರಾತ್ರಿಯಲ್ಲಿ ಆಕಾಶವು ಪುನಃ ಸ್ವಚ್ಛವಾಗಿ ಹವೆಯೊಳಗೆ ತಂಪು ಹುಟ್ಟು ತ್ತದೆ. ಮಳೆಯು ಬಹುತರವಾಗಿ ಹನ್ನೆರಡೂ ತಿಂಗಳು ಬೀಳುತ್ತಿರುತ್ತದೆ. ಆದರೂ ಸೂರ್ಯನು ವಿಷುವ-ವೃತ್ತವನ್ನು ದಾಟಿ ಉತ್ತರಕ್ಕೂ ದಕ್ಷಿಣಕ್ಕೂ ಹೋಗ ಹತ್ತಲು, ಅಂದರೆ ಎಪ್ರೀಲ ಮತ್ತು ನೊವ್ಹೆಂಬರ ತಿಂಗಳುಗಳಲ್ಲಿ ಅದು ಹೆಚ್ಚಾಗಿ ಬೀಳುತ್ತದೆ. ಮಳೆಯ ವಾರ್ಷಿಕ ಪ್ರಮಾಣವು ಸುಮಾರು ೮೦ ಇಂಚಿನ ಮೇಲೆ ಹೋಗುತ್ತದೆ. ಹವೆಯೊಳಗಿನ ಉಷ್ಣತೆಯಿಂದಲೂ, ಆರ್ದ್ರತೆಯಿಂದಲೂ, ಅದು ನಿಶ್ಚಲವಾಗಿರುವದರಿಂದಲೂ ಈ ಪ್ರದೇಶದೊಳ ಗಿನ ಹವೆಯು ಅನಾರೋಗ್ಯಕರವಾದದ್ದೂ, ತ್ರಾಸದಾಯಕವಾದದ್ದೂ ಇರುತ್ತದೆ.

(೨) **ಕರ್ಕ ಮತ್ತು ಮಕರ ವೃತ್ತಗಳ ಹತ್ತರಿರುವ ಸುದಾನೀ ಹವೆಯ ಪ್ರದೇಶಗಳು:**—ಈ ಪ್ರದೇಶವು ಅಮೇಝೂನ ಪ್ರಕಾರದ ಉತ್ತರಕ್ಕೂ, ದಕ್ಷಿಣಕ್ಕೂ ಕರ್ಕ-ಮಕರ ವೃತ್ತಗಳ ವರೆಗೆ ಪಸರಿಸಿದ್ದು ಕಂಡುಬರುತ್ತದೆ. ದಕ್ಷಿಣ ಗೋಲಾರ್ಧದೊಳಗೆ ಅದು ನೆಟ್ಟಗೆ ಮಕರ-ವೃತ್ತದ ಹೊರಗೆ ಹೋಗುತ್ತದೆ. ಆದರೆ ಉತ್ತರ ಗೋಲಾರ್ಧದೊಳಗೆ ಕರ್ಕ-ವೃತ್ತದಿಂದ ತುಸು ದಕ್ಷಿಣಕ್ಕೆ ಉಳಿಯುತ್ತದೆ. ಈ ಪ್ರಕಾರದೊಳಗೆ ಆಫ್ರಿಕೆಯೊಳಗಿನ ಸುದಾನವೂ ಪೂರ್ವದ ಕಡೆಗಿರುವ ಎತ್ತರವಾದ ತಪ್ಪಲು ಭೂಮಿಯೂ, ಅಮೇರಿಕೆಯೊಳಗೆ ವ್ಹೆನೆಝುಏಲಾ, ಬ್ರಾಝಿಲ ಮತ್ತು ಆಸ್ಟ್ರೇಲಿಯಾದೊಳಗಿನ ನಿರ್ಜಲ ಪ್ರದೇಶದ ಈಶಾನ್ಯದ ಪಟ್ಟಿಯೂ ಬರುತ್ತವೆ.

ದಟ್ಟಾದ ಅರಣ್ಯದೊಳಗಿನ ಉಷ್ಣ ಮತ್ತು ಆರ್ದ್ರವಾದ ಹವಾಮಾನಕ್ಕೂ, ಮುಂದೆ ಹೇಳಿದ ಉಸುಬಿನ ಸಹಾರಾ ಅರಣ್ಯದೊಳಗಿನ ಉಷ್ಣ ಮತ್ತು ರುಕ್ಷವಾದ ಹವಾಮಾನಕ್ಕೂ ನಡುವಿನ ಹವಾಮಾನವು ಈ ಪ್ರದೇಶದೊಳಗೆ ಕಂಡುಬರುತ್ತದೆ. ಈ ಪ್ರದೇಶದೊಳಗಿನ ರುಕ್ಷವಾದ ಮತ್ತು ನಿರ್ಜಲವಾದ ಪ್ರದೇಶದ ಕಡೆಗಿರುವ ಭಾಗಗಳಲ್ಲಿ ಹೋದಂತೆ ಹವೆಯೊಳಗೆ ಬದಲಾಗುತ್ತ, ಅದು ಹೆಚ್ಚೆಚ್ಚು ಉಷ್ಣವಾಗಿಯೂ, ಒಣದಾಗಿಯೂ ಆಗುತ್ತ ಹೋಗುತ್ತದೆ. ಇದಕ್ಕೆ ವಿಪರೀತವಾಗಿ ದಟ್ಟಾದ ಅರಣ್ಯಗಳ ಬದಿಗೆ ಹವೆಯು ಹೆಚ್ಚಾಗಿ ಆರ್ದ್ರವಾಗುತ್ತ ಹೋಗುತ್ತದೆ. ಈ ಪ್ರದೇಶದೊಳಗೆ ಮಳೆಯು ಕೇವಲ ಬೇಸಿಗೆಯಲ್ಲಿ ಬೀಳುತ್ತದೆ; ಮತ್ತು ಚಳಿಗಾಲವು ತೀರ ಒಣದಾಗಿರುತ್ತದೆ. ಆದ್ದರಿಂದ ಇಲ್ಲಿ ಬೇಸಿಗೆ ಮತ್ತು ಚಳಿಗಾಲಗಳು ಸ್ಪಷ್ಟವಾಗಿ ಅನುಭವಕ್ಕೆ ಬರುತ್ತವೆ; ಇಲ್ಲಿ ಚಳಿಗಾಲದೊಳಗೆ ಅಷ್ಟೊಂದು ಚಳಿ ಇರುವದಿಲ್ಲ. ಹವೆಯು ಉಷ್ಣವಾಗಿರದೆ ಅದು ಬೆಚ್ಚಗೆ ಮಾತ್ರ ಆಗಿರುತ್ತದೆ. ಈ ಪ್ರದೇಶದೊಳಗೆ ಸೂರ್ಯನು ನೆತ್ತಿಯ ಮೇಲೆ ಬಂದಾಗ ಮಳೆಯಾಗುತ್ತದೆ. ಸೂರ್ಯನು ಒಂದು ಬದಿಗೆ ಸರಿಯಲಾರಂಭಿಸಲು ಮಳೆಯ ಪ್ರಮಾಣವು ಕಡಿಮೆಯಾಗಹತ್ತುತ್ತದೆ. ಇದರಿಂದ 'ಮಳೆಯು ಸೂರ್ಯನನ್ನು ಹಿಂಬಾಲಿಸುತ್ತ' ದೆಂಬ ಮಾತು ಸ್ಪಷ್ಟವಾಗುತ್ತದೆ. ಉಷ್ಣತಾಮಾನದೊಳಗಿನ ಅಂತರವು ೫ ರಿಂದ ೨೦ ಅಂಶಗಳವರೆಗೆ ಕಂಡುಬರುತ್ತದೆ. ಮಳೆಯ ಪ್ರಮಾಣವು ೧೦ ರಿಂದ ೪೦ ಇಂಚಿನವರೆಗೆ ಇರುತ್ತದೆ. ನಿರ್ಜಲ ಪ್ರದೇಶದ ಹತ್ತರಿರುವ ಭಾಗಗಳಲ್ಲಿ ೧೦ ಇಂಚಿಗಿಂತಲೂ ಕಡಿಮೆ ಮಳೆಯಾಗುತ್ತದೆ. ಆದರೆ ದಟ್ಟಾದ ಅರಣ್ಯದ ಕಡೆಗಿರುವ ಭಾಗಗಳಲ್ಲಿ ೪೦ ಇಂಚಿಗಿಂತಲೂ ಹೆಚ್ಚು ಮಳೆಯಾಗುತ್ತದೆ. ಒಟ್ಟಿನ ಮೇಲೆ ಇಲ್ಲಿಯ ಹವೆಯು ಬೇಸಿಗೆಯಲ್ಲಿ ಉಷ್ಣವಾದದ್ದೂ ಆರ್ದ್ರವಾದದ್ದೂ ಆಗಿರುತ್ತದೆ, ಮತ್ತು ಚಳಿಗಾಲದಲ್ಲಿ ಬೆಚ್ಚಗಾದದ್ದೂ ಒಣದಾದದ್ದೂ ಆಗಿರುತ್ತದೆ. ಈ ಹವಾಮಾನವು ಸುದಾನದೊಳಗೆ ಸ್ಪಷ್ಟವಾಗಿ ಕಂಡುಬರುತ್ತದೆ. ಆದ್ದರಿಂದ ಈ ಪ್ರಕಾರದ ಪ್ರದೇಶಗಳಿಗೆ 'ಸುದಾನೀ ಹವೆಯ' ಪ್ರದೇಶಗಳೆಂಬ ಹೆಸರನ್ನು ಕೊಟ್ಟಿರುತ್ತದೆ.

**(೩) ಮಾನ್ಸೂನ ಹವೆಯ ಪ್ರದೇಶಗಳು:—** ಋತುಮಾನದ ಗಾಳಿಗಳಿಂದ ಈ ಪ್ರದೇಶಗಳಿಗೆ ಈ ಹೆಸರು ಬಂದಿರುತ್ತದೆ. ಈ ಪ್ರದೇಶ

ಗಳೆಲ್ಲ ಬಹುತರವಾದ ಉಷ್ಣ ಕಟಿಬಂಧದೊಳಗೆ ಬರುತ್ತವೆ. ಅವುಗಳೊಳಗೆ ಹಿಂದುಸ್ಥಾನ, ಬ್ರಹ್ಮದೇಶ, ಇಂಡೋಚಾಯನಾ ಮತ್ತು ದಕ್ಷಿಣ ಚೀನ, ಈ ಭಾಗಗಳು ಬರುತ್ತವೆ. ಇದಲ್ಲದೆ ದಕ್ಷಿಣ ಜಪಾನ, ಆಸ್ಟ್ರೇಲಿಯಾದ ಉತ್ತರ ದಂಡೆ, ಮಡಾಗಾಸ್ಕರ ಮತ್ತು ಅದರ ಎದುರಿಗಿರುವ ಆಫ್ರಿಕೆಯ ಕರಾವಳಿಯು, ಮಧ್ಯ ಅಮೇರಿಕಾ, ಈಸ್ಟ ಇಂಡೀಜ ದ್ವೀಪಗಳು, ಗಿನೀ ಆಖಾತದ ಹತ್ತರದ ಪ್ರದೇಶಗಳು ಸಹ ಅವುಗಳೊಳಗೆ ಸಮಾವೇಶವಾಗುತ್ತದೆ.

ಸುದಾನೀ ಪ್ರಕಾರದಂತೆ ಮಾನ್ಸೂನ ಪ್ರದೇಶಗಳಿಗೆ ಸಹ ಮುಖ್ಯವಾಗಿ ಬೇಸಿಗೆಯಲ್ಲಿಯೇ ಮಳೆಯಾಗುತ್ತದೆ. ಮತ್ತು ಅದರೊಳಗಿನ ಚಳಿಗಾಲವು ಬೆಚ್ಚಗಾಗಿರುತ್ತದೆ. ಆದರೂ ಈ ಪ್ರದೇಶದೊಳಗೆ ಮಳೆಯ ಪ್ರಮಾಣವು ಹೆಚ್ಚಾಗಿರುತ್ತದೆ. ಇಲ್ಲಿ ಎರಡರ ಬದಲು ಮೂರು ಋತುಗಳು ಕಂಡುಬರುತ್ತವೆ. ಅವು ಯಾವವೆಂದರೆ ಬೇಸಿಗೆಕಾಲ, ಚಳಿಗಾಲ ಮತ್ತು ಮಳೆಗಾಲ. ಬೇಸಿಗೆಯ ಕಡೆಯ ಅರ್ಧದಲ್ಲಿ ಮಳೆಯಾಗುತ್ತದೆ. ಆದ್ದರಿಂದ ಮಳೆಗಾಲವು ಸ್ವತಂತ್ರವಾದ ಒಂದು ಋತುವೆಂದು ತಿಳಿಯಲ್ಪಡುತ್ತದೆ. ಈ ಪ್ರದೇಶದೊಳಗೆ ಒಟ್ಟಿನ ಮೇಲೆ ಸಾಕಷ್ಟು ಮಳೆಯಾಗುತ್ತದೆ. ಆದರೆ ಭೂಪೃಷ್ಠದ ರಚನೆಯಂತೆ ಅದರ ಪ್ರಮಾಣವು ಹೆಚ್ಚುಕಡಿಮೆಯಾಗುತ್ತದೆ. ಋತುಮಾನದ ಗಾಳಿಗಳನ್ನೂ ತಡೆಯುವಂಥ ಪರ್ವತಗಳಿದ್ದ ಭಾಗದೊಳಗೆ ಮಳೆಯ ಪ್ರಮಾಣವು ೮೦ ಇಂಚಿಗಿಂತ ಹೆಚ್ಚಾಗಿರುತ್ತದೆ. ಇಂಥ ಪರ್ವತಗಳ ವಿರುದ್ಧ ಬದಿಗಿರುವ ಇಳುಕಲಿನ ಭಾಗದೊಳಗೆ, ಅದು ೨೦ ರಿಂದ ೪೦ ಇಂಚಿನ ವರೆಗೆ ಇಳಿಯುತ್ತದೆ. ಋತುಮಾನದ ಮಳೆಯು ಆರಂಭವಾಗುವ ಸಮಯಕ್ಕೆ ಆಕಾಶದೊಳಗೆ ಮೇಘಗಳು ಒತ್ತರದಿಂದ ಕಲೆಯಲಾರಂಭಿಸುತ್ತವೆ; ಗುಡುಗು-ಮಿಂಚುಗಳು ಹುಟ್ಟುತ್ತವೆ; ಮತ್ತು ಮಳೆಯ ಸರವುಗಳು ಸುರಿಯ ಹತ್ತುತ್ತವೆ. ಮಳೆಗಾಲವು ಆರಂಭವಾದ ನಂತರ ಮಳೆಯು ಬಹಳ ದಿವಸಗಳ ವರೆಗೆ ಮೇಲಿಂದ ಮೇಲೆ ಬೀಳುತ್ತಿರುತ್ತದೆ.

**(೪) ಸಹಾರಾ ಅರಣ್ಯದ ಉಷ್ಣವಾದ ಮತ್ತು ಒಣದಾದ ಹವೆಯ ಪ್ರಕಾರವು :**—ಈ ಪ್ರಕಾರದ ಹವೆಯು ಕಂಡುಬರುವ ಪ್ರದೇಶಗಳು ಕರ್ಕ ಮತ್ತು ಮಕರ-ವೃತ್ತಗಳ ಆಚೆಯ ಕಡೆಗೆ ತುಸು ಅಂಶಗಳ

ವರೆಗೆ ಪಸರಿಸಿದ್ದು ಕಂಡುಬರುತ್ತವೆ. ಅವುಗಳೊಳಗೆ ಸಹಾರಾದ ಪ್ರಚಂಡವಾದ ಬೈಲು, ದಕ್ಷಿಣ ಆಫ್ರಿಕೆಯೊಳಗಿನ ಕಲಹಾರೀ ಬೈಲು, ಉತ್ತರ ಅಮೇರಿಕೆಯೊಳಗಿನ ಕೊಲೋರಡೋ ಮತ್ತು ಮೆಕ್ಸಿಕೋ, ದಕ್ಷಿಣ ಅಮೇರಿಕೆಯೊಳಗಿನ ಅಟಾಕಾಮಾ, ಏಶಿಯಾದೊಳಗಿನ ಅರಬಸ್ತಾನ ಮತ್ತು ಆಸ್ಟ್ರೇಲಿಯಾದೊಳಗಿನ ಮಧ್ಯಭಾಗ ಮತ್ತು ಪಶ್ಚಿಮ ಭಾಗಗಳು ಸಮಾವೇಶವಾಗುತ್ತವೆ.

ಜಗತ್ತಿನೊಳಗಿನ ಯಾವದೇ ಪ್ರದೇಶಕ್ಕಿಂತಲೂ ಹೆಚ್ಚಿನ ಉಷ್ಣತಾಮಾನವು ಈ ಪ್ರದೇಶದೊಳಗೆ ಕಂಡುಬರುತ್ತದೆ. ಹಗಲು ಮತ್ತು ರಾತ್ರಿ ಅದರಂತೆ ಬೇಸಿಗೆ ಮತ್ತು ಚಳಿಗಾಲಗಳಲ್ಲಿಯ ಅತಿ ಹೆಚ್ಚು ಮತ್ತು ಅತಿ ಕಡಿಮೆ ಉಷ್ಣತಾಮಾನದೊಳಗಿನ ಅಂತರವು ಬಹಳವಾಗಿರುತ್ತದೆ. ಅಂದರೆ ಅದು ೩೦-೪೦ ಅಂಶಗಳ ವರೆಗೆ ಇರುತ್ತದೆ. ತ್ರಿಪೋಲಿಯ ದಕ್ಷಿಣಕ್ಕೆ ಸಪ್ಟೆಂಬರ ತಿಂಗಳಲ್ಲಿ ಹಗಲು ೧೩೬°ಗಳ ವರೆಗೆ ಪಾರಜವು ಏರುತ್ತದೆ. ಅದೇ ರಾತ್ರಿಯಲ್ಲಿ ಶೂನ್ಯಾಂಶಕ್ಕಿಂತ ಕೆಳಗಿಳಿಯುತ್ತದೆ. ಹಗಲು ಅತಿ ಉಷ್ಣವಿರುತ್ತದೆ. ಆದರೆ ಸಂಜೆಯಾದ ಕೂಡಲೇ ಹವೆಯೊಳಗಿನ ಉಷ್ಣತೆಯು ಅತಿ ತೀವ್ರವಾಗಿ ಹೊರಟುಹೋಗುವದರಿಂದ, ಅದು ಒಮ್ಮೆಲೇ ತಂಪಾಗುತ್ತದೆ. ಮಧ್ಯ ರಾತ್ರಿಯಾದ ಮೇಲೆ ಅದು ತೀರ ಶೀತವಾಗಿ ಮುಂಜಾವಿನಲ್ಲಿ ಇಬ್ಬನ್ನಿಯು ಬೀಳುವದು. ಈ ಮರುಭೂಮಿಯಲ್ಲಿ ಮಳೆಯಾಗುವದಿಲ್ಲ. ಯಾಕೆಂದರೆ ಅದು ಹೆಚ್ಚು ಒತ್ತುವಿಕೆಯುಳ್ಳ ನಿರ್ವಾತ (ಗಾಳಿಗಳಿಲ್ಲದ) ಪ್ರದೇಶದ ನಡುವಿನ ಪಟ್ಟಿಯಲ್ಲಿರುತ್ತದೆ. ಈ ಪ್ರದೇಶದಿಂದ ಗಾಳಿಗಳು ಹೊರಗೆ ಬೀಸತೊಡಗುವವು. ಅಂದ ಮೇಲೆ ಅವು ಈ ಪ್ರದೇಶದೊಳಗೆ ಮಳೆಯನ್ನು ಹೇಗೆ ತರಬಲ್ಲವು? ತುಸು ಉಗಿಯುಳ್ಳ ಗಾಳಿಗಳು ಈ ಪ್ರದೇಶದ ಕಡೆಗೆ ಕ್ವಚಿತ್ತಾಗಿ ಎಂದಾದರೂ ಬೀಸಿದರೂ ಅಲ್ಲಿರುವ ಭಯಂಕರವಾದ ಉಷ್ಣತೆಯಿಂದ ಅವು ಮಳೆಯನ್ನು ಸುರಿಸುವ ಬದಲು, ಇದ್ದ ನೀರನ್ನೇ ಉಗಿಯ ರೂಪದಿಂದ ತಮ್ಮ ಸಂಗಡ ಹೊತ್ತೊಯ್ಯುತ್ತವೆ. ಈ ಕಾರಣದಿಂದ ಯಾವ ಭಾಗದಲ್ಲಿಯೂ ಮಳೆಯು ಪ್ರಮಾಣವು ೫ ಇಂಚಿಗಿಂತ ಹೆಚ್ಚಿಗೆ ಹೋಗುವದಿಲ್ಲ. ಕೆಲವು ಭಾಗಗಳಲ್ಲಂತೂ ಮಳೆಯೇ ಆಗುವದಿಲ್ಲ. ಈ ಪಟ್ಟಿಯೊಳಗಿನ ಹವಾಮಾನವು

ಒಟ್ಟಿನ ಮೇಲೆ ಹನ್ನೆರಡೂ ತಿಂಗಳು ಅತಿ ಉಷ್ಣವಾದದ್ದೂ ಅತಿ ಒಣದಾದದ್ದೂ ಇರುತ್ತದೆ.

**(ಬ) ಸಮಶೀತೋಷ್ಣ ಕಟಿಬಂಧದೊಳಗಿನ ಬೆಚ್ಚಗಿನ ಪಟ್ಟಿಯೊಳಗಿನ ಹವಾಮಾನದ ಪ್ರಕಾರವು.**

**(೧) ಚೀನೀ ಪ್ರಕಾರವು:**—ಈ ಪ್ರಕಾರದ ಹವಾಮಾನವು ಖಂಡದ ಪೂರ್ವ ಭಾಗದೊಳಗಿನ ಪ್ರದೇಶದೊಳಗೆ ಕಂಡುಬರುತ್ತದೆ. ಈ ಪ್ರದೇಶವು ಚೀನದ ಮಧ್ಯ ಮತ್ತು ಉತ್ತರ ಭಾಗಗಳೊಳಗೆ ಕಂಡುಬರುತ್ತದೆ. ಇದರೊಳಗೆ ಚೀನದ ಹೊರತಾಗಿ ಸಂಯುಕ್ತ ಸಂಸ್ಥಾನದ ಪೂರ್ವಭಾಗವು, ಬ್ರಾಝಿಲದ ಆಗ್ನೇಯ ಭಾಗವು, ಅದರ ಹತ್ತರದಲ್ಲಿರುವ ಪ್ಲೇಟ ಹೊಳೆಯ ಕೊಳ್ಳದ ಪ್ರದೇಶ, ಆಫ್ರಿಕೆಯೊಳಗಿನ ನಾತಾಳ ಪ್ರಾಂತ, ಮತ್ತು ಆಸ್ಟ್ರೇಲಿಯಾದೊಳಗಿನ ನ್ಯೂ ಸಾವುಥ ವೇಲ್ಸ ಮತ್ತು ವ್ಹಿಕ್ಟೋರಿಯಾ ಎಂಬ ಪ್ರಾಂತಗಳ ಸಮಾವೇಶವಾಗುತ್ತದೆ.

ಈ ಪ್ರದೇಶದೊಳಗೆ ಮಳೆಯು ಬೇಸಿಗೆಯಲ್ಲಿ ಬೀಳುತ್ತದೆ. ಮತ್ತು ಚಳಿಗಾಲವು ಬಹುತರವಾಗಿ ಒಣದಾಗಿಯೂ, ಸೌಮ್ಯವಾಗಿಯೂ ಇರುತ್ತದೆ. ಬೇಸಿಗೆಯಲ್ಲಿ ಸಮುದ್ರದ ಮೇಲಿಂದ ಭೂಮಿಯ ಕಡೆಗೆ ಬೀಸುವ ವ್ಯಾಪಾರದ ಗಾಳಿಗಳು ಮಳೆಯನ್ನು ತರುತ್ತವೆ. ಚಳಿಗಾಲದೊಳಗೆ ಗಾಳಿಗಳು ಪಶ್ಚಿಮದ ಕಡೆಯಿಂದ ಬೀಸುತ್ತವೆ; ಆದರೆ ಅವು ಖಂಡದ ಪಶ್ಚಿಮ ದಂಡೆಯಿಂದ ಬೀಸುತ್ತ ಬಂದು ಈ ಪೂರ್ವದ ಕಡೆಯ ಪ್ರದೇಶಕ್ಕೆ ತಲಪುವದರೊಳಗಾಗಿ ಬಹುತರವಾಗಿ ಒಣದಾಗಿರುತ್ತದೆ. ಆದ್ದರಿಂದ ಚಳಿಗಾಲದೊಳಗೆ ಸಹ ಮಳೆಯಾಗುವದಿಲ್ಲ. ಆದರೂ ಆ ಋತುವು ಯಾವಾಗಲೂ ಒಣದಾಗಿರುತ್ತದೆಂದು ಹೇಳಲಾಗದು. ಈ ಪ್ರದೇಶದೊಳಗಿನ ಹವಾಮಾನವು ಸಾಧಾರಣವಾಗಿ ಮಾನ್ಸೂನ ಪ್ರದೇಶದ ಹವಾಮಾನವನ್ನು ಹೋಲುತ್ತದೆ. ಆದರೆ ಉಷ್ಣತಾಮಾನವೂ ಮಳೆಯೂ ಕಡಿಮೆ ಪ್ರಮಾಣದಲ್ಲಿರುತ್ತದೆ.

**(೨) ಚಳಿಗಾಲದಲ್ಲಿ ಮಳೆಯಾಗುವ ಪ್ರದೇಶದ ಹವಾಮಾನದ ಪ್ರಕಾರವು:**—ಈ ತರದ ಹವಾಮಾನದ ಪ್ರದೇಶವು ವಿಷುವ-

ವೃತ್ತದ ಎರಡೂ ಬದಿಗೆ ೩೦ ರಿಂದ ೩೫ ಅಕ್ಷಾಂಶದ ವರೆಗಿನ ಖಂಡದ ಪಶ್ಚಿಮ ಭಾಗದಲ್ಲಿ ಕಂಡು ಬರುತ್ತದೆ. ಇದರೊಳಗಿನ ಮುಖ್ಯವಾದ ಪ್ರದೇಶವು ಭೂಮಧ್ಯ ಸಮುದ್ರದ ದಂಡೆಯು ಮೇಲಿರುವದರಿಂದ, ಈ ತರದ ಯಾವತ್ತೂ ಪ್ರದೇಶಗಳಿಗೆ ಭೂಮಧ್ಯ ಸಮುದ್ರ ದಂಡೆಯ ಪ್ರದೇಶದ ಪ್ರಕಾರವೆಂಬ ಇನ್ನೊಂದು ಹೆಸರನ್ನು ಕೊಡುವರು. ಈ ಪ್ರಕಾರದೊಳಗೆ ಭೂಮಧ್ಯ ಸಮುದ್ರದಂಡೆಯ ಪ್ರದೇಶಗಳಲ್ಲದೆ ಆಫ್ರಿಕೆಯ ನೈಋತ್ಯದ ತುದಿಯೂ, ಆಸ್ಟ್ರೇಲಿಯಾದ ನೈಋತ್ಯದ ತುದಿಯೂ, ಆಗ್ನೇಯದ ತುದಿಯ ಪಶ್ಚಿಮ ಕಡೆಯ ಭಾಗವೂ, ಉತ್ತರ ಅಮೇರಿಕೆಯೊಳಗಿನ ಕಲಿಫೋರ್ನಿಯಾದ ಮಧ್ಯಭಾಗವೂ, ದಕ್ಷಿಣ ಅಮೇರಿಕೆಯೊಳಗಿನ ಚಿಲೀ ದೇಶದ ಮಧ್ಯಭಾಗವೂ, ಅದರಂತೆ ನ್ಯೂಝೀಲಂಡದೊಳಗಿನ ಉತ್ತರ ದ್ವೀಪವೂ ಬರುತ್ತವೆ.

ವಿಷುವ-ವೃತ್ತದ ಮೇಲೆ ಸೂರ್ಯನು ಲಂಬರೂಪ-ಕಿರಣಗಳಿಂದ ಪ್ರಕಾಶಿಸುತ್ತಿರುವಾಗ, ಹೆಚ್ಚು ಒತ್ತುವಿಕೆಯ ಪಟ್ಟಿಗಳು ಅಥವಾ ನಿರ್ವಾತ ಪ್ರದೇಶಗಳು ವಿಷುವ-ವೃತ್ತದ ಎರಡೂ ಬದಿಗೆ ೩೦-೩೫ ಅಂಶ ಅಕ್ಷ-ವೃತ್ತಗಳ ನಡುವೆ ಇರುತ್ತವೆ. ಆಗ ಉತ್ತರ ಗೋಲಾರ್ಧದೊಳಗಿನ ಈ ಅಕ್ಷ-ವೃತ್ತಗಳ ನಡುವೆ ಮಳೆಯಾಗುವದಿಲ್ಲ. ೩೫ ಅಂಶದ ಆಚೆಯ ಕಡೆಗಿರುವ ಪ್ರದೇಶಗಳಿಗೆ ಪಶ್ಚಿಮ ಗಾಳಿಗಳಿಂದ ಮಳೆಯು ಸಿಗುತ್ತಿರುತ್ತದೆ. ಸೂರ್ಯನು ದಕ್ಷಿಣದ ಕಡೆಗೆ ಮಕರ-ವೃತ್ತದ ಮೇಲೆ ಬರುವ ವರೆಗೆ ನಿರ್ವಾತ ಪ್ರದೇಶದ ಪಟ್ಟಿಗಳು ಕ್ರಮೇಣ ದಕ್ಷಿಣದ ಕಡೆಗೆ ಸರಿಯುತ್ತಿರುತ್ತವೆ; ಮತ್ತು ಸೂರ್ಯನು ಮಕರ-ವೃತ್ತದ ಮೇಲೆ ಬಂದಾಗ ಅವು ೫° ದಕ್ಷಿಣಕ್ಕೆ ಸರಿದದ್ದು ಕಂಡು ಬರುತ್ತದೆ.

ಆಗ ಉತ್ತರ ಗೋಲಾರ್ಧದೊಳಗೆ ಚಳಿಗಾಲವಿರುತ್ತದೆ. ಅಲ್ಲಿಯ ಹೆಚ್ಚು ಒತ್ತುವಿಕೆಯು ಪಟ್ಟಿಯು ೨೫ ರಿಂದ ೩೦ ಅಂಶದ ವರೆಗೆ ದಕ್ಷಿಣಕ್ಕೆ ಸರಿದಿರುತ್ತದೆ. ಇದರಿಂದ ೩೦ ರಿಂದ ೩೫ ಅಕ್ಷಾಂಶಗಳ ನಡುವಿನ ಪ್ರದೇಶವು ಪಶ್ಚಿಮ ಗಾಳಿಗಳ ಮರ್ಯಾದೆಯಲ್ಲಿ ಬರುವದರಿಂದ, ಅವುಗಳಿಗೆ ಮಳೆಯು ದೊರೆಯಲಾರಂಭಿಸುವದು. ಈ ಅಕ್ಷಾಂಶಗಳ ನಡುವೆ ಭೂಮಧ್ಯ ಸಮುದ್ರ ದಂಡೆಯ ಪ್ರದೇಶಗಳೂ, ಕಲೀಫೋರ್ನಿಯಾದ

ಮಧ್ಯ ಭಾಗವೂ ಇರುತ್ತವೆ. ಮುಂದೆ ಆರು ತಿಂಗಳಿಗೆ ಸೂರ್ಯನು ಕರ್ಕ-ವೃತ್ತದ ಮೇಲೆ ಲಂಬರೂಪ ಕಿರಣಗಳಿಂದ ಪ್ರಕಾಶಿಸತೊಡಗಲು ದಕ್ಷಿಣಗೋಲಾರ್ಧದೊಳಗೆ ಚಳಿಗಾಲವು ಬರುವದು. ಮತ್ತು ೩೦° ದಿಂದ ೩೫° ದಕ್ಷಿಣ ಅಕ್ಷವೃತ್ತದೊಳಗೆ ಪಶ್ಚಿಮ ಗಾಳಿಗಳಿಂದ ಮಳೆಯಾಗುತ್ತದೆ. ಬೇಸಿಗೆಯಲ್ಲಿ ಈ ಭಾಗವು ಹೆಚ್ಚು ಒತ್ತುವಿಕೆಯ ಪ್ರದೇಶದೊಳಗೆ ಇರುವದರಿಂದ, ಅದು ಒಣದಾಗಿ ಉಳಿಯುತ್ತದೆ. ಮೇಲಿನ ಸಂಗತಿಗಳಿಂದ ಈ ಪ್ರಕಾರದ ಪ್ರದೇಶಗಳಲ್ಲಿ ಬೇಸಿಗೆಯಲ್ಲಿ ಮಳೆಯಾಗದೆ ಚಳಿಗಾಲದಲ್ಲಿ ಮಾತ್ರ ಮಳೆಯು ಏಕೆ ಆಗುತ್ತದೆಂಬುದು ಸ್ಪಷ್ಟವಾಗುತ್ತದೆ. ಈ ಪ್ರದೇಶದೊಳಗೆ ಬೇಸಿಗೆಯೊಳಗಿನ ಸರಾಸರಿ ಉಷ್ಣತಾಮಾನವು ೭೦° ರಿಂದ ೮೦°ದ ವರೆಗೆ ಹೋಗುತ್ತದೆ. ಮತ್ತು ಚಳಿಗಾಲದೊಳಗೆ ೪೫ ಅಂಶದ ವರೆಗೆ ಕೆಳಗಿಳಿಯುತ್ತದೆ. ಬೇಸಿಗೆ ಮತ್ತು ಚಳಿಗಾಲದೊಳಗಿನ ಅತಿ ಹೆಚ್ಚು ಮತ್ತು ಅತಿ ಕಡಿಮೆ ಉಷ್ಣತಾಮಾನಗಳೊಳಗಿನ ಅಂತರವು ಆಯಾ ಸ್ಥಳಗಳಿಗನುಸಾರವಾಗಿ ೨೦ ರಿಂದ ೨೫ ಅಂಶಗಳ ವರೆಗೆ ಬೀಳುತ್ತದೆ. ಮಳೆಯ ಪ್ರಮಾಣವು ೧೦ ರಿಂದ ೩೦ ಇಂಚಿನ ವರೆಗೆ ಇರುತ್ತದೆ. ಕೆಲ ಕೆಲವು ಕಡೆಯಲ್ಲಿ ೩೦ ಇಂಚಿಗಿಂತ ಹೆಚ್ಚು ಮಳೆಯಾಗುತ್ತದೆ. ಈ ಪ್ರದೇಶದೊಳಗೆ ಪಶ್ಚಿಮದಿಂದ ಪೂರ್ವದ ಕಡೆಗೆ ಹೋದಂತೆ ಮಳೆಯ ಪ್ರಮಾಣವು ಕಡಿಮೆಯಾಗುತ್ತ ಹೋಗುತ್ತದೆ. ಒಟ್ಟಿನ ಮೇಲೆ ಈ ಪ್ರದೇಶದೊಳಗೆ ಬೇಸಿಗೆಯಲ್ಲಿ ಹವೆಯು ಉಷ್ಣವಾದದ್ದೂ ಒಣದಾದದ್ದೂ ಇರುವದು. ಚಳಿಗಾಲವಲ್ಲಿ ಅದು ಬೆಚ್ಚಗಾದದ್ದೂ, ಆರ್ದ್ರವಾದದ್ದೂ ಇರುತ್ತದೆ. ಆಕಾಶವು ನಿರಭ್ರವಾಗಿರುತ್ತದೆ. ಆದ್ದರಿಂದ ರಾತ್ರಿಯಲ್ಲಿ ಹಿಟ್ಟು ಚಲ್ಲಿದ ಹಾಗೆ ಬೆಳದಿಂಗಳು ಬೀಳುತ್ತದೆ. ಮತ್ತು ಹವೆಯಲ್ಲಿ ತಂಪು ಹುಟ್ಟುತ್ತದೆ. ಹಗಲು ಬಹಳ ಸೆಕೆಯಾಗುತ್ತದೆ. ಮಳೆಯು ಜಿಟಿಜಿಟಿಯಾಗದೆ ಅದರ ದೊಡ್ಡ ದೊಡ್ಡ ಸರವುಗಳಾಗುತ್ತವೆ. ಮಳೆಯ ಸರವು ಬಿದ್ದ ಬಳಿಕ ಕೂಡಲೇ ಆಕಾಶವು ಸ್ವಚ್ಛವಾಗುತ್ತದೆ.

**(೩) ಬಂಜೆ ಮತ್ತು ಅರ್ಧಮರ್ಧ ಬಂಜೆಯ-ಬೈಲಿನ (ಇರಾಣಿ) ಪ್ರಕಾರವು :**—ಈ ಪ್ರಕಾರದ ಹವೆಯ ಪ್ರದೇಶವು ಎತ್ತರವಾದ ತಪ್ಪಲುಗಳ ಮೇಲೆ ಕಂಡುಬರುತ್ತದೆ. ಅದರೊಳಗೆ ಇರಾಣ, ಆರ್ಮೇ

ನಿಯಾ, ಕುರ್ದಿಸ್ಥಾನಗಳು ಕೂಡಿಕೊಂಡು ಆದ ತಪ್ಪಲು, ಅಫಗಾಣಿಸ್ಥಾನ, ಬಲುಚಿಸ್ಥಾನ, ತಾರೀಮುದ ಎತ್ತರವಾದ ಕೊಳ್ಳ, ಗೋಬಿ ಅರಣ್ಯ, ಮಧ್ಯ ಮೆಕ್ಸಿಕೋದ ತಪ್ಪಲು, ಸಂಯುಕ್ತ ಸಂಸ್ಥಾನದೊಳಗಿನ ಪಶ್ಚಿಮದ ತಪ್ಪಲು, ಆಗ್ನೇಯ ಆಫ್ರಿಕೆಯೊಳಗಿನ ವ್ಹೆಲ್ಡದ ತಪ್ಪಲು ಮುಂತಾದ ಭಾಗಗಳು ಬರುತ್ತವೆ.

ಈ ಪ್ರದೇಶದ ಹವಾಮಾನವು ಬಹಳ ವಿಷಮವಾಗಿರುತ್ತವೆ. ಈ ಪ್ರದೇಶಗಳು ಖಂಡದ ಅಂತರ್ಭಾಗದಲ್ಲಿರುವದರಿಂದ ಅಲ್ಲಿ ಮಳೆಯ ಪ್ರಮಾಣವು ತೀರ ತುಸು ಇರುತ್ತದೆ. ಮಳೆಯು ಕೇವಲ ಬೇಸಿಗೆಯಲ್ಲಿ ಬೀಳುತ್ತದೆ. ಆಫ್ರಿಕೆಯೊಳಗಿನ ವ್ಹೆಲ್ಡದ ಮೇಲೆ ೨೦ ರಿಂದ ೩೦ ಇಂಚಿನ ವರೆಗೆ ಮಳೆಯಾಗುತ್ತದೆ. ಆದರೆ ತಾರೀಮು ಕೊಳ್ಳದೊಳಗಿನ ಕಾಶಗಡ ಎಂಬಲ್ಲಿ ಕೇವಲ ಮೂರೇ ಇಂಚು ಮಳೆಯಾಗುತ್ತದೆ.

**ತುರಾಣೀ ಪ್ರಕಾರವು:**—ಈ ಪ್ರಕಾರದೊಳಗೆ ಖಂಡದ ಅಂತರ್ಭಾಗದೊಳಗಿನ ತಗ್ಗು ಬೈಲುಗಳು ಸಮಾವೇಶವಾಗುತ್ತವೆ. ಇದರೊಳಗೆ ಮಿಸಿಸಿಪಿ ಹೊಳೆಯ ಕೊಳ್ಳದ ಕೆಲವು ಭಾಗವೂ, ದಕ್ಷಿಣ ಅಮೇರಿಕೆಯೊಳಗಿನ ಪಂಪಾಸ ಎಂಬ ಹೆಸರಿನ ಹುಲ್ಲು ಪ್ರದೇಶವೂ, ಕಾಸ್ಪಿಯನ್ ಸಮುದ್ರದ ಹತ್ತರದ ಪ್ರದೇಶವೂ ಆಸ್ಟ್ರೇಲಿಯಾದೊಳಗಿನ ಮರೆ-ಡಾರ್ಲಿಂಗದ ಕೊಳ್ಳದ ತಗ್ಗು ಪ್ರದೇಶವೂ ಬರುತ್ತವೆ.

ಈ ಪ್ರಕಾರದ ಹವೆಯು ಕಾಸ್ಪಿಯನ್ ಸಮುದ್ರದ ಪೂರ್ವಕ್ಕಿರುವ ತಾರ್ತರೀ ಅಥವಾ ತುರಾಣ ದೇಶದೊಳಗೆ ಮುಖ್ಯವಾಗಿ ಕಂಡು ಬರುವದರಿಂದ, ಅದಕ್ಕೆ ತುರಾಣೀ ಪ್ರಕಾರವೆಂಬ ಹೆಸರು ಕೊಡಲ್ಪಟ್ಟಿರುತ್ತದೆ. ಈ ಪ್ರದೇಶವು ಖಂಡದ ಮಧ್ಯಭಾಗದಲ್ಲಿರುವದರಿಂದ ಅಲ್ಲಿಯ ಹವಾಮಾನವು ವಿಷಮವಾಗಿರುತ್ತದೆ. ಹೆಚ್ಚು ವಿಷಮವಾಗಿದ್ದ ಹವೆಯ ಪ್ರದೇಶದೊಳಗೆ ಬಂಜೆಯಾದ ಇಲ್ಲವೆ ಅರ್ಧಮರ್ಧ ಬಂಜೆಯಾದ ಬೈಲುಗಳ ನಿರ್ಮಾಣವಾಗಿರುತ್ತವೆ. ಯಾಕಂದರೆ ಅಲ್ಲಿ ತೀರ ತುಸು ಮಳೆಯಾಗುತ್ತದೆ. ಸಮುದ್ರದ ಮೇಲಿಂದ ಬರುವ ಗಾಳಿಗಳು ಖಂಡಗಳ ಮಧ್ಯದಲ್ಲಿರುವ ಈ ಪ್ರದೇಶಗಳ ವರೆಗೆ ಮಳೆಯನ್ನು ಒಯ್ಯುವದಿಲ್ಲ. ತುಸು ಮಳೆಯಾದರೂ ಅದು ಬೇಸಿಗೆಯಲ್ಲಿ ಆಗುತ್ತದೆ. ಅತಿ ಶೀತವಾದ ಭಾಗದೊಳಗೆ

ಚಳಿಗಾಲದಲ್ಲಿ ಹಿಮವು ಬೀಳುತ್ತದೆ. ಬೇಸಿಗೆಯಲ್ಲಿ ಅದು ಕರಗುವದರಿಂದ ಸುತ್ತಮುತ್ತಲಿನ ಪ್ರದೇಶಗಳಿಗೆ ತುಸು ಹಸಿಯು ದೊರೆಯುತ್ತದೆ.

**(ಕ) ಸಮಶೀತೋಷ್ಣ ಕಟಿಬಂಧದ ತಂಪು ಪಟ್ಟಿಯೊಳಗಿನ ಹವಾಮಾನದ ಪ್ರಕಾರವು.**

**(೧) ಪಶ್ಚಿಮ ಯುರೋಪ ಖಂಡದೊಳಗಿನ ಹವಾಮಾನದ ಪ್ರಕಾರವು :**—ಈ ಪ್ರಕಾರವು ೪೫° ದ ಆಚೆಯ ಕಡೆಯ ಅಕ್ಷ-ವೃತ್ತಗಳ ಮೇಲೆ ಖಂಡದ ಪಶ್ಚಿಮ ಭಾಗದೊಳಗೆ ಕಂಡು ಬರುತ್ತದೆ. ಅದರೊಳಗೆ ಸ್ಕಂಡೀನೇವ್ಹಿಯಾದ ಹೊರ್ತಾಗಿ ಉಳಿದ ಯುರೋಪ ವಾಯುವ್ಯ ಭಾಗವೂ, ಬ್ರಿಟಿಶ ಕೋಲಂಬಿಯಾ, ದಕ್ಷಿಣ ಚೀಲೀ, ನ್ಯೂಝೀಲಂಡದ ದಕ್ಷಿಣ ದ್ವೀಪ ಮತ್ತು ಟಾಸ್ಮಾನಿಯಾ ಈ ಪ್ರದೇಶಗಳು ಬರುತ್ತವೆ.

ಈ ಪ್ರದೇಶದೊಳಗೆ ಮುಖ್ಯವಾಗಿ 'ಮಹಾಸಾಗರ'ದ ಹವಾಮಾನವು ಕಂಡು ಬರುತ್ತದೆ. ಉಷ್ಣತೆಯು ೬೦°ದ ಆಚೆಗೆ ಬಹುತರವಾಗಿ ಹೋಗುವದೇ ಇಲ್ಲ. ಸಮುದ್ರ ಸಾಮೀಪ್ಯದಿಂದ ಹವೆಯು ಸಮವಾಗಿರುತ್ತದೆ. ಈ ಪ್ರದೇಶಗಳ ಬದಿಯಿಂದ ಹರಿಯುವ ಉಷ್ಣ ಪ್ರವಾಹದಿಂದ ಚಳಿಗಾಲದ ಹವಾಮಾನದೊಳಗೆ ಹೆಚ್ಚು ಕಾವು ಬರುತ್ತದೆ. ಬರ್ಗೆನ್ ಹಮರ ಫೇಸ್ಟಗಳಂಥ ಬಂದರಗಳು ಚಳಿಗಾಲದೊಳಗೆ ಸಹ ಹೆಪ್ಪುಗಟ್ಟದೆ ತೆರೆದಿರುತ್ತವೆ. ಅಂತರ್ಭಾಗದೊಳಗೆ ಹೋದ ಹಾಗೆ ಹವೆಯು ವಿಷಮವಾಗುತ್ತ ಹೋಗುತ್ತದೆ. ಈ ಪ್ರಕಾರದ ಪ್ರದೇಶದೊಳಗೆ ಪಶ್ಚಿಮದ ಬೆಚ್ಚಗಿನ ಮತ್ತು ಆರ್ದ್ರವಾದ ಗಾಳಿಗಳಿಂದ ಹನ್ನೆರಡೂ ತಿಂಗಳೂ ಮಳೆಯಾಗುತ್ತದೆ. ಮಳೆಯ ಪ್ರಮಾಣವು ೨೫ ರಿಂದ ೫೦ ಇಂಚಿನ ವರೆಗೆ ಇರುತ್ತದೆ. ಪೂರ್ವ ಭಾಗದೊಳಗೆ ಅದು ಕಡಿಮೆಯಾಗುತ್ತ ಹೋಗುತ್ತದೆ.

**(೨) ಖಂಡದ ಅಂತರ್ಭಾಗದೊಳಗಿನ ಪ್ರೇಅರೀ ಪ್ರಕಾರವು:**- ಉತ್ತರ ಅಮೇರಿಕಾ ಮತ್ತು ಯುರೇಶಿಯಾಗಳ ಮಧ್ಯ ಭಾಗಗಳಲ್ಲಿ ೪೫° ಅಕ್ಷ-ವೃತ್ತದ ಉತ್ತರಕ್ಕೆ ಈ ಪ್ರಕಾರದ ಹವಾಮಾನದ ಪ್ರದೇಶಗಳು ಕಂಡು ಬರುತ್ತವೆ. ಯುರೇಶಿಯಾದೊಳಗೆ ಈ ಪ್ರದೇಶವು ಫ್ರಾನ್ಸದ

ಪೂರ್ವ ಭಾಗದಲ್ಲಿ ಆರಂಭವಾಗಿ, ಅದು ನೆಟ್ಟಗೆ ಪೂರ್ವಕ್ಕೆ ಬೈಕಲ್ ಸರೋವರದ ವರೆಗೆ ಹಬ್ಬಿರುತ್ತದೆ: ಮೊಂಗೋಲಿಯಾ ಮತ್ತು ಮಂಚೂರಿಯಾಗಳೊಳಗಿನ ತಗ್ಗು ಪ್ರದೇಶಗಳು ಇದೇ ಪ್ರಕಾರದೊಳಗೆ ಬರುತ್ತವೆ. ಕಾನಡಾ ಮತ್ತು ಸಂಯುಕ್ತ ಸಂಸ್ಥಾನಗಳೊಳಗಿನ ಈ ಪ್ರದೇಶಗಳಿಗೆ 'ಪ್ರೇಅರೀ' ಎಂದೆನ್ನುತ್ತಾರೆ.

ಈ ಪ್ರದೇಶವು ವಿಷುವ-ವೃತ್ತದಿಂದ ದೂರದಲ್ಲಿ ಮತ್ತು ಖಂಡದ ಮಧ್ಯಭಾಗದಲ್ಲಿರುವದರಿಂದ, ಅಲ್ಲಿಯ ಹವೆಯು ತೀರ ವಿಷಮವಿದ್ದು, ಮಳೆಯಾದರೂ ತೀರ ತುಸು ಆಗುತ್ತದೆ. ಪಶ್ಚಿಮದ ಕಡೆಯಿಂದ ಪೂರ್ವದ ಕಡೆಗೆ ಮಳೆಯ ಪ್ರಮಾಣವು ಕಡಿಮೆಯಾಗುತ್ತ ಹೋಗುತ್ತದೆ. ಒಟ್ಟು ೧೦ ರಿಂದ ೩೦ ಇಂಚಿನ ವರೆಗೆ ಮಳೆಯಾಗುತ್ತದೆ. ಮತ್ತು ಅದು ಮುಖ್ಯವಾಗಿ ಬೇಸಿಗೆಯಲ್ಲಿ ಆಗುತ್ತದೆ. ಚಳಿಗಾಲವು ಅತಿ ಶೀತವಾದದ್ದೂ ದೀರ್ಘವಾದದ್ದೂ ಇರುತ್ತದೆ. ಬೇಸಿಗೆಯು ಸಣ್ಣದಾಗಿದ್ದರೂ ಸಾಕಷ್ಟು ಬೆಚ್ಚಗಾಗಿರುತ್ತದೆ; ಕೆಲಕೆಲವು ಕಡೆಯಲ್ಲಿ ಉಷ್ಣತಾಮಾನವು ೬೫ ಅಂಶಗಳ ವರೆಗೆ ಹೋಗುತ್ತದೆ; ಆದರೆ ಅದು ಚಳಿಗಾಲದೊಳಗೆ ೨ ಅಂಶಗಳ ವರೆಗೆ ಇಳಿಯುತ್ತದೆ. ಅತಿ ಹೆಚ್ಚು ಮತ್ತು ಅತಿ ಕಡಿಮೆ ಉಷ್ಣತಾಮಾನಗಳೊಳಗಿನ ಅಂತರವು ಆಯಾ ಸ್ಥಳಗಳಿಗನುಸಾರವಾಗಿ ೫೦ ರಿಂದ ೬೦ ಅಂಶಗಳ ವರೆಗೆ ಇರುತ್ತದೆ.

## (ಡ) ಶೀತ ಹವಾಮಾನದ ಪ್ರಕಾರವು.

**(೧) ತೈಗಾ ಪ್ರಕಾರವು :**—ಈ ಪ್ರಕಾರದ ಹವೆಯ ಪ್ರದೇಶವು ಕೇವಲ ಉತ್ತರ ಗೋಲಾರ್ಧದೊಳಗೆ ಕಂಡುಬರುತ್ತದೆ. ದಕ್ಷಿಣ ಗೋಲಾರ್ಧದೊಳಗೆ ಈ ಪ್ರಕಾರದ ಹವೆಯ ಭೂಭಾಗವು ಇರುವದಿಲ್ಲ. ಕಾನಡಾದೊಳಗೆ ಈ ಪ್ರದೇಶವು ಅಲಾಸ್ಕಾದಿಂದ ಸೆಂಟ ಲಾರೆನ್ಸ ಹೊಳೆಯ ಮುಖದ ವರೆಗೆ, ಆದರಂತೆ ಯುರೇಶಿಯಾದೊಳಗೆ ಸ್ವೀಡನದಿಂದ ಕಾಮಶ್ಚಾಟಕದ ದ್ವೀಪಕಲ್ಪದ ವರೆಗೆ ಹಬ್ಬಿರುತ್ತದೆ.

ಈ ಪ್ರದೇಶದೊಳಗೆ ಬೇಸಿಗೆಯು ತೀರ ಸಣ್ಣದೂ ಚಳಿಗಾಲವು ಅತಿ ದೊಡ್ಡದೂ ಆಗಿರುತ್ತವೆ. ಬೇಸಿಗೆಯ ದಿವಸಗಳು ಕಡಿಮೆಯಾಗಿದ್ದರೂ ಕೂಡ ಪ್ರತಿ ದಿವಸ ಸೂರ್ಯನು ೧೮ ತಾಸುಗಳಿಗಿಂತ ಹೆಚ್ಚು ವೇಳೆಯು

ವರೆಗೆ ಪ್ರಕಾಶಿಸುತ್ತಿರುವದರಿಂದ ಈ ಋತುವಿನಲ್ಲಿ ಸಾಕಷ್ಟು ಉಷ್ಣತೆಯು ಸಿಗುತ್ತದೆ. ಎಷ್ಟೋ ಸ್ಥಳಗಳಲ್ಲಿ ಸರಾಸರೀ ಉಷ್ಣತಾಮಾನವು ೬೦ ದ ಮೇಲೆ ಹೋದರೂ ಚಳಿಗಾಲದಲ್ಲಿ ಅದು ೧೫-೨೦ ಅಂಶಗಳ ವರೆಗೆ ಇಳಿಯುತ್ತದೆ. ಅತಿ ಹೆಚ್ಚು ಮತ್ತು ಅತಿ ಕಡಿಮೆ ಉಷ್ಣತಾಮಾನಗಳೊಳಗೆ ಬಹಳ ಅಂತ ರವು ಬೀಳುತ್ತದೆ. ಮಳೆಯು ೨೦ ಇಂಚಿಗಿಂತ ಕಡಿಮೆಯಾಗುತ್ತದೆ. ಹಲವು ತಿಂಗಳುಗಳಲ್ಲಿ ಮಳೆಯಾಗದೆ ಹಿಮವು ಬೀಳುತ್ತದೆ. ವರುಷದಲ್ಲೆಲ್ಲ ತುಸು ತುಸು ಮಳೆಯಾಗುತ್ತಿದ್ದರೂ ಬೇಸಿಗೆಯೊಳಗೆ ಅದು ಹೆಚ್ಚಾಗಿ ಬೀಳುತ್ತದೆ.

**(೨) ಟಂಡ್ರಾ ಪ್ರಕಾರ :**—ಈ ಪ್ರಕಾರದ ಪ್ರದೇಶವು ಆರ್ಕ್ಟಿಕ್ ಮಹಾಸಾಗರದ ದಂಡೆಗುಂಟ ಕಾನಡಾ ಮತ್ತು ಯುರೇಶಿಯಾದ ಉತ್ತರ ಭಾಗದೊಳಗೆ ಪಸರಿಸಿರುತ್ತದೆ.

ಈ ಪ್ರದೇಶವು ಚಳಿಗಾಲದೊಳಗೆ ೮-೧೦ ತಿಂಗಳುಗಳ ವರೆಗೆ ಹಿಮ ದಿಂದಲೂ, ಬರ್ಫದಿಂದಲೂ ಎಷ್ಟೋ ಫೂಟು ದಪ್ಪಾದ ಆವರಣದಿಂದ ಆಚ್ಛಾದಿತವಾಗಿರುತ್ತದೆ. ಆ ಕಾಲಕ್ಕೆ ನೋಡಿದತ್ತೆಲ್ಲ ದಟ್ಟಾದ ಮಂಜು ಹಬ್ಬಿರುತ್ತದೆ. ಮತ್ತು ನಡುನಡುವೆ ಹಿಮವು ಬೀಳುತ್ತಿರುತ್ತದೆ. ಹವೆಯು ಅತಿ ಶೀತವಾಗಿರುತ್ತದೆ. ಉಷ್ಣತಾಮಾನವು ಶೂನ್ಯಾಂಶಕ್ಕಿಂತಲೂ ಎಷ್ಟೋ ಅಂಶಗಳ ವರೆಗೆ ಕೆಳಗೆ ಇಳಿದಿರುತ್ತದೆ. ಆಗ ಸೂರ್ಯನು ಎಷ್ಟೋ ದಿವಸ ಗಳ ವರೆಗೆ ಕ್ಷಿತಿಜದ ಮೇಲೆ ಕಾಣುವದಿಲ್ಲ. ಬೇಸಿಗೆಯು ೨-೩ ತಿಂಗಳು ಮಾತ್ರ ಇರುತ್ತದೆ. ಆಗ ಉಷ್ಣತಾಮಾನವು ೫೦ ಅಂಶಗಳ ವರೆಗೆ ಇರುವದು. ಮತ್ತು ಹವೆಯಲ್ಲಿ ತುಸು ಮಟ್ಟಿಗೆ ಉಬ್ಬಸವು ಬರುತ್ತದೆ.

**(೩) ತಿಬೇಟದ ಪ್ರಕಾರ:**—ಈ ಪ್ರಕಾರವು ಅಂತರ್ಭಾಗದೊಳಗಿನ ಅತಿ ಉನ್ನತವಾದ ತಪ್ಪಲಿನ ಮೇಲೆ ಕಂಡುಬರುತ್ತದೆ. ಇದರೊಳಗೆ ತಿಬೇಟದ ಉನ್ನತವಾದ ತಪ್ಪಲು, ಮತ್ತು ಪೇರೂ, ಬೋಲಿವ್ಹಿಯಾದ ತಪ್ಪಲುಗಳ ಸಮಾವೇಶವಾಗುತ್ತದೆ.

ನಿಜವಾಗಿ ಈ ತಪ್ಪಲುಗಳು ಉಷ್ಣಕಟಿಬಂಧದೊಳಗೆ ಇರುತ್ತವೆ. ಆದರೆ ಅವುಗಳ ಎತ್ತರವು ಸಮುದ್ರ ಸಪಾಟಿಯಿಂದ ಎರಡು ಮೈಲುಗಳಿಗಿಂತ ಹೆಚ್ಚಾಗಿರುವದರಿಂದ, ಅಲ್ಲಿಯ ಹವೆಯು ತೀರ ತಂಪಾಗಿರುತ್ತದೆ. ಇಲ್ಲಿಯ

ಚಳಿಗಾಲವು ಅತಿ ಶೀತವಾದರೂ ಬೇಸಿಗೆಯು ಬೆಚ್ಚಗಾದದ್ದೂ ಇರುತ್ತದೆ. ಮಳೆಯು ಬೇಸಿಗೆಯಲ್ಲಿ ಆಗುತ್ತದೆ. ಮತ್ತು ಅದರ ಪ್ರಮಾಣವು ತೀರ ತುಸು ಇರುತ್ತದೆ. ಬೋಲಿವ್ಹಿಯಾದ ತಪ್ಪಲವು ಸಮುದ್ರದ ಸಮೀಪದ ಲ್ಲಿರುವದರಿಂದ, ಅಲ್ಲಿಯ ಹವೆಯು ಸಾಕಷ್ಟು ಸಮವಾಗಿರುತ್ತದೆ. ಉಳಿದ ಕಡೆಯ ಹವೆಯು ಬಹಳ ವಿಷಮವಾಗಿರುತ್ತದೆ.

**(೪) ಇಕ್ವೇಡೋರದ ಪ್ರಕಾರ:**—ಈ ಪ್ರದೇಶವು ದಕ್ಷಿಣ ಅಮೇರಿಕೆಯೊಳಗೆ ವಿಷುವ–ವೃತ್ತದ ಮೇಲೆ ಇಕ್ವೇಡೋರ ಮತ್ತು ಕೋಲಂಬಿಯಾದ ಕೆಲ ಭಾಗದೊಳಗಿನ ಎತ್ತರವಾದ ತಪ್ಪಲಿನ ಮೇಲೆ ಪಸರಿಸಿರುತ್ತದೆ. ಈ ತಪ್ಪಲುಗಳು ೮ ರಿಂದ ೧೦ ಸಾವಿರ ಫೂಟು ಎತ್ತರ ವಾಗಿರುತ್ತವೆ.

ಮೇಲಿನ ಪ್ರದೇಶಗಳು ವಿಷುವ-ವೃತ್ತದ ಮೇಲಿರುವದರಿಂದ ಅಲ್ಲಿಯ ಅತಿ ಹೆಚ್ಚು ಮತ್ತು ಅತಿ ಕಡಿಮೆ ಉಷ್ಣತಾಮಾನಗಳೊಳಗಿನ ಅಂತರವು ಬಹಳವಾದರೆ ಒಂದು ಅಂಶವಿರುತ್ತದೆ. ಇಷ್ಟು ಅದು ಸಮವಾಗಿರುತ್ತದೆ. ಎತ್ತರವಾಗಿರುವದರಿಂದ ಉಷ್ಣತಾಮಾನವು ಕಡಿಮೆಯಾಗಿರುತ್ತದೆ. ಹನ್ನೆರಡೂ ತಿಂಗಳು ಸಾಕಷ್ಟು ಮಳೆಯಾಗಿರುತ್ತದೆ. ಮಳೆಯ ಪ್ರಮಾ ಣವು ಆಯಾ ಸ್ಥಳಗಳಿಗನುಸಾರವಾಗಿ, ೪೦ ರಿಂದ ೬೫ ಇಂಚಿನ ವರೆಗೆ ಹೋಗುತ್ತದೆ. ಒಟ್ಟಿನ ಮೇಲೆ ಇಲ್ಲಿಯ ಹವೆಯು ಹನ್ನೆರಡೂ ತಿಂಗಳು ವಸಂತಕಾಲದ ಹವಾಮಾನದಂತೆ ಬಹು ಆಲ್ಹಾದಕರವಾಗಿರುತ್ತದೆ. ಕ್ವಿಟೋ ಎಂಬ ಪಟ್ಟಣವು ಸರಿಯಾಗಿ ವಿಷುವ-ವೃತ್ತದ ಮೇಲಿದ್ದರೂ, ಅಲ್ಲಿಯ ಹವೆಯು ಯಾವಾಗಲೂ ತಂಪಾಗಿರುತ್ತದೆ. ಈ ಪ್ರದೇಶ ದೊಳಗಿನ ಅತಿ ಹೆಚ್ಚಾದ ಉಷ್ಣತಾಮಾನವು ೫೫°ದ ಆಚೆಗೆ ಎಂದೂ ಹೋಗುವದಿಲ್ಲ.

ಮೇಲೆ ವರ್ಣಿಸಿದ ಹವಾಮಾನದ ಪ್ರದೇಶಗಳನ್ನು ಸಂಗಡ ಕೊಟ್ಟ ನಾಲ್ಕು ನಕಾಶೆಗಳಲ್ಲಿ ತೋರಿಸಿರುತ್ತದೆ. ಅವುಗಳನ್ನು ಚೆನ್ನಾಗಿ ನೋಡಬೇಕು.

೨೯ನೇ ಪ್ರಕರಣ

# ಭೂಪೃಷ್ಠದ ಮೇಲಿನ ಸಸ್ಯಾದಿಗಳ (ವನಸ್ಪತಿಗಳ) ವಿಭಾಗಣಿಯು

ಪೃಥ್ವಿಯ ಪೃಷ್ಠ ಭಾಗದ ಮೇಲೆ ಬೇರೆ ಬೇರೆ ಸ್ಥಳಗಳಲ್ಲಿ ಬೇರೆ ಬೇರೆ ತರದ ಸಸ್ಯಾದಿಗಳು (ಗಿಡಗಂಟಿಗಳು ಹುಲ್ಲು ಮುಂತಾದವುಗಳು) ಬೆಳೆದದ್ದು ಕಂಡುಬರುತ್ತದೆ. ಅತಿ ಉಷ್ಣ ಪ್ರದೇಶದೊಳಗೆ ಎತ್ತರವಾದ ದೊಡ್ಡ ದೊಡ್ಡ ವೃಕ್ಷಗಳ ದಟ್ಟಾದ ಅರಣ್ಯಗಳಿರುತ್ತವೆ. ಅದೇ ಸಹಾರಾ ದಂಥ ಉಸುಬಿನ ಬೈಲಿನೊಳಗೆ ಸಸ್ಯಾದಿಗಳ ಅಭಾವವಿರುತ್ತದೆ. ಕೆಲವು ಕಡೆಯಲ್ಲಿ ಡಬ್ಬಣದಂಥ ಎಲೆಗಳುಳ್ಳ ಗಿಡಗಳು ಕಂಡುಬಂದರೆ, ಇನ್ನೊಂದು ಕಡೆಯಲ್ಲಿ ಹಾವಸೆಯೂ, ಬೇರೆ ಕಡೆಯಲ್ಲಿ ಕೇವಲ ಹುಲ್ಲು ಬೆಳೆಯುವದೂ ಕಂಡುಬರುತ್ತದೆ. ಹುಲ್ಲು ಸಹ ಕೆಲವು ಕಡೆಯಲ್ಲಿ ಎತ್ತರವಾಗಿಯೂ, ಬೇರೊಂದು ಕಡೆಯಲ್ಲಿ ಗಿಡ್ಡಾಗಿಯೂ ಬೆಳೆಯುತ್ತದೆ. ಈ ರೀತಿಯಿಂದ ಸಸ್ಯಾದಿಗಳಲ್ಲಿ ಸ್ಥೂಲಮಾನದಿಂದ ಬೇರೆಬೇರೆ ವರ್ಗಗಳು ಕಂಡುಬರುತ್ತವೆ. ಈ ಹೆಚ್ಚು ಕಡಿಮೆಯು ಭೂಮಿ, ಸೂರ್ಯನ ಬಿಸಿಲು, ಉಷ್ಣತೆ, ಆರ್ದ್ರತೆ ಮತ್ತು ಗಾಳಿಗಳ ಮೇಲೆ ಅವಲಂಬಿಸಿರುತ್ತದೆ. ರೇವೆಯ ನೆಲದಲ್ಲಿ ಹೆಚ್ಚು ವಿಸ್ತಾರವಾಗಿ ಹಬ್ಬಿದ ಗಿಡಗಳು ಬೆಳೆಯಬಹುದು ಆದರೆ ಅದು ಉಸು ಬಿನ ಭೂಮಿಯಲ್ಲಿ ಬೆಳೆಯಲಾರದು. ಉಷ್ಣ ಹವೆಯಲ್ಲಿ ಬೆಳೆಯುವ ಮಾವಿನ ಗಿಡವನ್ನು ಉತ್ತರ ಕಾನಡಾದೊಳಗಿನ ಅರಣ್ಯದೊಳಗೆ ಬೆಳೆಯಿಸ ಲಿಕ್ಕೆ ಪ್ರಯತ್ನಿಸಿದರೆ ಆ ಗಿಡವು ಸಾಯುವದು. ಸಾಕಷ್ಟು ನೀರಿನ ಮೇಲೆ ಬೆಳೆಯುವಂಥ ಬಾಳೇ ಗಿಡಗಳಿಗೆ ನೀರಿನ ಪೂರೈಕೆಯು ಕಡಿಮೆಯಾದರೆ ಬೆಳೆಯಲಾರವು. ಬಿರುಗಾಳಿಗಳು ಬೀಸುವ ಸ್ಥಳಗಳಲ್ಲಿ ಹತ್ತಿಯು ಬೆಳೆಯು ವದಿಲ್ಲ. ಅತಿ ಶೀತವಾದ ಹವೆಯ ಪ್ರದೇಶದಲ್ಲಿ ದ್ರಾಕ್ಷಿಯ ಬಳ್ಳಿಯನ್ನು

ಹಚ್ಚಿದರೆ ಅದು ಚಳಿಯಿಂದ ಬಿರಿತು ಸತ್ತು ಹೋಗುವದು. ಇದರ ಮೇಲಿಂದ ವಿಶಿಷ್ಟವಾದ ವನಸ್ಪತಿಗಳು ವಿಶಿಷ್ಟವಾದ ಹವೆಯೊಳಗಷ್ಟೇ ಬೆಳೆಯುತ್ತವೆಂಬುದು ಅನುಭವಕ್ಕೆ ಬರುತ್ತದೆ.

ಸಸ್ಯಾದಿಗಳು ಬೇರೆ ಯಾವದೇ ಸಂಗತಿಗಳಿಗಿಂತ ಹವಾಮಾನದ ಮೇಲೆ ವಿಶೇಷವಾಗಿ ಅವಲಂಬಿಸಿರುತ್ತವೆ. ಹವಾಮಾನದ ವರ್ಗೀಕರಣವನ್ನು ಮಾಡುವಂತೆ ಆಯಾ ತರದ ಹವೆಯ ಮೇಲೆ ಅವಲಂಬಿಸಿರುವ ಸಸ್ಯಾದಿಗಳ ವರ್ಗೀಕರಣವನ್ನು ಸಹ ಮಾಡಬಹುದು. ಈ ರೀತಿಯಿಂದ ವರ್ಗೀಕರಣವನ್ನು ಮಾಡಿದರೆ ಪೃಥ್ವಿಯ ಮೇಲಿನ ಮುಖ್ಯವಾದ ವನಸ್ಪತಿ ವರ್ಗಗಳು ಯಾವವಿರುತ್ತವೆಂಬದು ಗೊತ್ತಾಗುವದಲ್ಲದೆ, ಅದರಿಂದ ಇಡೀ ಜಗತ್ತಿನ ಭೌಗೋಲಿಕ ಅಭ್ಯಾಸವನ್ನು ಮಾಡಲಿಕ್ಕೆ ಸುಲಭವಾಗುತ್ತದೆ. ಯಾಕಂದರೆ ಮನುಷ್ಯ ಪ್ರಾಣಿಯ ಜೀವನ ಕ್ರಮವು ಸಸ್ಯಾದಿಗಳ ಮೇಲೆ ಬಹಳವಾಗಿ ಅವಲಂಬಿಸಿರುತ್ತದೆ.

ಯಾವದೇ ಪ್ರದೇಶವನ್ನು ನಿರೀಕ್ಷಿಸಿದರೂ, ಅದರೊಳಗೆ ವನಸ್ಪತಿ ವರ್ಗದ ಒಂದು ವಿಶಿಷ್ಟವಾದ ಪಟ್ಟಿಯು ಮುಗಿದು, ಕೂಡಲೆ ಎರಡನೇ ಪ್ರಕಾರದ ಪಟ್ಟಿಯು ಆರಂಭವಾಗುತ್ತದೆಂಬ ಮಾತು ಎಲ್ಲಿಯೂ ಕಂಡು ಬರಲಾರದು; ವನಸ್ಪತಿ ವರ್ಗಗಳ ಸಮೀಪದಲ್ಲಿರುವ ಭಾಗಗಳಲ್ಲಿ ಒಮ್ಮೆಲೇ ಬದಲಾಗುವದಿಲ್ಲ. ಎತ್ತರವಾದ ಮತ್ತು ದಟ್ಟವಾದ ಗಿಡಗಳ ಅರಣ್ಯಗಳು ಒಮ್ಮೆಲೆ ಮುಗಿದು ಹುಲ್ಲುಗಾವಲುಗಳ ಪ್ರದೇಶಗಳು ಒಮ್ಮೆಲೆ ಆರಂಭವಾಗುವದಿಲ್ಲ. ದಟ್ಟವಾದ ಅರಣ್ಯಗಳಾದ ತರುವಾಯ ವಿರಲವಾದ ಅರಣ್ಯಗಳು, ಆಮೇಲೆ ಗಿಡಗಳ ಮತ್ತು ಹುಲ್ಲುಗಳ ಮಿಶ್ರಣವು, ಮತ್ತು ಆಮೇಲೆ ಕೇವಲ ಹುಲ್ಲು ಬೆಳೆಯುವ ಪ್ರದೇಶಗಳು ಕ್ರಮದಿಂದ ಬರುತ್ತವೆ.

ಹವಾಮಾನದಂತೆಯೇ ವನಸ್ಪತಿಗಳ ವರ್ಗಗಳಾದರೂ ಕೆಳಗಿನಂತೆ ಕಂಡುಬರುತ್ತವೆ. ಅವುಗಳೊಳಗಿನ ವನಸ್ಪತಿಗಳ ಅಭ್ಯಾಸವನ್ನು ಅತಿ ವಿವೇಚನೆಯಿಂದ ಮಾಡದೆ ಪ್ರತಿಯೊಂದು ವರ್ಗದ ಸಾಮಾನ್ಯ ಸ್ವರೂಪಗಳ ಬಗ್ಗೆ ಮಾತ್ರ ನಮಗೆ ನೋಡತಕ್ಕದ್ದಿರುತ್ತದೆ.

ಸಸ್ಯಾದಿಗಳನುಸಾರವಾಗಿ ಅರಣ್ಯಗಳು, ಹುಲ್ಲುಗಾವಲುಗಳು ಮತ್ತು ಮರುಭೂಮಿಗಳೆಂದು ಮೂರು ಮುಖ್ಯವಾದ ಪ್ರದೇಶಗಳಿದ್ದು, ಅವುಗಳೊಳಗೆ

ಮತ್ತೆ ಬೇರೆ ಬೇರೆ ಪ್ರಕಾರಗಳನ್ನು ಸಹ ಮಾಡಬಹುದು. ಮರುಭೂಮಿಗಳು ಉಷ್ಣ ಕಟಿಬಂಧದಲ್ಲಿರುತ್ತವೆ; ಅದರಂತೆ ಅವು ಶೀತ ಕಟಿಬಂಧದಲ್ಲಿಯೂ ಇರುವವು. ಇದರಿಂದ ಮರುಭೂಮಿಯಲ್ಲಿ ಉಷ್ಣ ಮತ್ತು ಶೀತವೆಂಬ ಎರಡು ಪ್ರಕಾರಗಳಾಗುವವು. ಮುಳ್ಳುಗಂಟಿಗಳುಳ್ಳ ಮರಡಿಗಳು ಮತ್ತು ಗಿಡ್ಡಹುಲ್ಲಿನ ಮಿಶ್ರ ಪ್ರದೇಶಗಳು ಎಂಬ ಎರಡು ಪ್ರಕಾರಗಳನ್ನು ಮಾಡಬಹುದು. ಈ ಮುಖ್ಯವಾದ ಭೇದಗಳ ಬಗ್ಗೆಯೂ ಅವುಗಳೊಳಗಿನ ಬೇರೆ ಬೇರೆ ಉಪ ಭೇದಗಳ ಬಗ್ಗೆಯೂ ಸಂಕ್ಷಿಪ್ತ ವರ್ಣನೆಯನ್ನು ಈ ಪ್ರಕರಣದೊಳಗೆ ಕೊಟ್ಟಿರುತ್ತದೆ.

**(೧) ವಿಷುವ-ವೃತ್ತದ ಮೇಲಿನ ಮತ್ತು ಮಾನ್ಸೂನ ಪ್ರದೇಶದೊಳಗಿನ ಅರಣ್ಯಗಳು:**—ಈ ಪ್ರಕಾರದ ಅರಣ್ಯಗಳೊಳಗೆ ಅತಿ ಉನ್ನತವಾದ ವೃಕ್ಷಗಳೂ ಬಳ್ಳಿಗಳೂ ದಟ್ಟಾಗಿ ಬೆಳೆದು ಜಾಳಿಗೆಯಂತೆ ಹಬ್ಬಿರುತ್ತವೆ. ಗಿಡಗಳ ಬೊಡ್ಡೆಗಳ ಹತ್ತರ ಎಷ್ಟೋ ತರದ ಕಂಟಿಗಳು ಬೆಳೆಯುತ್ತವೆ. ಇವೆಲ್ಲವುಗಳು ಕೂಡಿ ಬಹಳ ದಟ್ಟಾಗಿ ಬೆಳೆಯುವದರಿಂದ, ಮನುಷ್ಯನಿಗೆ ಇಂಥ ಅರಣ್ಯಗಳಲ್ಲಿ ದಾರಿಗಳನ್ನು ಮಾಡುವದು ಕೂಡ ಅಶಕ್ಯವಾಗಿರುತ್ತದೆ. ಈ ಅರಣ್ಯಗಳೊಳಗಿನ ಎಷ್ಟೋ ಗಿಡಗಳು ತಮ್ಮ ಎಲೆಗಳನ್ನು ಉದುರಿಸುತ್ತವೆ. ಇಂಥ ಗಿಡಗಳಿಗೆ 'ಎಲೆಗಳುದುರುವ ವೃಕ್ಷ'ಗಳೆಂದೆನ್ನುತ್ತಾರೆ. ಆದರೂ ಈ ಅರಣ್ಯಗಳು ಒಟ್ಟಿನ ಮೇಲೆ ಯಾವಾಗಲೂ ಹಸರು ಮುರಿಯುತ್ತಿರುತ್ತವೆ. ಅಲ್ಲಿ ಎಷ್ಟೋ ತರದ ಗಿಡಗಳಿರುತ್ತವೆ. ಈ ಗಿಡಗಳ ಕಟ್ಟಿಗೆಯು ಬಿರುಸಾಗಿದ್ದು, ಹಲವು ಗಿಡಗಳಿಂದ ಬೇರೆ ಬೇರೆ ತರದ ಬಣ್ಣಗಳನ್ನು ಮಾಡಲಿಕ್ಕೆ ಬರುತ್ತದೆ. ಎಷ್ಟೋ ಗಿಡಗಳಿಂದ ಮತ್ತು ಬಳ್ಳಿಗಳಿಂದ ರಬ್ಬರದಂಥ ಹಾಲು ಸಿಗುತ್ತದೆ. ಈ ಅರಣ್ಯಗಳೊಳಗೆ ಎಷ್ಟೋ ಜಾತಿಯ ತಾಡವೃಕ್ಷಗಳೂ, ಬಿದುರು ಮತ್ತು ಬೆತ್ತಗಳೂ ಸಿಗುತ್ತವೆ. ವಿಷುವ-ವೃತ್ತದ ಮೇಲಿನ ಹನ್ನೆರಡೂ ತಿಂಗಳು ಮಳೆಯಾಗುವ ಪಟ್ಟಿಯಲ್ಲಿಯೂ, ಬೇಸಿಗೆಯ ಮಳೆಯ ಪ್ರಮಾಣವು ೬೦ ಇಂಚಿಗಿಂತ ಹೆಚ್ಚಾಗಿರುವ ಪ್ರದೇಶಗಳಲ್ಲಿಯೂ ಈ ಅರಣ್ಯಗಳು ಕಂಡುಬರುತ್ತವೆ. ಯಾಕಂದರೆ ಇಂಥ ಪ್ರದೇಶದೊಳಗೆ ಮಳೆಯಿಂದ ಭೂಮಿಯೊಳಗೆ ಯಾವಾಗಲೂ ಹಸಿಯು ಇರುತ್ತದೆ. ಭೂಮಿಯಲ್ಲಿರುವ ಈ ಆರ್ದ್ರತೆಯಿಂದ ಮತ್ತು ಹವೆಯೊಳಗಿನ ಸಾಕಷ್ಟು ಉಷ್ಣತೆಯಿಂದ ಗಿಡಗಳು ತೀವ್ರವಾಗಿ ಬೆಳೆದು, ದಟ್ಟವಾದ

ಅರಣ್ಯಗಳಾಗುತ್ತವೆ. ಈ ಅರಣ್ಯಗಳು ನೂರಾರು ಮೈಲುಗಳ ವರೆಗೆ ಅಖಂಡವಾಗಿ ಪಸರಿಸಿದ್ದು ಕಂಡುಬರುತ್ತದೆ.

**(೨) ಕರ್ಕ-ಮಕರ ವೃತ್ತಗಳ ನಡುವಿನ ಹುಲ್ಲುಗಾವಲಿನ ಪ್ರದೇಶಗಳು (ಸವ್ಹಾನಾ):**—ಈ ವೃತ್ತಗಳ ನಡುವಿನ ಪ್ರದೇಶದಲ್ಲಿ ಬೇಸಿಗೆಯೊಳಗೆ ೨೦ ರಿಂದ ೪೦ ಇಂಚಿನ ವರೆಗೆ ಮಳೆಯಾಗಿ, ಉಳಿದ ೮-೧೦ ತಿಂಗಳು ಒಣದಾಗಿರುವ ಭಾಗಗಳಲ್ಲಿ ಈ ಪ್ರಕಾರದ ಹುಲ್ಲುಗಾವಲುಗಳು ಕಂಡುಬರುತ್ತವೆ. ಭೂಮಿಯೊಳಗೆ ಒಂದೇ ಸವನೆ ಆರ್ದ್ರತೆಯು ಉಳಿಯುವದಿಲ್ಲವಾದ್ದರಿಂದ, ಅಲ್ಲಿ ಅರಣ್ಯಗಳು ನಿರ್ಮಾಣವಾಗುವದಿಲ್ಲ. ಎರಡು ಮೂರು ತಿಂಗಳು ಮಳೆಯಾಗುತ್ತದೆ. ಈ ಕಾಲಾವಧಿಯಲ್ಲಿ ಹುಲ್ಲಿನ ಆಯುಷ್ಯ ಕ್ರಮವು ಮುಗಿಯುತ್ತದೆ. ಮತ್ತು ಮಳೆಗಾಲದ ತರುವಾಯ ತೀವ್ರವೇ ಅದು ಸತ್ತು ಹೋಗಿ ಪ್ರದೇಶವೆಲ್ಲ ಭಣಭಣಿಸುತ್ತದೆ. ಈ ಪ್ರದೇಶದೊಳಗೆ ಆರ್ದ್ರತೆಯು ಹೆಚ್ಚು ಕಡಿಮೆ ಇದ್ದಂತೆ, ಅಲ್ಲಲ್ಲಿ ಒಂದರಿಂದ ಮೂರು ಆಳು ಎತ್ತರವಾದ ಹುಲ್ಲು ಬೆಳೆಯುತ್ತದೆ. ಒಣದಾದ ಭಾಗಗಳಲ್ಲಿ ಅದು ಗಿಡ್ಡಾಗಿರುವದಲ್ಲದೆ ಗಡ್ಡೆಯಾಗಿ ಬೆಳೆಯುತ್ತದೆ. ತಗ್ಗು ಪ್ರದೇಶಗಳಲ್ಲಿ ನಡುನಡುವೆ ಗಿಡಗಳಾದರೂ ದೃಷ್ಟಿಗೆ ಬೀಳುತ್ತವೆ. ಆದರೆ ಅವು ಒಂದೊಂದೇ ಇಲ್ಲವೇ ಗುಂಪುಗುಂಪುಗಳಾಗಿ ಬೆಳೆದದ್ದು ಕಂಡು ಬರುತ್ತವೆ. ಅವು ಬಹಳ ಎತ್ತರ ಬೆಳೆಯುವದಿಲ್ಲ. ಅವುಗಳಲ್ಲಿ ಬೇರೆ ಬೇರೆ ತರದ ತಾಡವೃಕ್ಷಗಳೂ, ಯುಕಲಿಪ್ಟಸ್, ಆಕೇಶಿಯಾ ಮತ್ತು ಬಾಹಿಬಾಬ ವೃಕ್ಷಗಳೂ ಕಂಡುಬರುತ್ತವೆ.

ಅತಿ ರುಕ್ಷವಾದ ಭಾಗದಲ್ಲಿ ದಟ್ಟಾದ ಮುಳ್ಳುಗಂಟಿಗಳು ಬೆಳೆಯುತ್ತವೆ. ಸವ್ಹಾನಾದೊಳಗೆ ಬೆಳೆಯುವ ಯಾವತ್ತೂ ವನಸ್ಪತಿಗಳಲ್ಲಿಯು ಗಿಡಗಳೊಳಗಿನ ರಸವು ಆರಬಾರದೆಂದು ಎಲೆಗಳಲ್ಲಿ ಇಲ್ಲವೆ ಬೊಡ್ಡೆಗಳಲ್ಲಿ ನೀರಿನ ಸಂಗ್ರಹವನ್ನು ಮಾಡಲು ಅನುವಾಗಿರುವ ಯೋಜನೆಗಳು ಮಾಡಲ್ಪಟ್ಟಿರುತ್ತವೆ. ಗಿಡಗಳ ಎಲೆಗಳು ಉದುರುವದರಿಂದ ಮತ್ತು ಅವುಗಳ ಮೈಮೇಲಿರುವ ಎಣ್ಣೆಯಂಥ ಪದಾರ್ಥದಿಂದ ಇಲ್ಲವೆ ಅಂಟಿನಂಥ ಜಿಗುಟು ಪದಾರ್ಥದಿಂದ ಬಾಷ್ಪೀಭವನವು ತೀವ್ರವಾಗಿ ಸಾಗುವದಿಲ್ಲ. ಮತ್ತು ಬೇರೆ ಕೆಲವು

ಗಿಡಗಳಿಗೆ ಅಗಲವಾದ ಮತ್ತು ಡಮರುವಿನ ಆಕಾರದ ಬೊಡ್ಡೆಗಳಿದ್ದು ಅವುಗಳಲ್ಲಿ ನೀರನ್ನು ಸಂಗ್ರಹಿಸಲಿಕ್ಕೆ ಅನುಕೂಲವಾಗಿರುತ್ತದೆ.

**(೩) ಮರುಭೂಮಿಯೊಳಗಿನ ವನಸ್ಪತಿಗಳು:**—ಮರುಭೂಮಿಗಳ ಬೈಲುಗಳು ಕರ್ಕ ಮತ್ತು ಮಕರ ವೃತ್ತಗಳ ಸುತ್ತಮುತ್ತಲೂ ಪಸರಿಸಿರುತ್ತವೆ. ಕೆಲವು ಕಡೆಯಲ್ಲಿ ಬಹಳವಾದರೆ ೧೦ ಇಂಚಿನ ವರೆಗೆ ಮಳೆಯಾಗುತ್ತದೆ. ಎಷ್ಟೋ ಕಡೆಯಲ್ಲಿ ಮಳೆಯ ಹನಿಯು ಸಹ ಬೀಳುವದಿಲ್ಲ. ಏಶಿಯಾ ಖಂಡದೊಳಗೆ ಸಮಶೀತೋಷ್ಣ ಕಟಿಬಂಧದೊಳಗೆ ಸಹ ಇಂಥ ಪ್ರದೇಶಗಳಿರುತ್ತವೆ. ಯಾಕಂದರೆ ಅವು ಖಂಡದ ಅಂತರ್ಭಾಗದೊಳಗೆ ಇರುವದರಿಂದ ಅಲ್ಲಿಯ ಹವೆಯು ತೀರ ಒಣದಾಗಿರುತ್ತದೆ. ಸ್ಥಳಾಂತರ ಮಾಡುವ ಉಸುಬಿನ ದಿನ್ನೆಗಳಿದ್ದ ಭಾಗಗಳಲ್ಲಂತೂ ನೂರಾರು ಮೈಲುಗಳ ವರೆಗೆ ಸಹ ವನಸ್ಪತಿಗಳು ದೃಷ್ಟಿಗೆ ಬೀಳುವದಿಲ್ಲ. ಕ್ವಚಿತ್ತ ಸ್ಥಳದಲ್ಲಿ ದೂರ ದೂರದ ಮೇಲಿರುವ ಕಂಟಿಗಳು ಮಾತ್ರ ಅಪರೂಪವಾಗಿ ದೃಷ್ಟಿಗೆ ಬೀಳುತ್ತವೆ. ಒಂದು ವೇಳೆ ತುಸು ಮಳೆಯಾದರೆ ಈ ಕಂಟಿಗಳ ಮೇಲೆ ಎಲೆ, ಹೂ, ಕಾಯಿಗಳು ಅತಿ ಅಲ್ಪ ಕಾಲದಲ್ಲಿ ಆಗಿ, ಒಂದೆರಡು ವಾರಗಳಲ್ಲಿ ಅವು ಇಲ್ಲದಂತಾಗುತ್ತವೆ. ಇಂಥ ಉಸುಬಿನ ಅರಣ್ಯಗಳಲ್ಲಿ ಎಷ್ಟೋ ತರದ ಡಬಗಳ್ಳಿಗಳು ದೃಷ್ಟಿಗೆ ಬೀಳುತ್ತವೆ. ಅವುಗಳ ಮೇಲೆ ಮುಳ್ಳುಗಳಿದ್ದು ಅವುಗಳಿಗೆ ಎಲೆಯ ಬದಲು ದಪ್ಪಾದ ಮತ್ತು ಮಗಜುಳ್ಳ ಬೇರೆ ಬೇರೆ ಆಕಾರದ ರಪ್ಪೆಗಳಿರುತ್ತವೆ. ನೀರನ್ನು ಸಂಗ್ರಹಿಸಿಡಲಿಕ್ಕೆ ಅವು ಗಿಡಗಳಿಗೆ ಉಪಯೋಗವಾಗುತ್ತವೆ. ಮುಳ್ಳುಗಳ ಪೃಷ್ಠಭಾಗವು ಎಲೆಗಳ ಪೃಷ್ಠಭಾಗಗಳಿಗಿಂತ ತೀರ ಸಣ್ಣವಾಗಿರುವದರಿಂದ ಅವು ಗಿಡದೊಳಗಿನ ನೀರನ್ನು ತೀವ್ರವಾಗಿ ಭಾಷ್ಪೀಭವನ ಮಾಡಗೊಡುವದಿಲ್ಲ. ಸಣ್ಣ ಗಿಡಗಳಿಗೆ ರಾತ್ರಿಯಲ್ಲಿ ಬೀಳುವ ಇಬ್ಬನ್ನಿಯಿಂದ ಸಿಗುವ ಆರ್ದ್ರತೆಯು ಸಾಕಾಗುತ್ತದೆ. ಉಸುಬಿನ ಮರುಭೂಮಿಯಲ್ಲಿ (ಅರಣ್ಯದಲ್ಲಿ) ಭೂಪೃಷ್ಠದ ಹತ್ತರ ನೀರಿನ ಹಸಿಯು ಇದ್ದರೆ (ಓಯಾಸಿಸ್) ಅಥವಾ ಯಾವದಾದರೊಂದು ಹೊಳೆಯು ಉಸುಬಿನ ಅರಣ್ಯದಲ್ಲಿ ಗುಪ್ತವಾಗಿದ್ದರೆ, ಅಂಥ ಸ್ಥಳಗಳಲ್ಲಿ ಬೇರೆ ಪ್ರಕಾರದ ವನಸ್ಪತಿಗಳು ದೃಷ್ಟಿಗೆ ಬೀಳುತ್ತವೆ. ಅಂಥಲ್ಲಿ ಸಣ್ಣದೊಡ್ಡ ಗಿಡಗಳೂ, ಕಂಟಿಗಳೂ, ಇಲ್ಲವೆ ಹುಲ್ಲೂ ಬೆಳೆಯುತ್ತವೆ. ಇಂಥ ಭಾಗಗಳಿಗೆ ಅರ್ಧಮರ್ಧ ಮರುಭೂಮಿಗಳೆಂದೆನ್ನುತ್ತಾರೆ. ಅಥವಾ ಕಂಟಿಗಳ ಪ್ರದೇಶವೆಂದೂ ಅನ್ನ

ಬಹುದು. ಈ ತರದ ಅರ್ಧಮರ್ಧ ಮರುಭೂಮಿಗಳು ಯಾವಾಗಲೂ ಅರಣ್ಯಗಳಿಗೆ ಹೊಂದಿಯೇ ಇರುತ್ತವೆ. ಓಯಾಸಿಸ್ (ಉಸುಬಿನ ಅರಣ್ಯಗಳಲ್ಲಿಯ ಹಸರು ಹುಲ್ಲಿನ ಪ್ರದೇಶ)ದೊಳಗೆ ಕಿರಿಯಗಲಾದ ಗರಿಗಳುಳ್ಳ ಖರ್ಜೂರಿನ ಗಿಡಗಳು ಮತ್ತು ಹುಲ್ಲು ಬೆಳೆಯುತ್ತವೆ.

**(೪) ಸಮಶೀತೋಷ್ಣ ಕಟಿಬಂಧದೊಳಗಿನ ಹುಲ್ಲುಗಾವಲದ ಪ್ರದೇಶಗಳು:**—ಬೇಸಿಗೆಯಲ್ಲಿ ಹೆಚ್ಚಾದ ಉಷ್ಣತೆಯೂ ತಕ್ಕಮಟ್ಟಿಗೆ ಮಳೆಯೂ ಇದ್ದು, ಭೂಮಿಯಲ್ಲಿ ತುಸು ಹಸಿಯಾಗಿರುವಂಥ ಭಾಗಗಳಲ್ಲಿ ಈ ಹುಲ್ಲುಗಾವಲುಗಳ ಪ್ರದೇಶಗಳು ಪಸರಿಸಿರುತ್ತವೆ. ಈ ಪ್ರದೇಶಗಳು ಬೇರೆ ಬೇರೆ ಕಡೆಯಲ್ಲಿ ಬೇರೆ ಬೇರೆ ಹೆಸರುಗಳಿಂದ ಕರೆಯಲ್ಪಡುತ್ತವೆ. ದಕ್ಷಿಣ ಅಮೇರಿಕೆಯೊಳಗೆ ಅವುಗಳಿಗೆ 'ಪಂಪಾಸ' ಎಂತಲೂ, ಉತ್ತರ ಅಮೇರಿಕೆಯೊಳಗೆ ಮತ್ತು ಏಶಿಯಾದೊಳಗೆ ಅವುಗಳಿಗೆ 'ಸ್ಟೆಪ' ಎಂತಲೂ ಕರೆಯುತ್ತಾರೆ. ಈ ಹುಲ್ಲುಗಾವಲುಗಳ ಪ್ರದೇಶಗಳಲ್ಲಿ ಬಹುತರವಾಗಿ ಗಿಡಗಳು ಇರುವದೇ ಇಲ್ಲ. ಆದರೆ ಭೂಮಿಯಲ್ಲಿ ಹಸಿಯು ಇರುವದಿಲ್ಲೆಂದು ಗಿಡಗಳು ಬೆಳೆಯುವದಿಲ್ಲವಂತಲ್ಲ; ಭೂಮಿಯು ತೀರ ಪೊಳ್ಳಾಗಿರುವದರಿಂದ ಅದರೊಳಗೆ ತೇವು ಉಳಿಯುವದಿಲ್ಲ. ಆದ್ದರಿಂದ ಗಿಡಗಳು ಬೆಳೆಯುವದಿಲ್ಲ. ಹಲವು ಕಡೆಯಲ್ಲಿ ಬೆಳೆದ ಗಿಡಗಳು ವಡವಾಗ್ನಿಯಿಂದ ಭಸ್ಮವಾದದ್ದು ಕಂಡು ಬರುತ್ತವೆ. ಎಷ್ಟೋ ಕಡೆಯಲ್ಲಿ ಕಸುವಿನಿಂದ ಗಾಳಿಯು ಬೀಸುತ್ತಿರುವದರಿಂದ ಗಿಡಗಳು ಬೆಳೆಯುವದು ಅಥವಾ ಬಾಳುವದು ಅಶಕ್ಯವಾಗಿರುತ್ತದೆ. ಎಷ್ಟೋ ಕಡೆಯಲ್ಲಿ ಹುಲ್ಲು ಅತಿ ತೀವ್ರವಾಗಿ ಬೆಳೆಯುವದರಿಂದ ಸಣ್ಣ ಸಣ್ಣ ಗಿಡಗಳನ್ನು ಅದು ಬೆಳೆಯಗೊಡುವದಿಲ್ಲ. ಬೇಸಿಗೆಯ ಆರಂಭದಲ್ಲಿ ಹುಲ್ಲು ಹಚ್ಚಗೆ ಮುರಿಯುತ್ತಿರುತ್ತದೆ. ಮತ್ತು ಹೂಗಳಾಗಿರುವದರಿಂದ ಅದು ಬಹು ಮನೋಹರವಾಗಿ ಕಾಣುತ್ತದೆ. ಆದರೆ ಆ ಬಳಿಕ ತುಸು ದಿವಸಗಳಲ್ಲಿಯೇ ಅದರ ಈ ವೈಭವವು ನಷ್ಟವಾಗಿ ಅದೆಲ್ಲ ಒಣಗಿ ನಿಲ್ಲುತ್ತದೆ.

**(೫) ಸಮಶೀತೋಷ್ಣ ಕಟಿಬಂಧದೊಳಗಿನ ಅಗಲವಾದ ಎಲೆಗಳುಳ್ಳ ಗಿಡಗಳ ಅರಣ್ಯಗಳು:**—ಹನ್ನೆರಡೂ ತಿಂಗಳು ಮಳೆಯಾಗುವ ಪ್ರದೇಶದೊಳಗೆ ಈ ಅರಣ್ಯಗಳು ಕಂಡುಬರುತ್ತವೆ. ಮಳೆಯ ಪ್ರಮಾಣವು ಏನಿಲ್ಲೆಂದರೂ ೨೫ ಇಂಚಿನ ವರೆಗೆ ಇರಬೇಕಾಗುತ್ತದೆ. ಮತ್ತು ಚಳಿಗಾಲದೊಳಗೆ ಗಿಡಗಳ ಶೋಷಣ ಕ್ರಿಯೆಯು ನಿಲ್ಲಬೇಕಾಗುತ್ತದೆ.

ಇಲ್ಲದಿದ್ದರೆ ಚಳಿಗಾಲದೊಳಗೆ ಅವುಗಳಿಗೆ ವಿಶ್ರಾಂತಿಯು ದೊರೆಯಲಾರದು. ಬಹುತರ ಎಲ್ಲ ಗಿಡಗಳು ತಮ್ಮ ಎಲೆಗಳನ್ನು ಉದುರಿಸುತ್ತವೆ. ಆದ್ದರಿಂದ ಅವುಗಳಿಗೆ 'ಎಲೆಗಳುದುರುವ' ಗಿಡಗಳ ಅರಣ್ಯಗಳೆಂದು ಕರೆಯುತ್ತಾರೆ. ಇಂಥ ಗಿಡಗಳಲ್ಲಿ ಓಕ, ಬೀಚ, ಅಪಲ ಎಂಬ ವೃಕ್ಷಗಳು ಮುಖ್ಯವಾದವುಗಳು. ಈ ಅರಣ್ಯಗಳಲ್ಲಿ ವಿಷುವ-ವೃತ್ತದ ಮೇಲಿನ ಅರಣ್ಯದೊಳಗಿನ ಗಿಡಗಳಂತೆ ನಾನಾತರದ ವೃಕ್ಷಗಳು ಬೆರೆತಿರುವದಿಲ್ಲ. ಯಾವತ್ತೂ ಅರಣ್ಯವು ಒಂದೆರಡು ಜಾತಿಯ ವೃಕ್ಷಗಳಿಂದಲೇ ತುಂಬಿರುತ್ತವೆ. ಇದಲ್ಲದೆ ಈ ಗಿಡಗಳ ಮೇಲೆ ತರತರದ ಬಣ್ಣದ ಹೂ-ಕಾಯಿಗಳು ದೃಷ್ಟಿಗೆ ಬೀಳುವದಿಲ್ಲ. ವಿಶೇಷತಃ ಬೀಚ ವೃಕ್ಷಗಳ ಅರಣ್ಯದೊಳಗೆ ಗಿಡಗಳ ಕೆಳಗೆ ಕಂಟಿ ಮುಂತಾದವುಗಳು ಬಹಳವಾಗಿ ಬೆಳೆಯುವದಿಲ್ಲ. ಗಿಡಗಳ ಜಾತಿ, ಹೂ, ಕಂಟಿಗಳ ವಿಷಯದಲ್ಲಿ ಈ ಅರಣ್ಯಕ್ಕೂ ವಿಷುವ-ವೃತ್ತದ ಮೇಲಿರುವ ಅರಣ್ಯಕ್ಕೂ ಬಹಳ ಅಂತರವಿರುತ್ತದೆ.

(೬) **ಸೂಚಿಪರ್ಣ ಅಥವಾ ಶಂಕ್ವಾಕೃತಿ ವೃಕ್ಷಗಳ ಅರಣ್ಯಗಳು:**—ತೀರ ಕಡಿಮೆ ಮಳೆಯಾಗುವ ಮತ್ತು ಅತಿ ಶೀತವಾಗಿರುವ ಚಳಿಗಾಲವಿರುವಂಥ ಸಮಶೀತೋಷ್ಣ ಕಟಿಬಂಧದೊಳಗಿನ ಭಾಗಗಳಲ್ಲಿ ಇಂಥ ಅರಣ್ಯಗಳು ಕಂಡುಬರುತ್ತವೆ. ಉಚ್ಛ್ವಾಸ ಕ್ರಿಯೆಯು ಭರದಿಂದ ಸಾಗಬಾರದೆಂದು ನಿಸರ್ಗವು ಅದರೊಳಗಿನ ಗಿಡಗಳಿಗೆ ದಬ್ಬಣದಂಥ ಎಲೆಗಳನ್ನು ಕೊಟ್ಟಿರುತ್ತದೆ. ಚಳಿಗಾಲದೊಳಗೆ ಎಲೆಗಳನ್ನುದುರಿಸುವ ಗಿಡಗಳು ತೀರ ಅಪರೂಪ. ಚಳಿಗಾಲವು ದೀರ್ಘಕಾಲದ ವರೆಗೆ ಇರುವದರಿಂದ ಗಿಡಗಳಿಗೆ ಆ ಋತುವಿನಲ್ಲಿ ಪೂರ್ಣ ವಿಶ್ರಾಂತಿಯನ್ನು ಹೊಂದುವದು ಶಕ್ಯವಿಲ್ಲ. ಶ್ವಾಸೋಚ್ಛ್ವಾಸವು ಸಾಗುವದಕ್ಕೋಸ್ಕರ ಅವುಗಳ ಮೇಲೆ ಯಾವಾಗಲೂ ಎಲೆಗಳಿರಬೇಕಾಗುತ್ತವೆ. ಅದರಂತೆ ಅವುಗಳಿಗೆ ಬೇಸಿಗೆಯೊಳಗಿನ ಉಷ್ಣತೆಯನ್ನು ಆದಷ್ಟು ಹೆಚ್ಚಾಗಿ ಉಪಯೋಗ ಮಾಡಿಕೊಳ್ಳಬೇಕಾಗುತ್ತದೆ. ಪಾಯಿನ್, ಫರ್, ಲಾರ್ಚ, ಹೆಮ್‌ಲಾಕ ಮುಂತಾದ ಗಿಡಗಳು ಈ ಪ್ರಕಾರದ ಅರಣ್ಯದೊಳಗಿನ ಮುಖ್ಯವಾದ ವೃಕ್ಷಗಳಾಗಿರುತ್ತವೆ. ಲಾರ್ಚ ಮತ್ತು ಬರ್ಚ ವೃಕ್ಷಗಳು ಸೂಚಿಪರ್ಣಗಳಾಗಿದ್ದು ಅವು ಚಳಿಗಾಲದೊಳಗೆ ಎಲೆಗಳನ್ನುದುರಿಸುತ್ತವೆ. ಮತ್ತು ಅವುಗಳಿಗೆ ಶಂಕ್ವಾಕೃತಿಯಾದ ಕಾಯಿಗಳಾಗುವದಿಲ್ಲ. ಉಳಿದ ಸೂಚಿಪರ್ಣವೃಕ್ಷಗಳಿಗೆ ಅಂಥ ಕಾಯಿಗಳಾಗು

ತ್ತವೆ. ಮತ್ತು ಆ ವೃಕ್ಷಗಳ ಆಕಾರವಾದರೂ ಶಂಕ್ವಾಕೃತಿಯಾಗಿರುತ್ತದೆ. ಆದ್ದರಿಂದ ಅವುಗಳಿಗೆ 'ಶಂಕ್ವಾಕೃತಿ' ವೃಕ್ಷಗಳೆಂಬ ಹೆಸರನ್ನು ಕೊಟ್ಟಿದೆ. ಅಗಲ ಎಲೆಗಳ ವೃಕ್ಷಗಳ ಅರಣ್ಯಗಳಲ್ಲಿ ಸಹ ಕೆಲವು ಕಡೆಯಲ್ಲಿ ಸೂಚಿಪರ್ಣಿ ವೃಕ್ಷಗಳು ಕಂಡುಬರುತ್ತವೆ. ಅಲ್ಲಿ ಅವು ಅಷ್ಟು ಎತ್ತರ ಬೆಳೆಯುವದಿಲ್ಲ. ಉತ್ತರ ಅಮೇರಿಕೆಯೊಳಗೆ ಕೋಲಂಬಿಯಾದೊಳಗೆ ಬೆಳೆಯುವ ಡಗ-ಲಸ್ ಫರ್ ಎಂಬ ಅಜಸ್ರವಾದ ಗಿಡವು ಸೂಚಿಪರ್ಣಿ ವರ್ಗಕ್ಕೆ ಸೇರಿರುತ್ತದೆ. ಮಧ್ಯ ಯುರೋಪದೊಳಗಿನ ಗುಡ್ಡಗಳ ಮೇಲೆ ಅಥವಾ ತಂಪು ಹವೆಯ ತಪ್ಪಲಿನ ಮೇಲೆ ಸೂಚಿಪರ್ಣಿ ವೃಕ್ಷಗಳು ಕಂಡುಬರುತ್ತವೆ.

**(೭) ಸದಾ-ಹರಿತ ಸದಾಪರ್ಣಿ ವೃಕ್ಷಗಳೂ ಕಂಟಿಗಳೂ:—** ಭೂಮಧ್ಯ ಸಮುದ್ರದೊಳಗಿನ ಮತ್ತು ಅದರ ಸುತ್ತಮುತ್ತಲಿನ ಪ್ರದೇಶದೊಳಗೆ ಈ ಪ್ರಕಾರದ ವನಸ್ಪತಿಗಳು ಕಂಡುಬರುತ್ತವೆ. ಇಲ್ಲಿ ಬೇಸಿಗೆಯು ಒಣದಾಗಿದ್ದು ಚಳಿಗಾಲದಲ್ಲಿ ಮಳೆಯಾಗುತ್ತದೆ. ಭೂಮಿಯೊಳಗಿನ ತೇವನ್ನು ವೈಯೊಳಗೆ ಕಾದಿಡಲಿಕ್ಕೆ ಬರಬೇಕೆಂದು ಇಲ್ಲಿಯ ಗಿಡಗಂಟಿಗಳಿಗೆ ನೈಸರ್ಗಿಕವಾಗಿಯೇ ಕೆಲವು ಸಂಗತಿಗಳು ದಯಪಾಲಿಸಲ್ಪಟ್ಟಿರುತ್ತವೆ. ಸದಾಹರಿತ (ಯಾವಾಗಲೂ ಹಸರಿರುವ) ಗಿಡಗಳು ಅಷ್ಟು ಹಬ್ಬುವದಿಲ್ಲ. ಅವುಗಳ ಎಲೆಗಳು ಬಿರುಸಾಗಿರುತ್ತವೆ. ಮತ್ತು ಕೆಲವು ಎಲೆಗಳ ಮೇಲೆ ಜಿಗಿಯು ಇರುತ್ತದೆ. ಅವುಗಳ ಬೇರುಗಳು ನೆಲದೊಳಗೆ ದೂರದ ವರೆಗೆ ಹೋಗುತ್ತವೆ. ಕೆಲವು ಗಿಡಗಳ ಎಲೆಗಳು ಹಿಂದೆ ಬಗ್ಗಿರುತ್ತವೆ. ಹುಲ್ಲಿನ ಬದಲು ಹೂ ಗಿಡಗಳೂ ಮತ್ತು ಸಣ್ಣ ಸಣ್ಣ ಕಂಟಿಗಳೂ ಬೆಳೆಯುತ್ತವೆ.

ಯಾವತ್ತು ಗಿಡಗಳ ಬಣ್ಣವು ಹಚ್ಚಗೂ ಕಂದೀ ಬಣ್ಣದ್ದೂ ಇರುತ್ತದೆ. ಮಳೆಯು ಹೆಚ್ಚಾಗಿ ಆಗುವ ಸ್ಥಳಗಳಲ್ಲಿ ಕಾಕ-ಓಕಗಳಂಥ ವೃಕ್ಷಗಳ ಅರಣ್ಯಗಳು ಕಂಡುಬರುತ್ತವೆ. ಚಳಿಗಾಲದ ಮಳೆಯಾಗುವ ಪ್ರದೇಶದಲ್ಲಿ ಆಲ್ಹಿವ ಮತ್ತು ಮರ್ಟಲ್ ಎಂಬ ವೃಕ್ಷಗಳು ಬೆಳೆಯುತ್ತವೆ. ಇದಲ್ಲದೆ ಈ ಪ್ರದೇಶದೊಳಗೆ ದ್ರಾಕ್ಷೆ, ಅಂಜೂರಿ, ನಿಂಬೆ, ಬದಾಮು ಮುಂತಾದ ಹಣ್ಣುಗಿಡಗಳು ಸಹ ಬೆಳೆಯುತ್ತವೆ.

(೮) ಟಂಡ್ರಾ ಮತ್ತು ಹಿಮಾಚ್ಛಾದಿತವಾದ ಮರುಭೂಮಿಗಳು :—ಬೇಸಿಗೆಯಲ್ಲಿ ಉಷ್ಣತಾಮಾನವು ೬೦ ಅಂಶಕ್ಕಿಂತ ಕಡಿಮೆ ಇದ್ದಂಥ ಮತ್ತು ಮಳೆಯಾಗದೆ ಹಿಮ ಬೀಳುವಂಥ ಧ್ರುವ ಪ್ರದೇಶದೊಳಗೆ ಈ ಪ್ರಕಾರವು ಕಂಡುಬರುತ್ತದೆ. ಟಂಡ್ರಾ ಪ್ರದೇಶದೊಳಗೆ ನೆಲದ ಮೇಲೆ ಹಿಮವು ಬಹಳ ಆಳಿನ ವರೆಗೆ ಹೆಪ್ಪುಗಟ್ಟಿರುತ್ತದೆ. ಮತ್ತು ಪೃಷ್ಠ ಭಾಗದ ಮೇಲಿನ ಬರ್ಫವು ಬೇಸಿಗೆಯಲ್ಲಿ ಮಾತ್ರ ಕರಗುತ್ತದೆ. ಟಂಡ್ರಾದ ಉತ್ತರ ಭಾಗದೊಳಗೆ ಹಾವಸೆಯು ಮತ್ತು ಲಿಚನ್‌ವು ಬೆಳೆಯುತ್ತವೆ. ದಕ್ಷಿಣ ಭಾಗದೊಳಗೆ ಅತಿ ಜಿಗುಟಾದ ಕಂಟಿಗಳು ಬೆಳೆಯುತ್ತವೆ. ತಗ್ಗಾದ ಮತ್ತು ಹಸರುಳ್ಳ ಸ್ಥಳದೊಳಗೆ ಬೇಸಿಗೆಯಲ್ಲಿ ಹೂ-ಗಿಡಗಳು ಬೆಳೆಯುತ್ತವೆ. ಇವುಗಳ ಹೊರ್ತು ಈ ಪ್ರದೇಶದೊಳಗೆ ಬೇರೆ ವನಸ್ಪತಿಗಳು ಕಂಡು ಬರುವದಿಲ್ಲ. ನೋಡಿದತ್ತೆಲ್ಲ ಹಿಮವೇ ಕಾಣುತ್ತದೆ. ಮತ್ತು ಬೇಸಿಗೆಯ ಹೊರ್ತಾಗಿ ಉಳಿದ ತಿಂಗಳುಗಳಲ್ಲಿ ಪ್ರಾಣಿ ವರ್ಗವು ಅಪರೂಪವಾಗಿ ದೃಷ್ಟಿಗೆ ಬೀಳುತ್ತದೆ.

(೯) ಪರ್ವತದ ಮೇಲಿನ ವನಸ್ಪತಿ ವರ್ಗಗಳು :—ಉನ್ನತವಾದ ಪರ್ವತದ ಅಡಿಯಿಂದ ಶಿಖರದ ಕಡೆಗೆ ಏರುತ್ತ ಹೋದ ಹಾಗೆ ಹವಾಮಾನವು ಬದಲಾಗುತ್ತದೆ. ಮತ್ತು ಅದರಂತೆ ವನಸ್ಪತಿ ವರ್ಗಗಳಲ್ಲಿ ಸಹ ಹೆಚ್ಚು ಕಡಿಮೆಯಾದದ್ದೂ ಕಂಡುಬರುತ್ತದೆ. ಅಡಿಯಲ್ಲಿ ಅಥವಾ ಅಡಿಯ ಹತ್ತರದ ಇಳುಕಲಿನ ಮೇಲೆ ಹೆಚ್ಚಾಗಿ ಮಳೆಯಾಗುವದರಿಂದ ಉಷ್ಣತಾಮಾನವು ಕಡಿಮೆಯಾಗುತ್ತದೆ. ಮೇಲಕ್ಕೆ ಹೋದ ಹಾಗೆ ವಿರಲವಾದ ಹವೆಯ ಮೂಲಕ ಮಳೆಯ ಪ್ರಮಾಣವು ಕಡಿಮೆಯಾಗುತ್ತದೆ. ಬಹಳ ಎತ್ತರದ ಮೇಲೆ ಹಿಮವು ಬೀಳುತ್ತದೆ. ಆದ್ದರಿಂದ ಅಲ್ಲಿ ಅರ್ಧ-ಮರ್ಧ ಮರು ಭೂಮಿಯು ಕಂಡು ಬರುತ್ತದೆ. ತೀರ ತಲೆಯ ಮೇಲೆ ನಿರಂತರವಾಗಿ ಹಿಮವಿರುವದರಿಂದ ಆ ಪ್ರದೇಶವು ತೀರ ಮರುಭೂಮಿಯೊಳಗೆ ಬರುತ್ತದೆ. ಪರ್ವತದ ಬಹು ಭಾಗದ ಮೇಲೆ ದಟ್ಟಾಗಿ ಬೆಳೆದ ಗಿಡಗಳಿರುತ್ತವೆ. ಉಷ್ಣಕಟಿಬಂಧದೊಳಗಿನ ಉನ್ನತವಾದ ಪರ್ವತದ ಮೇಲೆ ಅಡಿಯಿಂದ ಶಿಖರದ ವರೆಗೆ ಅನುಕ್ರಮವಾಗಿ ಕೆಳಗೆ ಕೊಟ್ಟ ವನಸ್ಪತಿಗಳು ಕಂಡುಬರುತ್ತವೆ. ಅಡಿಯಲ್ಲಿ ದಟ್ಟಾದ ಹಳವುಗಳು, ಬಳಿಕ ಸಮಶೀತೋಷ್ಣ ಕಟಿಬಂಧದೊಳಗಿನ ಅಗಲವಾದ ಎಲೆಗಳ ವೃಕ್ಷಗಳ ಅರಣ್ಯಗಳು

ಮುಂದೆ ಸೂಚಿಪರ್ಣ ವೃಕ್ಷಗಳು ಮತ್ತು ಅವುಗಳ ಆಚೆಯಲ್ಲಿ ಸಣ್ಣ ಸಣ್ಣ ಗಿಡಗಂಟೆಗಳು ಇರುತ್ತವೆ. ಹಿಮ ರೇಷೆಯ ಕೆಳಗೆ ಟಂಡ್ರಾದಂತೆ ಪ್ರದೇಶ ವಿರುತ್ತದೆ. ಅಲ್ಲಿ ಏನೂ ಬೆಳೆಯುವದಿಲ್ಲ. ಇದರ ಮೇಲಿಂದ ಕಂಡು ಬರುವದೇನಂದರೆ, ವಿಷುವ-ವೃತ್ತದಿಂದ ಧ್ರುವ ಪ್ರದೇಶಗಳ ಕಡೆಗೆ ಹೋಗು ವಾಗ ಕಂಡು ಬರುವ ವನಸ್ಪತಿಗಳ ಕ್ರಮದಂತೆಯೇ ವಿಷುವ-ವೃತ್ತದ ಮೇಲಿನ ಪರ್ವತದ ಅಡಿಯಿಂದ ಅದರ ಶಿಖರಕ್ಕೆ ಹೋಗುವಾಗ ಸಹ ಅವೇ ವನಸ್ಪತಿಗಳು ಅದೇ ಕ್ರಮದಿಂದ ಇದ್ದದ್ದು ಕಂಡು ಬರುತ್ತದೆ.

ಮುಖ್ಯವಾದ ವನಸ್ಪತಿ ವರ್ಗಗಳ ಬಗ್ಗೆ ಮೇಲೆ ವಿವರಿಸಿರುತ್ತದೆ. ಆದರೆ ಒಂದೇ ಸ್ವಾಭಾವಿಕ ವಿಭಾಗದೊಳಗೆ ಒಂದಕ್ಕಿಂತ ಹೆಚ್ಚು ವನಸ್ಪತಿ ವರ್ಗಗಳು ಇರಬಹುದು. ಖಂಡದ ಪೂರ್ವ ಪಶ್ಚಿಮ ಕರಾವಳಿಯ ಮೇಲಿನ ಭಾಗಗಳ ಹವಾಮಾನದೊಳಗೆ ಅಂತರವಿದ್ದಂತೆ ಅಲ್ಲಿ ಬೆಳೆಯುವ ವನಸ್ಪತಿಗಳಲ್ಲಿಯೂ ಕೂಡ ಅಂತರ ಬೀಳುವದು ಸ್ವಾಭಾ ವಿಕವಾಗಿರುತ್ತದೆ.